# ಮಲೆನಾಡು ಪ್ರದೇಶದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳ ಬೆಳವಣಿಗೆಗಳು

(ಶಿವಮೊಗ್ಗ ಜಿಲ್ಲೆಯನ್ನು ಅನುಲಕ್ಷಿಸಿ)

ಸಂಗೀತಶಾಸ್ತ್ರ ವಿಷಯದಲ್ಲಿ ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕ

ತೇಜಸ್ವಿ ಹೆಚ್.ಆರ್.

ಮಾರ್ಗದರ್ಶಕರು

ಡಾ. ಜ್ಯೋತಿಲಕ್ಷ್ಮಿ ಡಿ.ಪಿ.

ಮುಖ್ಯಸ್ಥರು, ಸಂಗೀತ ವಿಭಾಗ

ಎಸ್.ಜೆ.ಎಂ.ವ್ಹಿ.ಎಸ್. ಕಲಾ ಹಾಗೂ ವಾಣಿಜ್ಯ

ಮಹಿಳಾ ಮಹಾವಿದ್ಯಾಲಯ, ಹುಬ್ಬಳ್ಳಿ




ಲಲಿತ ಕಲಾ ನಿಕಾಯ

ಸಂಗೀತ ಮತ್ತು ನೃತ್ಯ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೯-೨೦

# ಮಲೆನಾಡು ಪ್ರದೇಶದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳ ಬೆಳವಣಿಗೆಗಳು

(ಶಿವಮೊಗ್ಗ ಜಿಲ್ಲೆಯನ್ನು ಅನುಲಕ್ಷಿಸಿ)

(ಸಂಗೀತಶಾಸ್ತ್ರ ವಿಷಯದಲ್ಲಿ ಪಿಹೆಚ್.ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕ

**ತೇಜಸ್ವಿ ಹೆಚ್.ಆರ್.**

ಮಾರ್ಗದರ್ಶಕರು

**ಡಾ. ಜ್ಯೋತಿಲಕ್ಷ್ಮಿ ಡಿ.ಪಿ.**

ಮುಖ್ಯಸ್ಥರು, ಸಂಗೀತ ವಿಭಾಗ

ಎಸ್.ಜೆ.ಎಂ.ವ್ಹಿ.ಎಸ್. ಕಲಾ ಹಾಗೂ ವಾಣಿಜ್ಯ

ಮಹಿಳಾ ಮಹಾವಿದ್ಯಾಲಯ, ಹುಬ್ಬಳ್ಳಿ






**ಲಲಿತ ಕಲಾ ನಿಕಾಯ**

ಸಂಗೀತ ಮತ್ತು ನೃತ್ಯ ವಿಭಾಗ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೧೯-೨೦

# ಮಾರ್ಗದರ್ಶಕರ ದೃಢೀಕರಣ ಪತ್ರ

ತೇಜಸ್ವಿ ಹೆಚ್.ಆರ್. ಅವರು "ಮಲೆನಾಡು ಪ್ರದೇಶದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳ ಬೆಳವಣಿಗೆಗಳು"(ಶಿವಮೊಗ್ಗ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಂಗೀತಶಾಸ್ತ್ರ ವಿಷಯದಲ್ಲಿ ಪಿಹೆಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಸಂಗೀತ ಮತ್ತು ನೃತ್ಯ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ: 29-11-2019.

ಸ್ಥಳ: ವಿದ್ಯಾರಣ್ಯ

(ಡಾ. ಜ್ಯೋತಿಲಕ್ಷ್ಮಿ ಡಿ.ಪಿ.)
ಮಾರ್ಗದರ್ಶಕರು
ಮುಖ್ಯಸ್ಥರು, ಸಂಗೀತ ವಿಭಾಗ
ಎಸ್.ಜೆ.ಎಂ.ವ್ಹಿ.ಎಸ್. ಕಲಾ ಹಾಗೂ ವಾಣಿಜ್ಯ
ಮಹಿಳಾ ಮಹಾವಿದ್ಯಾಲಯ, ಹುಬ್ಬಳ್ಳಿ

# ಪ್ರಮಾಣ ಪತ್ರ

"ಮಲೆನಾಡು ಪ್ರದೇಶದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳ ಬೆಳವಣಿಗೆಗಳು" (ಶಿವಮೊಗ್ಗ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಸಂಗೀತಶಾಸ್ತ್ರ ವಿಷಯದಲ್ಲಿ ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಹುಬ್ಬಳಿಯ ಎಸ್.ಜೆ.ಎಂ.ವ್ಹಿ.ಎಸ್. ಕಲಾ ಹಾಗೂ ವಾಣಿಜ್ಯ ಮಹಿಳಾ ಮಹಾವಿದ್ಯಾಲಯದ ಸಂಗೀತ ವಿಭಾಗದ ಮುಖ್ಯಸ್ಥರಾದ ಡಾ. ಜ್ಯೋತಿಲಕ್ಷ್ಮಿ ಡಿ.ಪಿ. ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿ ಇಲ್ಲವೇ ಇತರ ಉದ್ದೇಶಗಳಿಗೆ ಬಳಸಿ ಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ: 29-11-2019.

(ತೇಜಸ್ವಿ ಹೆಚ್.ಆರ್)
ಸಂಶೋಧಕ
ಸಂಗೀತ ಮತ್ತು ನೃತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ಪರಿವಿಡಿ

# ಮಲೆನಾಡು ಪ್ರದೇಶದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳ ಬೆಳವಣಿಗೆಗಳು

(ಶಿವಮೊಗ್ಗ ಜಿಲ್ಲೆಯನ್ನು ಅನುಲಕ್ಷಿಸಿ)

## ಪ್ರವೇಶ

"ಮಲೆನಾಡು ಪ್ರದೇಶದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳ ಬೆಳವಣಿಗೆಗಳು" (ಶಿವಮೊಗ್ಗ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬುದು ಈ ಅಧ್ಯಯನದ ಶೀರ್ಷಿಕೆಯಾಗಿದೆ. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆ ಹಾಗೂ ಅದರ ಗುಣ ಲಕ್ಷಣಗಳನ್ನು ಇಲ್ಲಿ ವಿವರಿಸಲಾಗಿದೆ. ಹಾಗೆಯೇ ಕರ್ನಾಟಕ ರಾಜ್ಯದ ಮಲೆನಾಡು ಪ್ರದೇಶದ ಶಿವಮೊಗ್ಗ ಜಿಲ್ಲೆಯಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳ ಉಗಮ ಹಾಗೂ ಅದರ ಬೆಳವಣಿಗೆಯ ಸವಿವರವನ್ನು ಪ್ರಸ್ತುತ ಈ ಅಧ್ಯಯನದಲ್ಲಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಗಾಯಕರಾಗಲಿ ಅಥವಾ ವಾದಕರಾಗಲಿ ಪ್ರತಿಯೊಂದು ರಾಗವನ್ನು ತಮ್ಮದೇ ಆದ ಶೈಲಿಯ ಮುಖಾಂತರವೇ ಆಯಾ ರಾಗದ ಲಕ್ಷಣಗಳೊಂದಿಗೆ ಪ್ರಸ್ತುತ ಪಡಿಸುತ್ತಾರೆ. ಶಿಷ್ಯರಾದವರು ತಮ್ಮ ಗುರುಗಳು ಹಾಕಿಕೊಟ್ಟ ಮಾರ್ಗದಲ್ಲಿಯೇ ಸಾಧನೆ ಮಾಡುತ್ತಾರೆ. ಗುರುವಿನ ಮಾರ್ಗದರ್ಶನದಿಂದ ಸಂಪೂರ್ಣವಾಗಿ ಅವರ ಶೈಲಿಯನ್ನೇ ಅನುಕರಣೆ ಮಾಡುತ್ತಾರೆ. ಇಲ್ಲಿ ಬೇರೆಯವರ ಶೈಲಿಯನ್ನು ಬೆರೆಸುವುದಿಲ್ಲ. ಹೀಗೆ ಗುರುಗಳಿಂದ ಶಿಷ್ಯರಿಗೆ, ಶಿಷ್ಯರಿಂದ ಅವರ ಶಿಷ್ಯರಿಗೆ ಅಥವಾ ಸಂಗೀತಗಾರನಾದ ತಂದೆಯಿಂದ ಮಕ್ಕಳಿಗೆ, ಮಕ್ಕಳಿಂದ ಮೊಮ್ಮಕ್ಕಳಿಗೆ ಬೆಳೆದು ಪ್ರಸಿದ್ಧಿಯನ್ನು ಹೊಂದುತ್ತಾ ಒಂದು ಸಂಗೀತದ ಪರಂಪರೆ, ಸಂಪ್ರದಾಯ ಅಥವಾ ಶೈಲಿಯು ಹುಟ್ಟಿಕೊಳ್ಳುತ್ತದೆ. ಇದನ್ನೇ 'ಘರಾಣೆ' ಎನ್ನಲಾಗಿದೆ.

ಈ ಘರಾಣೆಗಳು ಗುರು–ಶಿಷ್ಯರಿಂದ ಅಥವಾ ವಂಶಪರಂಪರೆಯಾಗಿ ಮುಂದುವರಿಯುತ್ತಾ, ಪ್ರಚಾರವಾಗುತ್ತವೆ. ಈ ಘರಾಣ ಎಂಬ ಶೈಲಿಯು ಒಂದೇ ರೀತಿ ಇರುವುದಿಲ್ಲ. ಶೈಲಿಗಳಲ್ಲಿ ಬೇರೆ

ಬೇರೆ ಪ್ರಕಾರಗಳಿವೆ. ಶೈಲಿಯ ಆಧಾರದ ಮೇಲೆ ಹಿಂದೂಸ್ಥಾನಿ ಸಂಗೀತ ಪದ್ಧತಿಯ ಗಾಯನ, ವಾದನದಲ್ಲಿ ಹಲವು ಬಗೆಯ ಸಂಪ್ರದಾಯಗಳು ಬೆಳೆದುಬಂದಿವೆ. ಇಂತಹ ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳು ಕರ್ನಾಟಕದ ಮಲೆನಾಡು ಪ್ರದೇಶದ ಶಿವಮೊಗ್ಗ ಜಿಲ್ಲೆಯಲ್ಲಿ ಹೇಗೆ ಜನ್ಮ ತಾಳಿತು? ಇದರ ಮೂಲ ಯಾರು? ಈ ಭಾಗದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಹೇಗೆ ಬೆಳೆಯಿತು? ಎಂಬುದನ್ನು ಸವಿವರದೊಂದಿಗೆ ಈ ಅಧ್ಯಯನದಲ್ಲಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

# ಅಧ್ಯಾಯ-೧

# ಪ್ರಸ್ತಾವನೆ

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ಮಹತ್ವ

೧.೪ ಅಧ್ಯಯನದ ವಿನ್ಯಾಸ ಮತ್ತು ವಿಧಾನ

೧.೫ ಅಧ್ಯಯನದ ಸ್ವರೂಪ

೧.೬ ಇದುವರೆಗಿನ ಅಧ್ಯಯನಗಳು

# ಅಧ್ಯಾಯ-೧

# ಪ್ರಸ್ತಾವನೆ

## ೧.೧. ಅಧ್ಯಯನದ ಉದ್ದೇಶ

ಶಾಸ್ತ್ರೀಯ ಸಂಗೀತವು ಭಾರತೀಯ ಸಂಗೀತದ ಒಂದು ಅವಿಭಾಜ್ಯ ಅಂಗ. ಜಾನಪದ, ಚಿತ್ರಪಟ, ರವೀಂದ್ರ ಸಂಗೀತ ಹಾಗೂ ರಂಗಸಂಗೀತಗಳಂತೆ ಶಾಸ್ತ್ರೀಯ ಸಂಗೀತಕ್ಕೂ ತನ್ನದೇ ಆದ ಒಂದು ವಿಶಿಷ್ಟವಾದ ಹಾಗೂ ವಿಭಿನ್ನವಾದ ಶೈಲಿಯಿದೆ.

ಕಲೆ, ಸಂಗೀತ, ನಾಟಕ, ಸಾಹಿತ್ಯ, ಸಂಸ್ಕೃತಿ, ಇತಿಹಾಸ ಮತ್ತು ಧರ್ಮ ಇವೆಲ್ಲವುಗಳು ಒಂದು ಪ್ರದೇಶವನ್ನು ಜೀವಂತವಾಗಿಡಲು ಬೇಕಾಗಿರುವ ಅವಶ್ಯಕ ಅಂಶಗಳಾಗಿವೆ. ಇವುಗಳೇ ಒಂದು ನಿರ್ದಿಷ್ಟ ಪ್ರದೇಶವನ್ನು ಬೇರೊಂದು ಪ್ರದೇಶಕ್ಕಿಂತ ವಿಭಿನ್ನ ಮತ್ತು ಶ್ರೇಷ್ಠವೆಂದು ಪರಿಗಣಿಸಬೇಕಾದಾಗ ಅತ್ಯಂತ ಪ್ರಮುಖ ಪಾತ್ರಗಳನ್ನು ವಹಿಸುತ್ತದೆ.

ಈ ಮೇಲ್ಕಂಡ ಎಲ್ಲಾ ಅಂಶಗಳು ಶಾಸ್ತ್ರೀಯ ಸಂಗೀತವನ್ನು ಸಂಗೀತ ಪ್ರಪಂಚದಲ್ಲಿ ಅಗ್ರ ಸ್ಥಾನದಲ್ಲಿರಿಸಿದೆ. ಇಂತಹ ವಿದ್ವತ್‌ಪೂರ್ಣ ಶಾಸ್ತ್ರೀಯ ಸಂಗೀತವು ಕಲಾ ಪ್ರಕಾರಗಳಲ್ಲಿ ಮುಂಚೂಣಿ ಯಲ್ಲಿದ್ದು, ಸೀಮಾತೀತವಾಗಿ ಎಲ್ಲರನ್ನೂ ಮಾನಸಿಕ ಶಾಂತಿ ಮತ್ತು ಭೌತಿಕ ಸ್ಥಿರತೆಯೆಡೆಗೆ ಕೊಂಡೊಯ್ಯುವ ಶಕ್ತಿಯನ್ನು ಹೊಂದಿದೆ. ಮನಸ್ಸಿನ ಕಲ್ಪನೆಯ ಆಧಾರದ ಮೇಲೆ ಜನರ ಜೀವನ ನಿಂತಿರುವುದರಿಂದ ಅಂತಹ ಮನಸ್ಸಿಗೆ ಆನಂದ ನೀಡುವುದು ಅವರವರ ಭಾವನೆಗೆ ಸರಿಹೊಂದುವ ಕಲ್ಪನೆಯ ಆಧಾರದ ಮೇಲೆಯೇ ಸ್ಥಾಪಿತವಾದ ಸಂಗೀತ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವಾಗಿದೆ. ಕಲ್ಪನೆಯ ಮುಖಾಂತರ ಸ್ವರ, ಲಯ, ಸಾಹಿತ್ಯದೊಂದಿಗೆ ಸುಮಧುರ ಪ್ರಪಂಚವನ್ನು ನಿರ್ಮಿಸುವ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಹಾಗೂ ಇದರ ಪರಂಪರೆಯನ್ನು ಕರ್ನಾಟಕ ರಾಜ್ಯದ ಮಧ್ಯ ಭಾಗದಲ್ಲಿರುವ ಮಲೆನಾಡಿನ ತವರೂರಾದ ಶಿವಮೊಗ್ಗ ಜಿಲ್ಲೆಯ ಪ್ರದೇಶದಲ್ಲಿ ಉಳಿಸಿ, ಬೆಳೆಸಿದ ಸಂಗೀತ ಕಲಾವಿದರ, ಸಂಘ ಸಂಸ್ಥೆಗಳ ಹಾಗೂ ಇದರ ಸಮಸ್ಯೆಗಳ ವಿವರಗಳನ್ನು ಓದುಗರಿಗೆ, ಜನಸಾಮಾನ್ಯರಿಗೆ ತಿಳಿಸುವುದೇ ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಪ್ರಕೃತಿಯ ವೈವಿಧ್ಯವನ್ನು ತುಂಬಿಕೊಂಡ ಶಿವಮೊಗ್ಗ ಜಿಲ್ಲೆ ಸಾಂಸ್ಕೃತಿಕವಾಗಿ, ವೈವಿಧ್ಯಮಯವಾಗಿ ಬೆಳೆದು ನಿಂತಿದೆ. ಶಿವಮೊಗ್ಗ ಜಿಲ್ಲೆಯ ಮಲೆನಾಡು ಪ್ರದೇಶ ಹಳ್ಳ, ಕೊಳ್ಳ, ನದಿ, ಬೆಟ್ಟ, ಗುಡ್ಡ, ಬಯಲು ಸೀಮೆಯ ಗಡಿಭಾಗ, ವಿವಿಧ ಜಾತಿ, ಧರ್ಮ, ಜನಾಂಗ, ಮತ, ಪಂಥಗಳು, ಗ್ರಾಮೀಣ ಭಾಷೆಗಳು ಇವೆಲ್ಲಾ ಇಲ್ಲಿಯ ಸಾಂಸ್ಕೃತಿಕ ವಲಯವನ್ನು ಪ್ರಭಾವಿಸಿವೆ. ಜನಪದ ಹಾಗೂ ಸಾಂಸ್ಕೃತಿಕ ವಲಯದಲ್ಲಿಯೂ ಶ್ರೀಮಂತವಾಗಿರುವ ಈ ಪರಿಸರದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಸ್ಥಾನ, ಮಾನ, ನೆಲೆ ಹಾಗೂ ಇದರ ಬೆಳವಣಿಗೆಯ ಅನ್ವೇಷಣೆಯೇ ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಕರ್ನಾಟಕ ರಾಜ್ಯದ ಹೃದಯ ಭಾಗದಲ್ಲಿರುವ ಶಿವಮೊಗ್ಗ ಜಿಲ್ಲೆಯು ಸಂಗೀತದ ಸಪ್ತ ಸ್ವರಗಳಂತೆ ಏಳು ತಾಲ್ಲೂಕುಗಳನ್ನು ಹೊಂದಿದ್ದು, ಪ್ರಕೃತಿ ಸೌಂದರ್ಯದಿಂದ ರಾಜ್ಯದಾದ್ಯಂತ ಪ್ರವಾಸಿಗರನ್ನು ತನ್ನತ್ತ ಆಕರ್ಷಿಸುತ್ತಿದೆ. ಸಾಂಸ್ಕೃತಿಕ ಪರಿಸರವನ್ನು ನಿರ್ಮಾಣ ಮಾಡಲು ಇಲ್ಲಿನ ಜನಪದ ಕಲೆ, ಪರಿಸರ ಮುಂತಾದ ಅಂಶಗಳು ಕಾರಣವಾಗಿರುವುದರಿಂದ ಇವುಗಳ ಪ್ರಭಾವ ಶಾಸ್ತ್ರೀಯ ಸಂಗೀತದ ಮೇಲೆ ಹೇಗಾಯಿತು? ಮತ್ತು ಶಾಸ್ತ್ರೀಯ ಸಂಗೀತದ ಬೆಳವಣಿಗೆ ಇಲ್ಲಿನ ಕಲೆ, ಸಂಸ್ಕೃತಿಗಳು ಪೂರಕವಾಗಿ ಹೇಗೆ ಪ್ರಭಾವ ಬೀರಿದವು ಎಂಬ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಶಾಸ್ತ್ರೀಯ ಸಂಗೀತದ ಬೆಳವಣಿಗೆಯ ಕುರಿತಾಗಿ ಚರ್ಚಿಸಲಾಗಿದೆ. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಬೆಳವಣಿಗೆಯನ್ನೇ ಕೇಂದ್ರವಾಗಿಟ್ಟುಕೊಂಡ ಈ ಅಧ್ಯಯನದಲ್ಲಿ ಸಂಗೀತದ ಉತ್ಪತ್ತಿ ಹಾಗೂ ಅದರ ಬೆಳವಣಿಗೆಯ ಕುರಿತಾಗಿ ಆರಂಭದಲ್ಲಿ ಚರ್ಚಿಸಲಾಗಿದೆ. ಶ್ರೇಷ್ಠ ಪರಂಪರೆಯನ್ನು ಹೊಂದಿದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಬೆಳವಣಿಗೆಯ ಇತಿಹಾಸವನ್ನು ಪ್ರಾದೇಶಿಕ ಮಟ್ಟದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಭಾರತೀಯ ಶಾಸ್ತ್ರೀಯ ಸಂಗೀತದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಪ್ರಾದೇಶಿಕ ಮಟ್ಟದಿಂದಲೇ ಬೆಳೆದು ಬಂದು ಮುಂದೆ ಕಲಾಕಾರರ ಗಾಯನ, ವಾದನ ಶೈಲಿಯ ಆಧಾರದ ಮೇಲೆ ಘರಾನ ಅಥವಾ ಘರಾಣೆ ಎಂಬುದಾಗಿ ಪ್ರಸಿದ್ಧವಾಯಿತು. ಪ್ರತಿಯೊಂದು ಘರಾಣೆಯ ಸಂಗೀತವೂ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಈ ಘರಾಣೆಗಳ ಮೂಲಕವೇ ಸಂಗೀತ ಇಂದಿಗೂ ಅಸ್ತಿತ್ವದಲ್ಲಿರುವುದರಿಂದ ಘರಾಣೆಗಳನ್ನೇ ಮುಖ್ಯ ವಿಷಯವಾಗಿಟ್ಟುಕೊಂಡು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಗಾಯನ ಹಾಗೂ ವಾದನದ ವಿವಿಧ ಘರಾಣೆಗಳ ಪ್ರಭಾವ ಈ ಜಿಲ್ಲೆಯ ಶಾಸ್ತ್ರೀಯ ಸಂಗೀತಗಾರರ ಮೇಲೆ ಪ್ರಭಾವ ಬೀರಿದೆ. ಘರಾಣೆಗಳು ಹೇಗೆ ಅಸ್ತಿತ್ವದಲ್ಲಿ ಬಂದವು? ಯಾರು ಇವುಗಳನ್ನು ಇಲ್ಲಿಗೆ ತಂದರು? ಹೀಗೆ ಮುಂತಾದ ವಿಷಯಗಳ ಬಗೆಗೂ ವಿವರವಾಗಿ ಇಲ್ಲಿ ಚರ್ಚಿಸಲಾಗಿದೆ. ಪ್ರಾದೇಶಿಕ ಮಟ್ಟದಿಂದಲೇ ಬೆಳೆದು ಬಂದ ಹಿಂದೂಸ್ತಾನಿ

ಶಾಸ್ತ್ರೀಯ ಸಂಗೀತದ ಇತಿಹಾಸವನ್ನು ಈ ಜಿಲ್ಲೆಯ ಸಂಗೀತದ ಜೊತೆಜೊತೆಗೆ ಚರ್ಚಿಸಿ ಅಧ್ಯಯನ ಮಾಡುವುದು ಹಾಗೂ ಅವುಗಳ ಪರಂಪರೆಯನ್ನು ತಿಳಿಯುವುದೂ ಸಹ ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲೊಂದಾಗಿದೆ.

ಶಿವಮೊಗ್ಗ ಜಿಲ್ಲೆಯ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಯ ಬೆಳವಣಿಗೆಯ ಕುರಿತು ಅಧ್ಯಯನ ಮಾಡುವಾಗ ನಮಗೆ ಸಿಗುವ ಮುಖ್ಯ ಆಕರಗಳು ಈ ಜಿಲ್ಲೆಯ ಸಂಗೀತಗಾರರು. ಈ ಸಂಗೀತಗಾರರ ಮೌಖಿಕ ಸಂದರ್ಶನವೇ ಅಧ್ಯಯನದ ಮುಖ್ಯ ಆಕರವಾಗಿರುತ್ತದೆ. ಈ ಪ್ರದೇಶದ ಪ್ರಮುಖ ಹಿಂದೂಸ್ತಾನಿ ಸಂಗೀತಗಾರರನ್ನು ಶಾಸ್ತ್ರೀಯ ಸಂಗೀತದ ಬೆಳವಣಿಗೆಯ ಅಧ್ಯಯನಕ್ಕೆ ಪೂರಕವಾಗಿ ಭೇಟಿಯಾಗಿ ಅವರ ಸಂದರ್ಶನವನ್ನು ಮಾಡಿ, ಅವರಿಂದ ಅಗತ್ಯ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಪ್ರಾದೇಶಿಕ ಮಟ್ಟದಲ್ಲಿ ಇಂತಹ ಅಧ್ಯಯನವನ್ನು ನಡೆಸುವಾಗ ಅನೇಕ ಸಮಸ್ಯೆಗಳು ಸಂಶೋಧಕನಿಗೆ ಬರುತ್ತವೆ. ಪ್ರಮುಖವಾಗಿ ಶಾಸ್ತ್ರೀಯ ಸಂಗೀತದ ಗಾಯಕರು ಹಾಗೂ ವಾದಕರು ತಮ್ಮದೇ ಆದ ಸಂಗೀತ ಪ್ರಪಂಚದಲ್ಲಿ ಸಾಧನೆ ಮಾಡುತ್ತಿರುತ್ತಾರೆ. ಇಂತಹ ಸಮಯದಲ್ಲಿ ಅವರನ್ನು ಮಾತನಾಡಿಸುವುದಾಗಲೀ, ಚರ್ಚಿಸುವುದಾಗಲೀ ಬಹಳಾ ಬಹಳಾ ಕಷ್ಟವಾಗುತ್ತದೆ. ಆದರೂ ಇವರನ್ನು ಸಂದರ್ಶಿಸಿ, ಸಂಗೀತದ ವಿಷಯದ ಬಗೆಗೆ ಅನೇಕ ಮಾಹಿತಿಗಳನ್ನು ಪಡೆದುಕೊಂಡು ಅಧ್ಯಯನಕ್ಕೆ ಪೂರಕವಾಗಿರುವ ಹೆಚ್ಚಿನ ಮಾಹಿತಿಗಳನ್ನು ಹಂತಹಂತವಾಗಿ ಸಂಗ್ರಹಿಸಿ, ಇವರನ್ನೂ ಸಹ ಈ ಅಧ್ಯಯನದ ಕಡೆಗೆ ಹಾಗೂ ಸಂಶೋಧನೆಯ ಕಡೆಗೆ ಮನವೊಲಿಸುವುದು ಈ ಅಧ್ಯಯನದ ರಚನೆಯ ಉದ್ದೇಶದಲ್ಲೊಂದಾಗಿದೆ.

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಪರಂಪರೆ ಮಲೆನಾಡಿನ ಶಿವಮೊಗ್ಗ ಜಿಲ್ಲೆಯನ್ನು ಪ್ರವೇಶಿಸಿ ಪ್ರಾದೇಶಿಕ ಮಟ್ಟದಲ್ಲಿ ಅದು ಹೊಂದಿದ ವಿಕಾಸ ಕ್ರಮಗಳು, ಸಂಗೀತ ಶಿಕ್ಷಣ ಪದ್ಧತಿ, ಶಾಸ್ತ್ರೀಯ ಸಂಗೀತದ ಪಾಠ ಶಾಲೆಗಳಲ್ಲಿನ ಸಂಗೀತ ಪ್ರಸಾರ ಪದ್ಧತಿ ಅಲ್ಲದೇ ಇವುಗಳ ಪ್ರಸಾರಕ್ಕೆ ಹಾಗೂ ಪ್ರಚಾರಕ್ಕೆ ಸಮಾಜ ಸ್ಪಂದಿಸಿದ ಬಗ್ಗೆ ಮುಂತಾದ ವಿಷಯಗಳನ್ನು ಕಲಾವಿದರೊಂದಿಗೆ ನೇರವಾಗಿ ಸಂಪರ್ಕಿಸಿ ಸಂದರ್ಶನಗಳ ಮೂಲಕ ಈ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ. ಸತ್ಯ ಸಂಶೋಧನೆಯೇ ಸಂಶೋಧನೆಯ ಗುರಿ ಆಗಿರುವುದರಿಂದ ಒಂದು ವಿಷಯವನ್ನು ಹಲವು ಮುಖಗಳಿಂದ ಅಧ್ಯಯನ ಮಾಡಿ, ವಿಚಾರಿಸಿ, ಚರ್ಚಿಸಿಯೇ ಈ ಅಧ್ಯಯನವನ್ನು ರೂಪಿಸಲಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಭೌಗೋಳಿಕವಾಗಿ ಕರ್ನಾಟಕ ರಾಜ್ಯವನ್ನು ನೋಡಿದಾಗ ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಹೈದ್ರಾಬಾದ್ ಕರ್ನಾಟಕ, ಮುಂಬೈ ಕರ್ನಾಟಕ, ಕರಾವಳಿ ಪ್ರದೇಶ, ಮೈಸೂರು ಕರ್ನಾಟಕ, ಮಲೆನಾಡು ಹಾಗೂ ಬಯಲುಸೀಮೆ ಪ್ರದೇಶಗಳೆಂಬ ವಿಭಾಗಗಳನ್ನು ಕಾಣಬಹುದಾಗಿದೆ. ಕರ್ನಾಟಕ ರಾಜ್ಯದ ಹೃದಯಭಾಗದಲ್ಲಿರುವ ಮಲೆನಾಡು ಪ್ರದೇಶವನ್ನು ಪ್ರಸ್ತುತ ಅಧ್ಯಯನದ ಕಾರ್ಯ ಕ್ಷೇತ್ರವನ್ನಾಗಿ ತೆಗೆದುಕೊಳ್ಳಲಾಗಿದೆ. ಅಖಂಡ ಕರ್ನಾಟಕದ ಗರಿಷ್ಠ ಭೂಭಾಗವನ್ನು ಮಲೆನಾಡು ಪ್ರದೇಶವು ಹೊಂದಿರುವ ಕಾರಣ ಪ್ರಸ್ತುತ ಅಧ್ಯಯನದ ಮೂಲಸಂಶೋಧನೆಯ ಕಾರ್ಯವ್ಯಾಪ್ತಿಯು ಶಿವಮೊಗ್ಗ ಜಿಲ್ಲೆಯನ್ನು ಅನುಲಕ್ಷಿಸಿ ರಚಿಸಲಾಗಿದೆ. ಶಿವಮೊಗ್ಗ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಸಂಗೀತದ ಸಪ್ತ ಸ್ವರಗಳಂತಿರುವ ಏಳು ತಾಲ್ಲೂಕುಗಳಾದ ಶಿವಮೊಗ್ಗ, ಭದ್ರಾವತಿ, ಹೊಸನಗರ, ತೀರ್ಥಹಳ್ಳಿ, ಸಾಗರ, ಸೊರಬ ಹಾಗು ಶಿಕಾರಿಪುರಗಳಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಹಾಗು ಅದರ ಘರಾಣೆಯ ಬೆಳವಣಿಗೆಯ ಬಗ್ಗೆ ಇಲ್ಲಿ ವಿವರಿಸಲಾಗಿದೆ.

## ೧.೩. ಅಧ್ಯಯನದ ಮಹತ್ವ

ಶಾಸ್ತ್ರೀಯ ಸಂಗೀತದ ಬೆಳವಣಿಗೆಯ ಅಧ್ಯಯನವು ವರ್ತಮಾನದಲ್ಲಿ ಬಹಳ ಮಹತ್ವವನ್ನು ಪಡೆದಿದೆ. ಬದಲಾಗುತ್ತಿರುವ ಇಂದಿನ ಗಣಕಯಂತ್ರಯುಕ್ತ ದಿನಗಳಲ್ಲಿ ನಮ್ಮ ಪ್ರಾಚೀನ ಸಂಸ್ಕೃತಿ, ಪರಂಪರೆ, ಕಲೆಗಳ ಬಗೆಗಿನ ಮಹತ್ವದ ಅರಿವು ಇಂದಿನ ಯುವಪೀಳಿಗೆಗೆ ಮನವರಿಕೆ ಆಗಬೇಕಾಗಿದೆ. ಇಂದಿನ ದಿನಮಾನಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಯುವಜನತೆ ನಮ್ಮ ಪಾರಂಪರಿಕ ಸಂಸ್ಕೃತಿಯನ್ನು ಬಿಟ್ಟು ವಿದೇಶಿ ಸಂಸ್ಕೃತಿಯತ್ತ ವಾಲುತ್ತಿರುವುದು ಪ್ರಸ್ತುತದಲ್ಲಿ ಕಂಡುಬರುತ್ತದೆ. ಇಂತಹ ವಿಷಮ ಪರಿಸ್ಥಿತಿಯಲ್ಲಿ ನಮ್ಮ ಸಂಸ್ಕೃತಿ, ಕಲೆ, ಪರಂಪರೆಯನ್ನು ಉಳಿಸಿ, ಬೆಳೆಸುವುದು ಅತ್ಯಗತ್ಯವಾಗಿದೆ.

ವಿದೇಶಿ ಸಂಸ್ಕೃತಿಯ ಕಪಿಮುಷ್ಟಿಯಿಂದ ಯುವಜನತೆಯನ್ನು ಪಾರು ಮಾಡಲು ಹಾಗೂ ಇವರನ್ನು ಸನ್ಮಾರ್ಗದತ್ತ ನಡೆಸಲು ಶಾಸ್ತ್ರೀಯ ಸಂಗೀತದಂತಹ ಕಲೆ ಬಹು ಮಹತ್ವದ ಪಾತ್ರವನ್ನು ವಹಿಸುತ್ತದೆ. ನಮ್ಮ ನಾಡು, ನುಡಿ, ಸಂಸ್ಕೃತಿ, ಕಲೆ, ಪರಂಪರೆಗಳ ಮಹತ್ವಗಳ ಕುರಿತು ಈ ಅಧ್ಯಯನದಲ್ಲಿ ವಿವರಿಸಲಾಗಿದೆ.

## ೧.೪ ಅಧ್ಯಯನದ ವಿನ್ಯಾಸ ಮತ್ತು ವಿಧಾನ

ಮಲೆನಾಡು ಪ್ರದೇಶದ ಶಿವಮೊಗ್ಗ ಜಿಲ್ಲೆಯ ಏಳು ತಾಲ್ಲೂಕುಗಳಾದ ಶಿವಮೊಗ್ಗ, ಭದ್ರಾವತಿ, ಹೊಸನಗರ, ತೀರ್ಥಹಳ್ಳಿ, ಸಾಗರ, ಸೊರಬ ಹಾಗೂ ಶಿಕಾರಿಪುರದ ಪ್ರದೇಶಗಳನ್ನು ಈ ಸಂಶೋಧನೆಯ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತಗಾರರ ಕುರಿತಾಗಿ ಪ್ರಕಟವಾಗಿರುವ ಕೃತಿಗಳು, ಪತ್ರಿಕಾ ವರದಿಗಳು, ಲೇಖನಗಳು, ಮಹಾಪ್ರಬಂಧಗಳು, ಸಂದರ್ಶನ ಲೇಖನಗಳು, ವಿಚಾರ ಸಂಕೀರ್ಣಗಳ ವರದಿಗಳು ಹೀಗೆ ದೊರಕಿದಂತಹ ಎಲ್ಲಾ ಅತ್ಯಮೂಲ್ಯ ಮಾಹಿತಿಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಪೂರಕ ಆಧಾರವಾಗಿ ಬಳಸಿಕೊಂಡು ದಾಖಲೆ ಮಾಡಲಾಗಿದೆ. ಹಾಗೆಯೇ ಈ ಪ್ರದೇಶದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಉಳಿಸಿ, ಬೆಳೆಸುತ್ತಿರುವ ಪ್ರತಿಯೊಬ್ಬ ಸಂಗೀತಗಾರರನ್ನು ನೇರವಾಗಿ ಹಾಗೂ ದೂರವಾಣಿಯ ಮುಖಾಂತರ ಸಂಪರ್ಕಿಸಿ, ಸಂದರ್ಶಿಸಿ, ಸಮೀಕ್ಷೆ ಮಾಡುವುದರ ಮೂಲಕ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ.

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನೇ ಮೂಲವಾಗಿಟ್ಟುಕೊಂಡಿರುವ ಸಂಗೀತಗಾರರ, ಕಲಾವಿದರ ಸಮೀಕ್ಷೆಯನ್ನು ಮಾಡಲಾಗಿದೆ. ಹಾಗೆಯೇ ಈ ಪ್ರದೇಶದಲ್ಲಿ ವಾಸಿಸುವಂತಹ ಪ್ರತೀ ಸಂಗೀತಗಾರರ ಕುಟುಂಬದವರಿಂದಲೂ ಮಾಹಿತಿ ಪಡೆಯಲಾಗಿದೆ. ಯುವ ಪೀಳಿಗೆಯ ಕಲಾವಿದರಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಆಸಕ್ತಿ ಅರಿಯಲು ಮಕ್ಕಳ ಅಭಿಪ್ರಾಯಗಳನ್ನೂ ತಿಳಿದುಕೊಳ್ಳಲಾಗಿದೆ. ಇದರೊಂದಿಗೆ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಆಸಕ್ತಿಯಿಂದ ಕೇಳುವ ಜನಸಾಮಾನ್ಯರನ್ನೂ ಸಂದರ್ಶಿಸಿ ಅವರವರ ವೈಯಕ್ತಿಕ ಅಭಿಪ್ರಾಯಗಳನ್ನೂ ತೆಗೆದು ಕೊಳ್ಳಲಾಗಿದೆ. ಈ ರೀತಿಯಾಗಿ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಅತ್ಯಮೂಲ್ಯವಾದ ಮಾಹಿತಿಗಳನ್ನು ಒಂದೆಡೆ ಕ್ರೋಢಿಕರಿಸಿ, ಪರಿಶೀಲಿಸಿ, ಅವುಗಳಿಂದ ಬಂದ ಅಂಶಗಳನ್ನು ತುಲನಾತ್ಮಕವಾಗಿ ಚರ್ಚಿಸಿ ಈ ಅಧ್ಯಯನದಲ್ಲಿ ವಿವರಿಸಲಾಗಿದೆ.

ಪ್ರಮುಖವಾಗಿ ಈ ಅಧ್ಯಯನ ಪೂರ್ಣಗೊಳಿಸಲು ಸಂಶೋಧನೆಯ ವಿಧಿವಿಧಾನ, ರೂಪುರೇಷಗಳನ್ನು ಆಧಾರವಾಗಿಟ್ಟುಕೊಂಡು ಕ್ಷೇತ್ರಕಾರ್ಯದಲ್ಲಿ ನಡೆಸಿದ ಸಂದರ್ಶನದ ಪ್ರಶ್ನಾವಳಿಯ ವಿಧಾನಗಳನ್ನು ಅನುಸರಿಸಲಾಗಿದೆ. ಹಾಗೆಯೇ ಈ ಅಧ್ಯಯನಕ್ಕೆ ಪೂರಕವಾಗುವಂತಹ ಛಾಯಾಚಿತ್ರ, ರೇಖಾಚಿತ್ರ, ಕೋಷ್ಟಕಗಳು ಇತ್ಯಾದಿಗಳನ್ನು ಬಳಸಿಕೊಳ್ಳಲಾಗಿದೆ.

## ೧.೫ ಅಧ್ಯಯನದ ಸ್ವರೂಪ

"ಮಲೆನಾಡಿನ ಪ್ರದೇಶದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳ ಬೆಳವಣಿಗೆಗಳು (ಶಿವಮೊಗ್ಗ ಜಿಲ್ಲೆಯನ್ನು ಅನುಲಕ್ಷಿಸಿ)" ಎಂಬುದು ಈ ಅಧ್ಯಯನದ ವಿಷಯವಾಗಿದ್ದು, ಒಂದು ನಿರ್ದಿಷ್ಟ ಪ್ರದೇಶವನ್ನು ವ್ಯಾಪ್ತಿಯಾಗಿಟ್ಟುಕೊಂಡು ನಡೆಸುವಂತಹಾ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ಮಹತ್ವ ಹೇಗಿರಬೇಕೆಂದು ತಜ್ಞರೊಡನೆ ಚರ್ಚಿಸಿ ಈ ಅಧ್ಯಯನದ ರಚನಾ ಕಾರ್ಯವನ್ನು ಕೈಗೆತ್ತಿಕೊಂಡು ಬರವಣಿಗೆಗೊಂದು ಸ್ವರೂಪ ಕೊಡಲಾಗಿದೆ. ಶಿವಮೊಗ್ಗ ಜಿಲ್ಲೆಯ ಶಾಸ್ತ್ರೀಯ ಸಂಗೀತದ ಬೆಳವಣಿಗೆಗೆ ಸಂಬಂಧಿಸಿದ ಮಾಹಿತಿಗಳನ್ನು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಪರಂಪರೆಯ ಚೌಕಟ್ಟಿನಲ್ಲಿ ಪೂರಕವಾಗುವಂತೆ ಬಳಸಿಕೊಂಡು ಈ ಅಧ್ಯಯನವನ್ನು ರಚಿಸಲಾಗಿದೆ. ಶಿವಮೊಗ್ಗ ಜಿಲ್ಲೆಯಲ್ಲಿ ಕರ್ನಾಟಕಿ ಶಾಸ್ತ್ರೀಯ ಸಂಗೀತವೇ ಹೆಚ್ಚಾಗಿದ್ದರೂ, ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ನೆಲೆಗೊಂಡಿರುವುದನ್ನು ಮನಗಂಡು ಆ ಕಲಾವಿದರು ಮತ್ತು ಅವರ ಘರಾಣೆ ಪರಂಪರೆಯನ್ನು ಬೆಳಕಿಗೆ ತರುವ ನಿಟ್ಟಿನಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಪ್ರಸ್ತುತ ಮೊದಲನೇ ಅಧ್ಯಾಯವಾದ ಪ್ರಸ್ತಾವನೆಯಲ್ಲಿ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ವಿನ್ಯಾಸ, ವಿಧಾನ ಹಾಗೂ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಮತ್ತು ಘರಾಣೆಗಳ ಕುರಿತು ಇದುವರೆಗೂ ನಡೆದ ಅಧ್ಯಯನಗಳು, ಹಾಗು ಈ ಅಧ್ಯಯನಕ್ಕಾಗಿ ಕೈಗೊಂಡ ರೂಪರೇಷಗಳ ಕುರಿತು ವಿವರಿಸಲಾಗಿದೆ.

ಎರಡನೇ ಅಧ್ಯಾಯವಾದ ಭಾರತೀಯ ಸಂಗೀತದ ಇತಿಹಾಸದಲ್ಲಿ, ಸಂಗೀತದ ಹುಟ್ಟು ಮತ್ತು ಬೆಳವಣಿಗೆ, ವೇದಗಳ ಕಾಲ, ಮಹಾಕಾವ್ಯಗಳಲ್ಲಿ ಸಂಗೀತ ಮತ್ತು ಗ್ರಂಥಗಳಲ್ಲಿರುವ ಸಂಗೀತ, ಭಾರತೀಯ ಸಂಗೀತದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಮತ್ತು ಕರ್ನಾಟಕದಲ್ಲಿನ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಬೆಳವಣಿಗೆಯ ಸೂಕ್ಷ್ಮ ಅವಲೋಕನ ಮಾಡಲಾಗಿದೆ.

ಮೂರನೇ ಅಧ್ಯಾಯವಾದ ಘರಾಣೆ ಶಬ್ದದ ಅರ್ಥ, ವಿಶ್ಲೇಷಣೆಯಲ್ಲಿ, ಘರಾಣೆ ಶಬ್ದದ ವಿವರಣೆಯೊಂದಿಗೆ ಘರಾಣೆಯ ಸಂಪೂರ್ಣ ಸ್ವರೂಪಗಳನ್ನು ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯವಾದ ಘರಾಣೆಗಳ ಪರಂಪರೆಯಲ್ಲಿ, ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಪ್ರಚಲಿತ ಹಾಗು ಅಪ್ರಚಲಿತ ಗಾಯನ ಮತ್ತು ವಾದನ ಘರಾಣೆಗಳ ವಿವರಣೆಯೊಂದಿಗೆ ಅದರ ಗುಣ ಲಕ್ಷಣಗಳನ್ನು ಮತ್ತು ಪ್ರಸ್ತುತ ಕಾಲಮಾನದಲ್ಲಿ ಘರಾಣೆಗಳ ಸ್ಥಾನ ಮಾನಗಳನ್ನು ಹಾಗೂ ಕರ್ನಾಟಕದಲ್ಲಿ ಘರಾಣೆಗಳ ಬೆಳವಣಿಗೆಯ ಬಗೆಗೆ ಚರ್ಚಿಸಲಾಗಿದೆ.

ಐದನೇ ಅಧ್ಯಾಯವಾದ ಮಲೆನಾಡು ಪ್ರದೇಶದ ಸರ್ವೇಕ್ಷಣೆಯಲ್ಲಿ ಶಿವಮೊಗ್ಗ ಜಿಲ್ಲೆಯ ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ ಹಿನ್ನೆಲೆಗಳನ್ನು ವಿವರಿಸಲಾಗಿದೆ.

ಆರನೇಯ ಅಧ್ಯಾಯವಾದ ಘರಾಣೆಗಳ ಬೆಳವಣಿಗೆಗೆ ಶಿವಮೊಗ್ಗ ಜಿಲ್ಲೆಯ ಕೊಡುಗೆಯಲ್ಲಿ, ಶಿವಮೊಗ್ಗ ಜಿಲ್ಲೆಯ ಸಂಗೀತ ಪರಂಪರೆಯೊಂದಿಗೆ ಮಲೆನಾಡು ಪ್ರದೇಶದಲ್ಲಿರುವ ವಿವಿಧ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳನ್ನು ಹಾಗು ಅದರ ಸಂಗೀತ ಪ್ರವರ್ತಕರ ಜೀವನ ಚರಿತ್ರೆಗಳನ್ನು ಮತ್ತು ಪ್ರಮುಖ ಸಂಗೀತ ಕಲಾವಿದರನ್ನು ಹೆಸರಿಸಲಾಗಿದೆ. ಹಾಗೆಯೇ ಹಿಂದೂಸ್ತಾನಿ ಶಾಸ್ರೀಯ ಸಂಗೀತವನ್ನು ಉಳಿಸಿ, ಬೆಳೆಸುತ್ತಿರುವ ಕಲಾ ಪೋಷಕ ಸಂಘ-ಸಂಸ್ಥೆಗಳ ಹಾಗೂ ಸಂಗೀತ ಪಾಠಶಾಲೆಗಳ ಬೆಳವಣಿಗೆಯನ್ನು ಮತ್ತು ಮಲೆನಾಡು ಪ್ರದೇಶದ ವಿವಿಧ ಘರಾಣೆಗಳ ಸಂಗೀತ ಪ್ರವರ್ತಕರಿಂದಾದ ಪ್ರಸರಣ, ಫಲಿತ ಮತ್ತು ಸಾಫಲ್ಯಗಳನ್ನು ತಿಳಿಸಲಾಗಿದೆ.

ಅಂತಿಮ ಏಳನೇ ಅಧ್ಯಾಯವಾದ ಸಮಾರೋಪದಲ್ಲಿ, ಪ್ರಸ್ತುತ ಮಹಾಪ್ರಬಂಧದ ಅನುಬಂಧ ಗಳನ್ನು, ಮಾಹಿತಿದಾರರ ಪಟ್ಟಿಗಳನ್ನು ಮತ್ತು ಛಾಯಾ ಚಿತ್ರಗಳನ್ನು ಹಾಗೂ ಪರಾಮರ್ಶನ ಗ್ರಂಥಗಳನ್ನು, ಆಕರ ಗ್ರಂಥಗಳನ್ನು ನೀಡಲಾಗಿದೆ.

## ೧.೬ ಇದುವರೆಗಿನ ಅಧ್ಯಯನಗಳು

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಪ್ರಮುಖ ಅಂಶವಾದ ಘರಾಣೆಗಳನ್ನು ಹಾಗು ಅದರ ಗುಣ-ಲಕ್ಷಣಗಳನ್ನು ಕೇಂದ್ರವಾಗಿಟ್ಟುಕೊಂಡು ಭಾರತದಾದ್ಯಂತ ಹಲವಾರು ವಿಶ್ವವಿದ್ಯಾಲಯಗಳಲ್ಲಿ ಆಂಗ್ಲ, ಹಿಂದಿ ಹಾಗೂ ಆಯಾ ಪ್ರದೇಶದ ಪ್ರಾದೇಶಿಕ ಭಾಷೆಗಳಲ್ಲಿ ಇಲ್ಲಿಯವರೆಗೆ ಹಲವು ಮಹಾಪ್ರಬಂಧಗಳು ಪಿಹೆಚ್.ಡಿ. ಪದವಿಗಾಗಿ ಸಲ್ಲಿಕೆಯಾಗಿವೆ. ಆದರೆ ಅಂತಹಾ ಮಹಾಪ್ರಬಂಧಗಳು ಮೇಲ್ನೋಟಕ್ಕೆ ಪ್ರಸ್ತುತದ ಈ ಅಧ್ಯಯನಕ್ಕೆ ತುಂಬಾ ಹತ್ತಿರವಿದ್ದರೂ ಒಳನೋಟದಲ್ಲಿ ಅದರ ವ್ಯಾಪ್ತಿ ಬೇರೆ ಬೇರೆಯಾಗಿರುವುದು ಕಂಡುಬರುತ್ತದೆ.

ಡಾ. ಮೀರಾ ಶಿವಶಂಕರ ಗುಂಡಿ ಅವರು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಗಾಯನ ಘರಾಣೆಗಳನ್ನು ಕೇಂದ್ರವಾಗಿರಿಸಿಕೊಂಡು ಡಾ. ಬಿಂದುಮಾಧವ ಡಿ. ಪಾಠಕರವರ ಮಾರ್ಗದರ್ಶನ ದಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ "ಉತ್ತರ ಕರ್ನಾಟಕದಲ್ಲಿ ಬೆಳೆದು ಬಂದ ಹಿಂದೂಸ್ತಾನಿ ಸಂಗೀತ ಘರಾಣೆಗಳ ಒಂದು ಅಧ್ಯಯನ" ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಸಲ್ಲಿಸಿರುತ್ತಾರೆ.

ಈ ಮಹಾಪ್ರಬಂಧದ ಅಧ್ಯಾಯಗಳಲ್ಲಿ ಉತ್ತರ ಕರ್ನಾಟಕ ಭಾಗದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಉಗಮ, ಘರಾಣೆಯ ಪರಿಭಾಷೆ ಹಾಗು ಅದರ ಬೆಳವಣಿಗೆಯ ವಿಷಯವಾಗಿ

ಸುದೀರ್ಘವಾಗಿ ವಿವರಿಸಲಾಗಿದೆ. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಸಂಶೋಧಕರಿಗೆ, ಸಂಗೀತಾಸಕ್ತರಿಗೆ ಈ ಮಹಾಪ್ರಬಂಧವು ಉತ್ತಮ ಮಾರ್ಗದರ್ಶಿಯಾಗಿದೆ.

ಡಾ. ಭಾರತಿ ಕೆ. ನಾಯಕ ಅವರು ಆಧುನಿಕ ಕಾಲದ ಹಿಂದೂಸ್ತಾನಿ ಸಂಗೀತದ ಘರಾಣೆಗಳನ್ನು ಕೇಂದ್ರವಾಗಿರಿಸಿಕೊಂಡು ಡಾ. ಬಿಂದುಮಾಧವ ಡಿ. ಪಾಠಕರವರ ಮಾರ್ಗದರ್ಶನದಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ "ಆಧುನಿಕ ಕಾಲದಲ್ಲಿ ಹಿಂದೂಸ್ತಾನಿ ಸಂಗೀತ ಘರಾಣೆಗಳ ಔಚಿತ್ಯ: ಒಂದು ಅಧ್ಯಯನ" ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಸಲ್ಲಿಸಿರುತ್ತಾರೆ.

ಈ ಮಹಾ ಪ್ರಬಂಧದ ಆರು ಅಧ್ಯಾಯಗಳಲ್ಲಿ ಹಿಂದೂಸ್ತಾನಿ ಸಂಗೀತದ ಇತಿಹಾಸ, ಘರಾಣೆಗಳ ಉಗಮ, ಆಧುನಿಕ ಶಿಕ್ಷಣ ಪದ್ಧತಿಯಲ್ಲಿ ಸಂಗೀತ, ಸಂಗೀತ ಹಾಗೂ ರಸಾನುಭವ ಮತ್ತು ಘರಾಣ ಪದ್ಧತಿಯ ಬಗೆಗೆ ಹಲವು ಸಂಗೀತಜ್ಞರ ಅಭಿಪ್ರಾಯಗಳನ್ನು ವಿವರವಾಗಿ ದಾಖಲಿಸಿದ್ದಾರೆ. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳ ವಿಷಯವಾಗಿ ಅಭ್ಯಸಿಸುವ ಅಧ್ಯಯನಕಾರರಿಗೆ ಇದೊಂದು ಮಹತ್ವದ ಮಹಾಪ್ರಬಂಧವಾಗಿದೆ.

ಡಾ. ಕೃಷ್ಣಮೂರ್ತಿ ಭಟ್ ಅವರು ಕರ್ನಾಟಕ ರಾಜ್ಯದ ಉತ್ತರ ಕನ್ನಡ ಜಿಲ್ಲೆಯ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಆಧಾರವಾಗಿಟ್ಟುಕೊಂಡು ಪಂ. ಗಣಪತಿ ಭಟ್ ಹಾಸಣಗಿಯವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ "ಉತ್ತರ ಕನ್ನಡ ಜಿಲ್ಲೆಯ ಶಾಸ್ತ್ರೀಯ ಸಂಗೀತದ ಬೆಳವಣಿಗೆ"(ಅಪ್ರಕಟಿತ ಮಹಾಪ್ರಬಂಧ) ಎಂಬ ಶೀರ್ಷಿಕೆಯ ಮಹಾ ಪ್ರಬಂಧವನ್ನು ೧೯೯೯-೨೦೦೦ರಲ್ಲಿ ಸಲ್ಲಿಸಿರುತ್ತಾರೆ.

ಈ ಮಹಾಪ್ರಬಂಧದಲ್ಲಿ ನಾಲ್ಕು ಭಾಗಗಳಿದ್ದು, ಪ್ರತಿಯೊಂದು ಭಾಗದಲ್ಲಿ ಮೂರು ಅಧ್ಯಾಯ ಗಳಿವೆ. ಮೊದಲನೇ ಭಾಗದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಉಗಮ, ಇತಿಹಾಸ, ಘರಾಣೆಗಳು, ಪ್ರಬಂಧ ಹಾಗೂ ವಾಗ್ಗೇಯಕಾರರ ವಿಷಯವನ್ನು ವಿವರಿಸಿದ್ದಾರೆ. ಎರಡನೇ ಭಾಗದಲ್ಲಿ ಉತ್ತರ ಕನ್ನಡ ಜಿಲ್ಲೆಯ ಸಾಂಸ್ಕೃತಿಕ ಪರಿಸರ, ಜಿಲ್ಲೆಯ ವಿವಿಧ ಲಲಿತ ಕಲೆಗಳು ಹಾಗೆಯೇ ಈ ಜಿಲ್ಲೆಯಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಉಗಮ ಮತ್ತು ಈ ಭಾಗದ ಬುಡಕಟ್ಟು ಹಾಗು ಹಿಂದುಳಿದ ವರ್ಗದವರ ಸಾಂಸ್ಕೃತಿಕ ಮತ್ತು ಸಂಗೀತದ ಕುರಿತು ವಿವರಿಸಿದ್ದಾರೆ.

ಮೂರನೇ ಭಾಗದಲ್ಲಿ ಜಿಲ್ಲೆಯ ಉತ್ಸವಗಳು, ಸಂಘಟನೆಗಳು, ಸಂಘ-ಸಂಸ್ಥೆಗಳು ಹಾಗು ಶಾಲಾ-ಕಾಲೇಜುಗಳಲ್ಲಿನ ಸಂಗೀತ ಶಿಕ್ಷಣ, ಸಂಗೀತ ಪಾಠಶಾಲೆ ಮತ್ತು ಈ ಜಿಲ್ಲೆಯ ಪ್ರಮುಖ ಸಂಗೀತಗಾರರ ಪರಿಚಯವನ್ನು ವಿವರಿಸಿದ್ದಾರೆ. ಅಂತಿಮದ ನಾಲ್ಕನೇಯ ಭಾಗದಲ್ಲಿ ಸಮಾಜದಲ್ಲಿ ಸಂಗೀತದ ಸ್ಥಾನ-ಮಾನ ಮತ್ತು ಮಹತ್ವವನ್ನು ವಿವರಿಸಿದ್ದಾರೆ.

ನಿರ್ದಿಷ್ಟ ಭೌಗೋಳಿಕ ಪ್ರದೇಶವನ್ನು ಕೇಂದ್ರವಾಗಿಟ್ಟುಕೊಂಡು, ಆ ಭಾಗದ ಹಿಂದೂಸ್ತಾನಿ

ಶಾಸ್ತ್ರೀಯ ಸಂಗೀತದ ವಿಷಯವನ್ನು ಸುದೀರ್ಘವಾಗಿ ವಿವರಿಸಿದ ಈ ಮಹಾಪ್ರಬಂಧವು ಸಂಗೀತ ಸಂಶೋಧಕರಿಗೆ ಮಹತ್ವದ ಮಾಹಿತಿಯನ್ನು ಒದಗಿಸುತ್ತದೆ.

ಡಾ. ಅಶೋಕ ಹುಗ್ಗಣ್ಣನವರು ಕರ್ನಾಟಕ ರಾಜ್ಯದ ಕಿರಾಣ ಘರಾಣೆಯ ತವರೂರಾದ ಕುಂದಗೋಳ ಗ್ರಾಮ ಹಾಗು ಸುತ್ತಮುತ್ತಲಿನ ಪ್ರದೇಶವನ್ನು ಅಧ್ಯಯನದ ಕೇಂದ್ರವಾಗಿಟ್ಟುಕೊಂಡು ಪ್ರೊ. ಹನುಮಣ್ಣನಾಯಕ ದೊರೆಯವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ "ಕುಂದಗೋಳ ಪರಿಸರದ ಹಿಂದೂಸ್ತಾನಿ ಸಂಗೀತಗಾರರು"(ಅಪ್ರಕಟಿತ ಮಹಾಪ್ರಬಂಧ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ೨೦೦೬ರಲ್ಲಿ ಸಲ್ಲಿಸಿರುತ್ತಾರೆ.

ಈ ಮಹಾಪ್ರಬಂಧದಲ್ಲಿ ಒಟ್ಟು ಏಳು ಅಧ್ಯಾಯಗಳಿವೆ. ಮೊದಲನೇ ಅಧ್ಯಾಯದಲ್ಲಿ ಪೀಠಿಕೆ, ಸಮಸ್ಯೆ, ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಹಾಗೂ ವಿಧಾನವನ್ನು ವಿವರಿಸಿದ್ದಾರೆ. ಎರಡನೇ ಅಧ್ಯಾಯದಲ್ಲಿ ಹಿಂದೂಸ್ತಾನಿ ಸಂಗೀತ ಪರಂಪರೆಯ ಐತಿಹಾಸಿಕ ನೋಟ, ಸಂಗೀತದ ಹುಟ್ಟು, ಭಾರತೀಯ ವಿದ್ವಾಂಸರ ಅಭಿಪ್ರಾಯ, ಸಂಗೀತದ ಉತ್ಪತ್ತಿಯ ಬಗೆಗೆ ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯ ಹಾಗೆಯೇ ವೇದಕಾಲದಿಂದ ಬ್ರಿಟೀಷರ ಕಾಲದವರೆಗೆ ಸಂಗೀತವು ಬೆಳೆದು ಬಂದ ಬಗೆಯನ್ನು ಸವಿವರಗಳೊಂದಿಗೆ ವಿವರಿಸಿದ್ದಾರೆ.

ಮೂರನೆಯ ಅಧ್ಯಾಯದಲ್ಲಿ ಪ್ರಸ್ತುತ ಪ್ರಬಂಧದ ಕೇಂದ್ರವಾದ ಕುಂದಗೋಳ ಪರಿಸರದ ಸಾಂಸ್ಕೃತಿಕ ಹಿನ್ನೆಲೆ, ಗ್ರಾಮದ ಹಿನ್ನೆಲೆ, ಪ್ರಾಚೀನ ಕಾಲದ ದೇವಾಲಯಗಳು ಮತ್ತು ಶಿಲ್ಪಗಳ ವಿವರಣೆ ನೀಡಲಾಗಿದೆ. ನಂತರದ ನಾಲ್ಕನೆಯ ಅಧ್ಯಾಯದಲ್ಲಿ ಕುಂದಗೋಳ ಪರಿಸರದ ಸಂಸ್ಕೃತಿ ಮತ್ತು ಸಂಗೀತ, ಧಾರ್ಮಿಕ ಹಿನ್ನೆಲೆ, ಸಂಗೀತ ಮತ್ತು ಶಿಲ್ಪ ಕಲೆಗಳ ಸಂಬಂಧ ಹಬ್ಬ ಹರಿದಿನಗಳು, ಸಂಗೀತೋತ್ಸವ, ಕನ್ನಡ ರಂಗಭೂಮಿ ಮತ್ತು ಸಂಗೀತ ಹಾಗೆಯೇ ಹಿಂದೂಸ್ತಾನಿ ಸಂಗೀತಗಾರರ ಬಣ್ಣದ ಬದುಕಿನ ವಿಚಾರಗಳನ್ನು ವಿವರಿಸಿದ್ದಾರೆ.

ಐದನೆಯ ಅಧ್ಯಾಯದಲ್ಲಿ ಹಿಂದೂಸ್ತಾನಿ ಸಂಗೀತಕ್ಕೆ ಕುಂದಗೋಳ ಪರಿಸರದ ೨೫ ಕಲಾವಿದರ ಪರಿಚಯದೊಂದಿಗೆ ಇವರು ಸಂಗೀತ ಪ್ರಪಂಚಕ್ಕೆ ನೀಡಿದ ಕೊಡುಗೆಯನ್ನು ತಿಳಿಸಿದ್ದಾರೆ. ತದನಂತರದ ಆರನೆಯ ಅಧ್ಯಾಯದಲ್ಲಿ ಘರಾಣೆಯ ವಿವರಣೆಯೊಂದಿಗೆ ಕುಂದಗೋಳ ಪರಿಸರದಲ್ಲಿರುವ ಘರಾಣೆಗಳ ವಿವರಣೆ ನೀಡಿದ್ದಾರೆ. ಅಂತಿಮದ ಏಳನೇ ಅಧ್ಯಾಯದಲ್ಲಿ ಕುಂದಗೋಳ ಪರಿಸರದಲ್ಲಿನ ಸಂಗೀತಗಾರರ ವ್ಯಕ್ತಿ ಚಿತ್ರ, ಸಂಗೀತ ಕಾರ್ಯಕ್ರಮಗಳ ಛಾಯಾಚಿತ್ರ ಲಗತ್ತಿಸಿದ್ದಾರೆ. ಒಟ್ಟಿನಲ್ಲಿ ಒಂದು ನಿರ್ದಿಷ್ಟ ಪ್ರದೇಶದ ಪರಿಸರವನ್ನು ಹಿಂದೂಸ್ತಾನಿ ಸಂಗೀತದ ಕೇಂದ್ರವಾಗಿರಿಸಿಕೊಂಡು ಸಂಶೋಧನೆ ಮಾಡುವ, ಅಧ್ಯಯನ ಮಾಡುವ ಸಂಶೋಧಕರಿಗೆ ಪ್ರಸ್ತುತದ ಈ ಮಹಾಪ್ರಬಂಧ

ಉತ್ತಮ ಮಾದರಿಯ ಆಕರ ಗ್ರಂಥವಾಗಿದೆ.

ಡಾ. ಕಮಲ ಪುರಂದರೆರವರ "ಕರ್ನಾಟಕದಲ್ಲಾದ ಹಿಂದೂಸ್ತಾನಿ ಸಂಗೀತದ ವಿಕಾಸ", ಮತ್ತು ಡಾ. ಜ್ಯೋತಿಲಕ್ಷ್ಮಿ ಡಿ.ಪಿ. ಅವರ "ಹಿಂದೂಸ್ತಾನಿ ಸಂಗೀತಕ್ಕೆ ಗ್ವಾಲಿಯರ್ ಘರಾಣೆಯ ಕೊಡುಗೆ(ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಗ್ರಂಥಗಳು ಪ್ರಸ್ತುತದ ಮಹಾ ಪ್ರಬಂಧಕ್ಕೆ ವಿಷಯಾವಾರು ಹತ್ತಿರವಿರುವ ಕಾರಣ ಇವುಗಳನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿದೆ.

# ಅಧ್ಯಾಯ ೨

# ಭಾರತೀಯ ಸಂಗೀತದ ಇತಿಹಾಸ (ಸೂಕ್ಷ್ಮ ಅವಲೋಕನ)

೨.೧ ಸಂಗೀತದ ಹುಟ್ಟು ಮತ್ತು ಬೆಳವಣಿಗೆ

೨.೨ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ

೨.೩ ಕರ್ನಾಟಕದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಬೆಳವಣಿಗೆ

## ಅಧ್ಯಾಯ ೨

# ಭಾರತೀಯ ಸಂಗೀತದ ಇತಿಹಾಸ (ಸೂಕ್ಷ್ಮ ಅವಲೋಕನ)

### ೨.೧ ಸಂಗೀತದ ಹುಟ್ಟು ಮತ್ತು ಬೆಳವಣಿಗೆ

ಜಗತ್ತಿನ ಸೃಷ್ಟಿಯಲ್ಲಿ ಮಾನವನ ಹುಟ್ಟು ಹಾಗು ಅವನ ಬೆಳವಣಿಗೆಯ ವಿಕಾಸದ ಬಗೆ ವಿಸ್ಮಯವಾಗಿದೆ. ಮಾನವ ಪ್ರಾಣಿ, ಪಕ್ಷಿ ಹಾಗೂ ಇತರೆ ಜೀವಿಗಳಂತೆ ಕೇವಲ ದೇಹ ಶಕ್ತಿಯಲ್ಲಿ ಮಾತ್ರವಲ್ಲದೇ ಬೌದ್ಧಿಕವಾಗಿಯೂ ಅಪಾರವಾಗಿ ಬೆಳೆದು ನಿಂತ ಬಗೆ ಕುತೂಹಲಕಾರಿಯಾಗಿದೆ. ತನ್ನ ಹುಟ್ಟಿನಿಂದಲೇ ವಿಕಾಸದ ಹಾದಿಯತ್ತ ಸಾಗಿದ ಮಾನವ ತನ್ನ ಜೀವನದುದ್ದಕ್ಕೂ ನಿಸರ್ಗದೊಂದಿಗೆ ಬೆರತೇ ಜೀವನ ಸಾಗಿಸಿದ. ಕಾಡು ಪ್ರಾಣಿಗಳ ಧ್ವನಿಯನ್ನು ಕೇಳಿ, ಅದನ್ನು ತನ್ನ ಧ್ವನಿಯಲ್ಲಿ ಅನುಕರಣೆ ಮಾಡುತ್ತಾ, ತನ್ನ ಮನಸ್ಸಿನ ಭಾವನೆಗಳನ್ನು ಬೇರೊಬ್ಬರೊಂದಿಗೆ ಹಂಚಿಕೊಳ್ಳಲು ಪ್ರಾರಂಭಿಸಿದ.

ಕಾಲ ಕಳೆದಂತೆಲ್ಲಾ ಆದಿಮಾನವ ತನ್ನ ಆಚಾರ, ವಿಚಾರಗಳನ್ನು ಪರಿವರ್ತನೆ ಮಾಡಿಕೊಳ್ಳುತ್ತಾ ಹೊಸ ಹೊಸ ವಿಚಾರಗಳನ್ನು, ಚಮತ್ಕಾರಗಳನ್ನು ಮಾಡುತ್ತಾ ಭಾಷೆ ಎಂಬುದನ್ನು ಹುಟ್ಟು ಹಾಕಿದ. ಹೀಗೆ ಭಾಷೆಯಿಂದ ಪ್ರಾರಂಭವಾದ ಆದಿಮಾನವನ ಅವಿಷ್ಕಾರವು ಮುಂದೆ ಸಂಗೀತದ ಹುಟ್ಟಿಗೂ ಕಾರಣವಾಯಿತು. ಭಾರತೀಯ ಸಂಗೀತದ ಬಗ್ಗೆ ಪ್ರೊ. ಬಿ.ಡಿ.ಪಾಠಕ್‌ರವರು ನೀಡಿರುವ ಹೇಳಿಕೆ ಇಲ್ಲಿ ಸಮಂಜಸವಾಗಿದೆ. ಅವರ ಪ್ರಕಾರ ಭಾರತೀಯ ಸಂಗೀತದ ಇತಿಹಾಸವು ಕ್ರಿ.ಪೂ. ಸುಮಾರು ೫೫,೦೦೦ ವರ್ಷಗಳ ಹಿಂದೆಯೇ ಆರಂಭವಾಯಿತು(ಉಲ್ಲೇಖ: ಬಿಂದುಮಾಧವ ಪಾಠಕ್, ಭಾರತೀಯ ಸಂಗೀತದ ಚರಿತ್ರೆ, ಕನ್ನಡ ಅಧ್ಯಯನ ಪೀಠ, ಧಾರವಾಡ, ೧೯೭೫, ಪುಟ ಸಂಖ್ಯೆ ೦೮). ಈ ಯುಗವನ್ನು ಅಂಧಕಾರ ಯುಗವೆಂದು ಕರೆದಿದ್ದಾರೆ. ಇದನ್ನು ಶಿಲಾಯುಗ, ತಾಮ್ರಯುಗ ಮುಂತಾದಾಗಿ ವಿಂಗಡಿಸಲಾಗಿದೆ.

ಶಿಲಾಯುಗ ಕಾಲದ ಆದಿಮಾನವನಿಗೆ ಸಂಗೀತದಲ್ಲಿ ಆಸಕ್ತಿಯಿದ್ದು, ಆತ ಮೀನು ಹಿಡಿಯುವಾಗ, ಬೇಟೆಯಾಡುವಾಗ, ಪ್ರಣಯ ಸಂದರ್ಭದಲ್ಲಿ ಸಂಗಾತಿಯನ್ನು ಮೆಚ್ಚಿಸಲು ಅಗ್ಸಾ ಎಂಬ ಪಾಷಾಣದಿಂದ ನಿರ್ಮಿಸಿದ ವಾದ್ಯವನ್ನು ನುಡಿಸುತ್ತಿದ್ದ ಎಂಬುದರ ಬಗ್ಗೆ ಪಾಶ್ಚಾತ್ಯ ವಿದ್ವಾಂಸರಾದ ಗಲ್ಫ್ ಇಲ್ ಮಿಲ್ ಅವರು "ದಿ ಹಿಸ್ಟರಿ ಆಫ್ ಅರ್ಲಿ ಮ್ಯೂಜಿಕ್ ಆಫ್ ಇಂಡಿಯಾ" ಎಂಬ ಗ್ರಂಥದಲ್ಲಿ

ಅಭಿಪ್ರಾಯ ಪಟ್ಟಿದ್ದಾರೆ(ಉಲ್ಲೇಖ: ಬಿಂದುಮಾಧವ ಪಾಠಕ್, ಪೂರ್ವೋಕ್ತ, ೧೯೭೫, ಪುಟ ಸಂಖ್ಯೆ ೦೯).

"ಅಂಧಕಾರ ಯುಗದಲ್ಲಿ ಸಂಗೀತದ ಅಸ್ತಿತ್ವ ಅಜ್ಞಾತ ರೂಪದಲ್ಲಿತ್ತು. ಮಾನವನ ನಿತ್ಯ ಜೀವನದಲ್ಲಿ ಹಾಗೂ ನಿಸರ್ಗದಲ್ಲಿ ಅಡಗಿದ್ದ ಸಂಗೀತ ರೂಪದ ಯತಾರ್ಥ ವಿವೇಚನೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಆ ಕಾಲದಲ್ಲಿ ಸಂಗೀತಕ್ಕಾಗಿ ಯಾವ ವಿಶೇಷ ನಿಯಮಗಳು ಇರಲಿಲ್ಲ" -ಎಂದು ಪ್ರೊ. ಅರ್ಷ್ಟೀಸ್‌ರವರು "ದಿ ಬ್ಯಾಕ್‌ಗ್ರೌಂಡ್ ಆಫ್ ದಿ ಮ್ಯೂಜಿಕ್ ಎಂಬ ಗ್ರಂಥದಲ್ಲಿ ಹೇಳಿದ್ದಾರೆ(ಉಲ್ಲೇಖ: ಬಿಂದುಮಾಧವ ಪಾಠಕ್, ಪೂರ್ವೋಕ್ತ, ೧೯೭೫, ಪುಟ ಸಂಖ್ಯೆ ೦೯)

"ಕೇವಲ ಕಲ್ಪನೆಯಿಂದ ಆ ಯುಗದ ಮಾನವನಿಗೆ ಸಂಗೀತದ ಜ್ಞಾನವಿತ್ತು ಎಂದು ಹೇಳಬಹುದು. ಮಾನವನ ಸ್ವರಗಳಿಗೆ ಸಂಗೀತ ಎಂದು ಭಾವಿಸುವುದಾದರೆ ಅದರ ಹುಟ್ಟು ಭಾಷೆಯ ಉತ್ಪತ್ತಿಯ ಪೂರ್ವದಲ್ಲೇ ಆಗಿತ್ತು ಎಂದು ಹೇಳಬಹುದು" -ಎಂಬುದು " ದಿ ಹಿಸ್ಟರಿ ಆಫ್ ದ ಆರ್ಟ"ನ ಗ್ರಂಥಕಾರರಾದ ಬೇವೋರೆನ್ ಮಾಯಿಲ್ಸನ್‌ರವರ ಅಭಿಪ್ರಾಯ(ಉಲ್ಲೇಖ: ಬಿಂದುಮಾಧವ ಪಾಠಕ್, ಪೂರ್ವೋಕ್ತ, ೧೯೭೫, ಪುಟ ಸಂಖ್ಯೆ ೦೫) ದಿ ಹಿಸ್ಟರಿ ಆಫ್ ಮ್ಯೂಜಿಕ್ ಫ್ಯಾಕ್ಟ್ಸ್ ಎಂಬ ಗ್ರಂಥದ ರಚನಾಕಾರ ಶ್ರೀ ಉಮೇಶ್ ಜೋಶಿ ಹಾಗೂ ಮೊದಲಾದವರು ಈ ಮೇಲಿನ ಅಭಿಪ್ರಾಯಗಳನ್ನು ತಮ್ಮ ತಮ್ಮ ಪ್ರಬಂಧಗಳಲ್ಲಿ ಅನುಮೋದಿಸಿದ್ದಾರೆ(ಉಲ್ಲೇಖ: ಬಿಂದುಮಾಧವ ಪಾಠಕ್, ಪೂರ್ವೋಕ್ತ, ೧೯೭೫, ಪುಟ ಸಂಖ್ಯೆ ೧೦).

"ಸಂಗೀತ" ಈ ಪದವು ಸಂಸ್ಕೃತ ಭಾಷೆಯ ಮೂಲದಿಂದ ಬಂದಿದೆ. ಶಬ್ದಕೋಶವನ್ನು ಆಳವಾಗಿ ಅಭ್ಯಾಸ ಮಾಡಿದಾಗ ಸಂಗೀತ ಎಂಬ ಪದಕ್ಕೆ ನೃತ್ಯ, ವಾದ್ಯ, ಗೀತಗಳ ಸಂಗಮ, ಒಟ್ಟುಗೂಡಿ ಹಾಡಿದ ಹಾಡುವಿಕೆ, ಗಾಯನ, ಹಾಡುಗಾರಿಕೆ -ಎಂಬ ಅರ್ಥಗಳು ಇವೆ ಎಂಬುದು ತಿಳಿಯಬಹುದಾಗಿದೆ. ಆರಂಭದಲ್ಲಿ ಸಂಗೀತವೆಂದರೆ ನೃತ್ಯ, ವಾದ್ಯಗಳ, ಗೀತೆಗಳ ತ್ರಿವಳಿ ಸಂಗಮವಾಗಿತ್ತು. ನಂತರದಲ್ಲಿ ವ್ಯಕ್ತಿನಿಷ್ಠ ಹಾಡುಗಾರಿಕೆಯೂ ಸಂಗೀತವೆಂಬ ಅರ್ಥದಲ್ಲಿ ಪ್ರಚಾರವಾಯಿತು.

### ವೇದಗಳ ಕಾಲದಲ್ಲಿನ ಸಂಗೀತ

ವೇದಗಳ ಕಾಲದಲ್ಲಿ ಬರುವ ಋಗ್ವೇದ, ಯಜುರ್ವೇದ, ಸಾಮವೇದ ಹಾಗು ಅಥರ್ವಣ ವೇದಗಳನ್ನು ಆಳವಾಗಿ ಅಭ್ಯಾಸ ಮಾಡಿದಾಗ ಸಂಗೀತವು ಆ ಕಾಲದಲ್ಲೂ ಪ್ರಚಾರದಲ್ಲಿತ್ತು ಎಂದು ತಿಳಿಯಬಹುದಾಗಿದೆ. ಇದೇ ಕಾಲದಲ್ಲಿ ಋಷಿ ಮುನಿಗಳು ಯಜ್ಞ ಮಾಡುವಾಗ ಒಂದೇ ಸ್ವರದಿಂದ ಮಂತ್ರ ಪಠಣ ಮಾಡುತ್ತಿದ್ದರು. ಇದಕ್ಕೆ ಆರ್ಚಿಕ ಎಂದು ಕರೆದರು. ನಂತರದಲ್ಲಿ ಎರಡು ಸ್ವರಗಳನ್ನು ಮಂತ್ರ ಪಠಣಕ್ಕೆ ಬಳಸಿ ಗಾಥಿಕ ಎಂದು ಕರೆದರು. ಅದೇ ರೀತಿ ಮೂರು

ಸ್ವರಗಳನ್ನು ಉಪಯೋಗಿಸಿ ಅದಕ್ಕೆ ಸಾಮಿಕ ಎಂದು ಕರೆದರು. ಮುಂದೆ ನಾಲ್ಕು ಸ್ವರಗಳನ್ನು ಬಳಸಿ ಅದಕ್ಕೆ ಸ್ವರಾಂತರವೆಂದರು. ಹೀಗೆ ಕಾಲಕಳೆದಂತೆಲ್ಲಾ ಐದು, ಆರು, ಏಳು ಸ್ವರಗಳನ್ನು ಬಳಸಿಕೊಂಡು ಅವುಗಳನ್ನು ಕ್ರಮವಾಗಿ ಔಡವ, ಷಾಡವ ಹಾಗೂ ಸಂಪೂರ್ಣವೆಂದು ಕರೆದರು. ನಾಲ್ಕು ವೇದಗಳಲ್ಲಿ ಮೊದಲನೆಯದು ಋಗ್ವೇದ ನಂತರ ಯಜುರ್ವೇದ, ಸಾಮವೇದ ಹಾಗೂ ಅಥರ್ವಣ ವೇದ. ಸಂಗೀತದ ಕುರಿತು ನಮಗೆ ಅಧಿಕೃತ ಮಾಹಿತಿಗಳು ತಿಳಿದುಬರುವುದು ಈ ನಾಲ್ಕು ವೇದಗಳಿಂದಲೇ. ವೇದಗಳ ಕಾಲದ ಬಗ್ಗೆಯೂ ನಮ್ಮ ಸಂಗೀತಜ್ಞರಲ್ಲಿ, ವಿದ್ವಾಂಸರಲ್ಲಿ ಒಮ್ಮತದ ಅಭಿಪ್ರಾಯವಿಲ್ಲ. ಜರ್ಮನಿಯ ಮ್ಯಾಕ್ಸಮಲ್ಲರನ ಅಭಿಪ್ರಾಯದಂತೆ ವೇದಗಳು ಕ್ರಿ.ಪೂ. ೧೫೦೦-೧೨೦೦ರ ಮಧ್ಯ ರಚಿತವಾಗಿರಬೇಕು. ಲಂಡನ್ ವಿಶ್ವವಿದ್ಯಾಲಯದ ಭಾರತ ಅಧ್ಯಯನದ ಅಧ್ಯಾಪಕ ಭಾಷ್ಣಾಮರ ಪ್ರಕಾರ ವೇದಗಳ ಕಾಲ ಕ್ರಿ.ಪೂ. ೧೫೦೦-೧೦೦೦ ಎಂದಿದೆ(ಉಲ್ಲೇಖ: ಸರ್ಫ್ರಾಜ್ ಚಂದ್ರಗುತ್ತಿ, ಸುಗಮ ಸಂಗೀತ ಮತ್ತು ಕನ್ನಡ ಆಧುನಿಕ ಕವಿತೆ, ೨೦೦೭, ಪುಟ ೧೨). ಈ ವೇದಕಾಲದ ವೈದೀಕ ಯುಗದ ಪ್ರಾರಂಭವು ಏಷ್ಯಾ ಮೈನರ್ನಿಂದ ಭಾರತಕ್ಕೆ ಪ್ರವೇಶಿಸಿದ ಆರ್ಯರ ಜೊತೆ ಆಯಿತು ಎಂಬುದು ಇತಿಹಾಸಕಾರರ ಅಭಿಪ್ರಾಯವಾಗಿದೆ.

**ಋಗ್ವೇದ:** ಋಗ್ವೇದದ ವಾಕ್ಯಗಳಲ್ಲಿ ಸಾಮಗಾಯನದ ಪ್ರಸ್ತಾಪವಿದೆ. ಭಾರತೀಯ ಸಂಗೀತದ ಇತಿಹಾಸಕಾರ, ಗ್ರಂಥಕಾರರಾದ ಶ್ರೀ ಉಮೇಶ ಜೋಶಿಯವರು ಋಗ್ವೇದ ಕಾಲದ ಸಂಗೀತದ ಕುರಿತಾಗಿ ಹೇಳುವ ಈ ಮಾತುಗಳು ಇಲ್ಲಿ ಉಲ್ಲೇಖನೀಯ- "ಋಗ್ವೇದದ ಕಾಲದಲ್ಲಿ ಸಂಗೀತದ ಬೆಳವಣಿಗೆ ಮನೆಯೊಳಗೆ ನಡೆದಷ್ಟು ಹೊರಗಡೆ ನಡೆಯಲಿಲ್ಲ. ಸಂಗೀತದ ಪ್ರದರ್ಶನ ಸಾರ್ವಜನಿಕ ಕಾರ್ಯಕ್ರಮಗಳಲ್ಲಿಯೂ ಆಗುತ್ತಿತ್ತು. ಆದರೆ ಇಂತಹ ಸಂದರ್ಭಗಳು ತೀರಾ ಕಡಿಮೆ. ಪುರುಷರ ದಿನಚರಿ ಅನಿಶ್ಚಿತವಾಗಿತ್ತು, ಆದರೂ ಅವರಿಗೆ ಬೆಳಗಿನ ಅಥವಾ ಸಂಜೆಯ ಸಮಯದಲ್ಲಿ ಸಂಗೀತಕ್ಕೆ ಸಮಯ ದೊರಕುತ್ತಿತ್ತು. ಏಕೆಂದರೆ ಆ ಹೊತ್ತಿನಲ್ಲಿ ಅವರು ತಮ್ಮ ಇಷ್ಟ ದೇವತೆಗಳ ಆರಾಧನೆಯನ್ನು ಸಂಗೀತಮಯ ಪ್ರಾರ್ಥನೆಗಳಿಂದ ಮಾಡುತ್ತಿದ್ದರು. ಕೆಲವು ಸಲ ಸೋಮರಸ ಪಾನ ಮಾಡಿ ಸ್ತ್ರೀಯರು ಹಾಗೂ ಪುರುಷರು ಸಾಮೂಹಿಕ ನೃತ್ಯ ಮಾಡುತ್ತಿದ್ದರು. ಈ ಸಂಗೀತ ಹಾಗೂ ನೃತ್ಯಗಳ ಕಾರ್ಯಕ್ರಮ ಸಾಕಷ್ಟು ಗಂಟೆಗಳ ಕಾಲ ನಡೆಯುತ್ತಿತ್ತು"(ಉಲ್ಲೇಖ: ಬಿಂದುಮಾಧವ ಪಾಠಕ್, ಪೂರ್ವೋಕ್ತ, ೧೯೭೫, ಪುಟ ಸಂಖ್ಯೆ ೧೫) ಎಂಬ ಮಾತುಗಳಲ್ಲಿ ಆ ಕಾಲದಲ್ಲಿ ಸಂಗೀತವು ಜನರ ಜೀವನದಲ್ಲಿ ಹೇಗೆ ಹಾಸುಹೊಕ್ಕಿತ್ತು ಎಂಬ ಚಿತ್ರಣವನ್ನು ಕಾಣಬಹುದು.

ಋಗ್ವೇದದಲ್ಲಿ ಗೀತ, ಗೀರ್, ಗಾಯತ್ರ, ಗಾತ, ಸಾಮ ಮುಂತಾದ ಪದ ಪ್ರಯೋಗಗಳಿವೆ. ಹಾಗೇ ಗರ್ಗರ, ಪೂಣೆ, ಕರ್ಕರಿ, ಮೃದಂಗ, ವೀಣೆ, ವಂಶಿ, ಢಮರು ಮುಂತಾದ ವಾದ್ಯಗಳ ಉಲ್ಲೇಖವಿದೆ. ಇದರಿಂದ ಋಗ್ವೇದ ಕಾಲದಲ್ಲಿ ಸಂಗೀತದ ಅಂಗಗಳಾದ ಗೀತ, ವಾದ್ಯ, ನೃತ್ಯಗಳ ಪ್ರಚಾರವು ಇತ್ತೆಂಬುದರ ಬಗ್ಗೆ ತಿಳಿಯಬಹುದಾಗಿದೆ.

**ಯಜುರ್ವೇದ:** ಯಜುರ್ವೇದ ಕಾಲದಲ್ಲಿಯೂ ಯಾಗ-ಯಜ್ಞ ಮುಂತಾದ ಧಾರ್ಮಿಕ ಸಮಾರಂಭಗಳಲ್ಲಿ ಪಠಿಸುವ ಮಂತ್ರಗಳು ಬಹುತೇಕ ಸಂಗೀತಮಯವಾಗಿರುತ್ತಿದ್ದವು. ಸೋಮ ಯಾಗದ ಸಂದರ್ಭದಲ್ಲಿ ಸುಮನ್ ಮತ್ತು ಲೌಕಿಕ ಸಂಗೀತವನ್ನು ಹಾಡುತ್ತಿರುವುದರ ಬಗ್ಗೆ ಯಜುರ್ವೇದದಲ್ಲಿ ಉಲ್ಲೇಖವಿದೆ(ಉಲ್ಲೇಖ: ಸರ್ಫ್ರಾಜ್ ಚಂದ್ರಗುತ್ತಿ, ಸುಗಮ ಸಂಗೀತ ಮತ್ತು ಆಧುನಿಕ ಕನ್ನಡ ಕವಿತೆ, ಪುಟ ಸಂಖ್ಯೆ ೧೪).

ಯಜುರ್ವೇದದಲ್ಲಿ ವೀಣಾ, ಶಂಕ, ದುಂದುಬಿ ಇತ್ಯಾದಿ ವಾದ್ಯಗಳ ಉಲ್ಲೇಖವಿದೆ. ಗಾಯನದ ಜೊತೆಗೆ ಅಶ್ವಮೇದಗಳಂತಹ ಯಜ್ಞಗಳಲ್ಲಿ ಅಲಾಬು, ಭೋದಾವೀಣ, ಶರ್ಕರಿ, ಶತತಂತ್ರ ಮುಂತಾದ ವಿವಿಧ ಬಗೆಯ ವೀಣೆಗಳನ್ನು ಬಳಸುತ್ತಿರುವ ಬಗ್ಗೆ ಮಾಹಿತಿಗಳಿವೆ.

ಸಾಮದಂತಹ ವೈದಿಕ ಸಂಗೀತದಲ್ಲಿ ಗಾಥಾ, ನಾರಾಂಶಸಿ ಮುಂತಾದ ಲೋಕ ಸಂಗೀತಗಳು ಆ ಕಾಲದಲ್ಲಿ ರೂಢಿಯಲ್ಲಿದ್ದವು. ಸೂತ ಎಂಬ ಜಾತಿಯ ಜನರು ಇಂತಹ ಗೀತಗಳನ್ನು ಹಾಡಿಕೊಂಡು ನೃತ್ಯ ಮಾಡುವ ಕಲೆಗಳಲ್ಲಿ ನಿಪುಣರಾಗಿದ್ದು ರಾಜಾಶ್ರಯ ಪಡೆದಿದ್ದರು. ಪುರುಷರೊಂದಿಗೆ ಸ್ತ್ರೀಯರೂ ಗಾಯನ ವಾದನದಲ್ಲಿ ಸರಿಸಮಾನರಾಗಿ ಭಾಗವಹಿಸುತ್ತಿದ್ದರು(ಉಲ್ಲೇಖ: ಸರ್ಫ್ರಾಜ್ ಚಂದ್ರಗುತ್ತಿ, ಸುಗಮ ಸಂಗೀತ ಮತ್ತು ಆಧುನಿಕ ಕನ್ನಡ ಕವಿತೆ, ಪುಟ ಸಂಖ್ಯೆ-೧೪).

**ಸಾಮವೇದ**

'ಸಾಮ' ಎಂಬ ಶಬ್ದದ ಅರ್ಥ ಗಾನ ಅಥವಾ ಗೇಯ ಎಂಬುದಾಗಿದೆ. ಸಾಮವೇದವು ಸಂಪೂರ್ಣವಾಗಿ ಸಂಗೀತಮಯವಾದ ವೇದವಾಗಿದೆ. ಸಾಮವೇದದಲ್ಲಿ ಗಾಯನದ ಸ್ಥಾನವು ಅತೀ ಮಹತ್ವ ಪೂರ್ಣವಾಗಿದೆ. 'ವೇದಾನಾಂ ಸಾಮವೇದೋಸ್ಮಿ' -ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಹೇಳುತ್ತಾನೆ(ಉಲ್ಲೇಖ: ಸರ್ಫ್ರಾಜ್ ಚಂದ್ರಗುತ್ತಿ, ಸುಗಮ ಸಂಗೀತ ಮತ್ತು ಆಧುನಿಕ ಕನ್ನಡ ಕವಿತೆ, ಪುಟ ಸಂಖ್ಯೆ-೧೪). ಸಾಮವೇದದಲ್ಲಿ ಪಿಚೋಲ, ತಿಣವ, ಕಾಂಡವವೀಣಾ, ದುಂದುಭಿ ಮುಂತಾದ ಹೊಸ ಹೊಸ ಬಗೆಯ ವಿವಿಧ ವಾದ್ಯಗಳ ವಿವರಣೆ ಕಂಡು ಬರುತ್ತದೆ. ಸಾಮಗಾನವು ಸಪ್ತ ಸ್ವರಗಳ ವಿಕಾಸ ಕ್ರಮದ ಬಗೆಗೆ ವಿವರ ನೀಡುತ್ತದೆ. ಸಾಮವೇದವನ್ನು ಆಳವಾಗಿ ಅಭ್ಯಸಿಸಿದಾಗ ಆರ್ಚಿಕ, ಗಾಥಿಕ, ಸಾಮಿಕ, ಸ್ವರಾಂತರಗಳಿಂದ ಮಂತ್ರ ಪಠಣೆ ಮಾಡುವುದು ಕಂಡುಬರುತ್ತದೆ. ಆಧುನಿಕ ಸಂಗೀತ ಶಾಸ್ತ್ರದಲ್ಲಿ ಸಾಮವೇದದ ಈ ಸ್ವರಗಳು ಕೆಲಮಟ್ಟಿಗೆ ಬದಲಾವಣೆಯಾಗಿರುವುದು ಕಂಡುಬರುತ್ತದೆ. ಇಂತಹಾ ಸಾಮವೇದವನ್ನು ಸಂಗೀತಜ್ಞರು-

ಸಾಮವೇದಾದಿದಂ ಗ್ಭಿತಂ ಸಂಜಗ್ರಾಹ ಪಿತಾಮಹಃ ।
ಗೀತೇನ ಪ್ರೀಯತೇ ದೇವಃ ಸರ್ವಜ್ಞ ಪಾರ್ವತೀಪತಿಃ ॥

ಎಂದಿರುವುದು ಅತಿಶಯವೆನಿಸುವುದಿಲ್ಲ(ಉಲ್ಲೇಖ: ಲೀಲಾವತಿ ಹೆಚ್.ಆರ್., ಸುಗಮ ಸಂಗೀತ: ಒಂದು ಸಿಂಹಾವಲೋಕನ, ಸಂಗೀತ ನೃತ್ಯ ಅಕಾಡೆಮಿ, ಬೆಂಗಳೂರು, ೧೯೯೭ ಪುಟ ಸಂಖ್ಯೆ ೦೭).

ಒಟ್ಟಿನಲ್ಲಿ ಸಂಗೀತಜ್ಞರ, ಇತಿಹಾಸ ತಜ್ಞರ ಪ್ರಕಾರ ಸಾಮವೇದವು ಮೊಟ್ಟ ಮೊದಲ ವೇದಕಾಲದ ಮೈಲುಗಲ್ಲಾಗಿದ್ದು, ಸಂಗೀತ ಶಾಸ್ತ್ರಕ್ಕೆ ಒಂದು ನಿರ್ದಿಷ್ಟ ಸ್ಪಷ್ಟತೆ ದೊರೆತದ್ದು ಈ ಕಾಲದಲ್ಲಿಯೇ ಎಂಬುದು ಸಾಬೀತಾಗಿದೆ.

## ಅಥರ್ವಣ ವೇದ

ಅಥರ್ವಣ ವೇದದ ಕಾಲದಲ್ಲಿ ಗಾಥಾ, ನಾರಾಂಶಸಿ ಮುಂತಾದ ಲೋಕಗೀತೆಗಳ ಪ್ರಕಾರಗಳ ವರ್ಣನೆ ಸಿಗುತ್ತದೆ. ಹಾಗೆಯೇ ಸೋಮಪಾನವನ್ನು ಸೇವಿಸಿ ಗಂಧರ್ವರು ನರ್ತಿಸುವುದರ ಉಲ್ಲೇಖವೂ ಇದೆ. ಈ ಕಾಲದಲ್ಲಿ ಲೋಕಗೀತೆಗಳ ಪ್ರಚಾರ ಸಾಮಾನ್ಯ ಜನರಲ್ಲಿತ್ತು. ದೈನಂದಿನ ಬೇಸಾಯ, ಬೀಸುವಿಕೆ, ಸ್ತ್ರೀಯರೊಂದಿಗೆ ಪುರುಷರ ನೃತ್ಯಗಳಲ್ಲಿ ಹೀಗೆ ಮುಂತಾದ ಸಮಯಗಳಲ್ಲಿ ಲೋಕಗೀತೆಗಳ ಗಾಯನ ಸಾಮಾನ್ಯವಾಗಿತ್ತು.

ಈ ಕಾಲದಲ್ಲಿಯೂ ಅಘಟ, ದುಂದುಭಿ, ಕರ್ಕರಿಗಳೆಂಬ ಸಂಗೀತ ವಾದ್ಯಗಳ ಬಳಕೆ ಇತ್ತು. 'ಗೋಪಥ' ಎಂಬ ವಿಪ್ರ ಬ್ರಾಹ್ಮಣರಲ್ಲಿ ಸಂಗೀತವು ನಿಷೇದವೆಂದು ಹೇಳಲಾಗಿದೆ. ಏಕೆಂದರೆ ಅದರಲ್ಲಿನ ಅಲೌಕಿಕ ಹಾಗೂ ಆಧ್ಯಾತ್ಮಿಕ ವಿರೋಧಿ ಭಾವನೆಗಳನ್ನು ಅವರು ಒಪ್ಪುತ್ತಿರಲಿಲ್ಲ. ಆದರೆ ಸಾಮದಂತಹಾ ಉಚ್ಚ ಶ್ರೇಣಿಯ ಸಂಗೀತದ ಬಗ್ಗೆ ಜನರಲ್ಲಿ ಗೌರವ ಭಾವನೆಯಿತ್ತು. ಸಾಮವೇದದ ಕಾಲದ ಉನ್ನತ ಮಟ್ಟದ ಸಂಗೀತದ ಸ್ಥಾನಮಾನ ಈ ಅಥರ್ವಣ ವೇದದ ಕಾಲದಲ್ಲಿ ಇರಲಿಲ್ಲವೆಂದು ಹೇಳಬಹುದು.

## ಮಹಾಕಾವ್ಯಗಳಲ್ಲಿ ಸಂಗೀತ

ಭಾರತೀಯ ಪುರಾಣದ ಮಹಾಕಾವ್ಯಗಳಾದ ರಾಮಾಯಣ ಹಾಗು ಮಹಾಭಾರತಗಳಲ್ಲಿ ಸಂಗೀತದ ಬಗ್ಗೆ ಹಲವೆಡೆ ಉಲ್ಲೇಖಗಳು ಸಿಗುತ್ತವೆ. ಸಂಗೀತದ ಮೂರು ಅಂಗಗಳಾದ ಗಾಯನ, ವಾದನ ಹಾಗು ನೃತ್ಯಗಳು ಪ್ರಚಾರದಲ್ಲಿರುವುದರ ಬಗ್ಗೆ ವಿವರಣೆಗಳು ಸಿಗುತ್ತವೆ. ಶ್ರೀರಾಮ ಮತ್ತು ಸೀತೆಯ ಮಕ್ಕಳಾದ ಲವ, ಕುಶರು ವಾಲ್ಮೀಕಿ ಮಹರ್ಷಿಗಳಿಂದ ಸಂಗೀತವನ್ನು ಕಲಿತು, ಮಾರ್ಗೀ ಸಂಗೀತದ ಶೈಲಿಯಲ್ಲಿ ಹಾಡಿ, ಸಂಗೀತ ಪ್ರೇಮಿಗಳ ಮನಗೆದ್ದುದರ ಬಗ್ಗೆ ಬಿಂದುಮಾಧವ ಪಾಠಕ್‌ರವರು ತಮ್ಮ ಪ್ರಬಂಧದಲ್ಲಿ ಉಲ್ಲೇಖಿಸಿರುವುದನ್ನು ಇಲ್ಲಿ ಗಮನಿಸಬಹುದು.

ರಾಮಾಯಣ ಕಾಲದಲ್ಲಿ ಮಾರ್ಗೀಯ ಹಾಗು ದೇಶಿ ಎಂಬ ಎರಡು ಶೈಲಿಗಳ ಸಂಗೀತವು ಪ್ರಚಾರದಲ್ಲಿತ್ತು. ಗಾಯನದ ಜೊತೆಜೊತೆಗೆ ವಾದನವು ಗೌರವಯುತ ಸಂಗೀತವೆಂದು ಭಾವಿಸ

ಲಾಗುತ್ತಿತ್ತು. ವೀಣೆಗಳಲ್ಲಿ ವಿಪಂಚಿ, ವಲ್ಲಕೀ ಎಂಬ ಎರಡು ಪ್ರಕಾರಗಳು ಬಳಕೆಯಲ್ಲಿದ್ದವು. ಇವುಗಳಲ್ಲದೇ ಮೃದಂಗ, ಪಚಹ, ಪಣವ, ಡಿಂಡಿಮ, ಆಡಂಬರ್, ಶೋಖ, ದುಂದುಭಿ, ಮರಜ್, ಚೇಲಕ ಮುಂತಾದ ವಾದ್ಯಗಳ ಉಲ್ಲೇಖವು ದೊರೆಯುತ್ತವೆ. ಅಷ್ಟೇ ಅಲ್ಲದೆ ಲ್ಯಾಸ ಎಂಬ ನೃತ್ಯ ಪ್ರಕಾರವೂ ಸಹ ಪ್ರಚಾರದಲ್ಲಿತ್ತು.

ಶ್ರೀರಾಮ, ಸೀತೆ, ಲಕ್ಷ್ಮಣ, ದಶರಥ, ಹನುಮಂತ, ಸುಗ್ರೀವ, ಲವ, ಕುಶ ಮುಂತಾದವರು ಸಂಗೀತ ಪ್ರೇಮಿಗಳಾಗಿದ್ದರು. ಲಂಕಾಧಿಪತಿ ರಾವಣ ೬೪ ವಿದ್ಯೆಗಳ ಪಾರಂಗತನಾಗಿದ್ದನಲ್ಲದೇ ಸ್ವತಃ ಸಂಗೀತಗಾರನಾಗಿದ್ದ. ಇವನ ಆಸ್ಥಾನದಲ್ಲಿ ನೃತ್ಯಗಾರರು, ಸಂಗೀತಗಾರರು ಇದ್ದರು. ಇದಲ್ಲದೇ ರಾವಣ ಸಂಗೀತದ ಬಗ್ಗೆ 'ರಾಮಾಯಣೀಯಂ' ಎಂಬ ಗ್ರಂಥ ರಚಿಸಿದನೆಂಬ ಉಲ್ಲೇಖಗಳಿವೆ. ಇದರ ಕುರಿತಾಗಿ ಶ್ರೀ ಕೋಕಡನಿಯವರು ತಮ್ಮ 'ಸಂಗೀತದ ಸಂಕ್ಷಿಪ್ತ ಇತಿಹಾಸ' ಎಂಬ ಕೃತಿಯಲ್ಲಿ- "ರಾಮಾಯಣ ಕಾಲದಲ್ಲಿ ಜನರಲ್ಲಿ ಸಂಗೀತ ಶಿಕ್ಷಣದ ಬಗೆಗೆ ಅಭಿರುಚಿ ಬೆಳೆಯುತ್ತಿತ್ತು. ಬಾಲಕರಲ್ಲೂ ಸಂಗೀತ ಪ್ರೀಯತೆ ಕಂಡುಬರುತ್ತಿತ್ತು. ಸ್ತ್ರೀಯರು ತಮ್ಮ ಬಿಡುವಿನ ವೇಳೆಯಲ್ಲಿ ನೃತ್ಯ ಅಭ್ಯಾಸ ಮಾಡುತ್ತಿದ್ದರು. ಅನೇಕ ಪ್ರಕಾರದ ನೃತ್ಯಗಳ ಪ್ರಚಾರ ಈ ಕಾಲದಲ್ಲಿ ಆರಂಭವಾಯಿತು. ಮೃದಂಗ ವಾದ್ಯದ ಪ್ರಚಾರವೂ ಈ ಕಾಲದಲ್ಲಿತ್ತು. ರಾವಣ ಸ್ವತಃ ಶ್ರೇಷ್ಠ ಸಂಗೀತಜ್ಞನಾಗಿದ್ದುದರಿಂದ ಅವನ ರಾಜ್ಯದಲ್ಲಿಯೂ ಸಂಗೀತಕ್ಕೆ ಒಳ್ಳೆಯ ಸ್ಥಾನವಿತ್ತು" ಎಂದು ಬರೆದಿದ್ದಾರೆ"(ಉಲ್ಲೇಖ: ಬಿಂದುಮಾಧವ ಪಾಠಕ್, ಪೂರ್ವೋಕ್ತ, ಪುಟ ಸಂಖ್ಯೆ ೩೫).

ವಾಲ್ಮೀಕಿ ಮಹರ್ಷಿಗಳು ರಚಿಸಿದ ರಾಮಾಯಣದಂತೆಯೇ ಮಹಾಕವಿ ವ್ಯಾಸಮುನಿಗಳು ರಚಿಸಿದ ಮಹಾಭಾರತ ಕಾವ್ಯದಲ್ಲೂ ಸಂಗೀತದ ಬಗ್ಗೆ ಕೆಲವು ವಿವರಣೆಗಳು, ಉಲ್ಲೇಖಗಳನ್ನು ಕಾಣಬಹುದಾಗಿದೆ. ಮಹಾಭಾರತವು ಒಂದು ಲಕ್ಷ ಶ್ಲೋಕಗಳನ್ನು ಒಳಗೊಂಡಿದ್ದು ಅವುಗಳೆಲ್ಲವೂ ಸಂಗೀತಮಯವಾಗಿವೆ.

ಅಜ್ಞಾತ ವಾಸದ ಸಂದರ್ಭದಲ್ಲಿ ಬೃಹನ್ನಳೆಯ ವೇಷಧಾರಿಯಾದ ಅರ್ಜುನ, ವಿರಾಠ ರಾಜನ ಪುತ್ರಿಯಾದ ಉತ್ತರೆಗೆ ನೃತ್ಯ ಹಾಗು ಸಂಗೀತ ಕಲಿಸಿಕೊಟ್ಟಿರುವ ಬಗ್ಗೆ ಮಾಹಿತಿಗಳಿವೆ. ಇಡೀ ಮಹಾಭಾರತದ ಸೂತ್ರಧಾರಿಯಾದ ಶ್ರೀಕೃಷ್ಣ ಪರಮಾತ್ಮ ಮುರಳೀ ವಾದ್ಯ ಪ್ರವೀಣನೆಂಬುದು ಸರ್ವೇಸಾಮಾನ್ಯವಾಗಿ ಜನಸಾಮಾನ್ಯರೆಲ್ಲರಿಗೂ ತಿಳಿದಿರುವ ವಿಷಯವೇ ಆಗಿದೆ. ಭಗವದ್ಗೀತೆಯ ಪ್ರತೀ ಶ್ಲೋಕವನ್ನು ಶ್ರೀಕೃಷ್ಣ ಸಂಗೀತಮಯವಾಗಿಯೇ ಅರ್ಜುನನಿಗೆ ಉಲ್ಲೇಖಿಸಿದನು ಎಂಬುದರ ಬಗ್ಗೆಯೂ ಮಾಹಿತಿಗಳಿವೆ. ಹೀಗೆ ರಾಮಾಯಣ ಹಾಗು ಮಹಾಭಾರತಗಳೆಂಬ ಮಹಾಕಾವ್ಯಗಳಲ್ಲಿ ಸಂಗೀತದ ಇರುವಿಕೆಯನ್ನು ಕಾಣಬಹುದು.

**ಭಾರತೀಯ ಸಂಗೀತ ಶಾಸ್ತ್ರಜ್ಞರು:**

ಭಾರತೀಯ ಸಂಗೀತದ ಇತಿಹಾಸ ವೇದಪೂರ್ಣ ಕಾಲದಲ್ಲಿಯೇ ಆರಂಭವಾಗಿದ್ದು, ಅದು ಸ್ಪಷ್ಟರೂಪ ಪಡೆದುಕೊಂಡಿದ್ದು ವೇದಗಳ ಕಾಲದಲ್ಲೇ ಎನ್ನಬಹುದಾಗಿದೆ. ಆದರೂ ಅದಕ್ಕೊಂದು ಶಾಸ್ತ್ರೀಯವಾದ ರೂಪ, ಸ್ಥಾನ-ಮಾನ ನೀಡಿ ಬೆಳೆಸಲು ಪ್ರಯತ್ನ ಪಟ್ಟವರಲ್ಲಿ ಸಂಗೀತ ಶಾಸ್ತ್ರಜ್ಞರಾದ ಭರತಮುನಿ ಅಗ್ರಗಣ್ಯ ಎನ್ನುವುದು ಒಮ್ಮತದ ಅಭಿಪ್ರಾಯವಾಗಬಹುದು. "ಮತಂಗನ ಬೃಹದ್ದೇಶಿ, ನಾರದನ ಸಂಗೀತ ಮಾರ್ಕಂಡೇಯ, ಶಾರ್ಙ್ಗದೇವನ ಸಂಗೀತ ರತ್ನಾಕರ, ಹರಿಪಾಲನ ಸಂಗೀತ ಸುಧಾರಕ, ಅಹೋಬಲನ ಸಂಗೀತ ಪಾರಿಜಾತ, ರಾಮಮತ್ಯನ ಸ್ವರಮೇಳ ಕಲಾನಿಧಿ, ವಿದ್ಯಾರಣ್ಯರ ಸಂಗೀತಸಾರ, ವೆಂಕಟಮುಖಿಯ ಚತುರ್ದಂಡೀ ಪ್ರಕಾಶಿಕ, ತುಳಜನ ಸಂಗೀತ ಸಾರಾಮೃತ, ಪುಂಡಲೀಕ ವಿಠಲನ ರಾಗಮಾಲ ಮತ್ತು ಷಡಾಗ್ರ ಚಂದ್ರೋದಯ ಈ ಮುಂತಾದವರ ಕಾಲದಲ್ಲಿ ಮಾರ್ಗೀ ಸಂಗೀತದ ಸ್ವರೂಪದಲ್ಲಿದ್ದ ಭಾರತೀಯ ಸಂಗೀತ ನಂತರದ ದಿನಗಳಲ್ಲಿ ದೇಶೀ ಸಂಗೀತದ ಲೌಕಿಕ ವ್ಯಾಪಕತೆ, ಪ್ರಾದೇಶಿಕ ವೈವಿಧ್ಯ ರಂಜನಾ ಪ್ರಧಾನತೆ, ಮಾರ್ಗೀ ಸಂಗೀತದ ನಾಲ್ಕು ಸ್ವರಗಳನ್ನು ಮೀರಿ ಐದರಿಂದ ಏಳು ಸ್ವರಗಳ ಬಳಕೆಯತ್ತ ವಾಲಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ"(ಉಲ್ಲೇಖ: ತಿಪ್ಪೇರುದ್ರಸ್ವಾಮಿ ಹೆಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ೧೯೯೭, ಪುಟ ಸಂಖ್ಯೆ ೬೫೧). "ಕೆಲವರ ಅಭಿಪ್ರಾಯದಂತೆ ಭರತಮುನಿಯು ರಾಮಾಯಣ ಕಾಲದಲ್ಲಿದ್ದವನು, ಇನ್ನು ಕೆಲವರು ಅದಕ್ಕಿಂತ ಮೊದಲೇ ಇದ್ದವನು ಎನ್ನುತ್ತಾರೆ. ಕೆಲವರು ಭರತನು ನಾಲ್ಕನೇ ಶತಮಾನದಲ್ಲಿದ್ದನು ಎನ್ನುತ್ತಾರೆ. ಏಕೆಂದರೆ ವಾಲ್ಮೀಕಿ ಮಹರ್ಷಿಗಳ ರಾಮಾಯಣದಲ್ಲಿ ಭರತನ ಕೆಲವು ಸೂತ್ರಗಳ ಪ್ರತಿಪಾದನೆ ಸಿಗುತ್ತವೆ"(ರಾಜೀವ ಹಿರೇಮಠ, ಸಂಗೀತ ಸಂಜೀವಿನಿ, ಪುಟ ಸಂಖ್ಯೆ ೦೩).

ಭರತಮುನಿ ಗ್ರಂಥಕಾರನಲ್ಲದೇ ಶಾಸ್ತ್ರಜ್ಞ, ಸಂಗೀತಜ್ಞನೂ ಆಗಿದ್ದನು. ಇವನು ಸಂಗೀತದ ಬಗ್ಗೆ ಪ್ರಪ್ರಥಮವಾಗಿ 'ನಾಟ್ಯಶಾಸ್ತ್ರ' ಎಂಬ ಗ್ರಂಥವನ್ನು ರಚಿಸಿದ್ದನು. ಸಂಗೀತದ ಬಗ್ಗೆ ಸಮಗ್ರ ಮಾಹಿತಿಯುಳ್ಳ ಈ ಗ್ರಂಥದಲ್ಲಿ ಗೀತ, ವಾದ್ಯ, ನಾಟ್ಯ, ಶೃತಿ, ಸ್ವರ, ರಾಗ, ಜಾತಿ, ಅಲಂಕಾರ ಹಾಗೂ ಮೂರ್ಛನಗಳ ಬಗ್ಗೆ ವರ್ಣನೆ ಸಿಗುತ್ತದೆ. ಸಂಗೀತದ ವಿಷಯದ ಬಗ್ಗೆ ನಾಟ್ಯಶಾಸ್ತ್ರದಲ್ಲಿ ಸಿಗುವಷ್ಟು ಮಾಹಿತಿ, ವರ್ಣನೆ ಇತರ ಯಾವ ಗ್ರಂಥಗಳಲ್ಲೂ ಸಿಗುವುದಿಲ್ಲ. ೨೮ರಿಂದ ೩೩ನೇ ಅಧ್ಯಾಯದವರೆಗೆ ಈ ಗ್ರಂಥದಲ್ಲಿ ಸಂಗೀತದ ವಿಷಯಗಳು ಸಿಗುತ್ತವೆ.

ಏಳನೇ ಶತಮಾನದಲ್ಲಿ ನಾರದನೆಂಬ ಗ್ರಂಥಜ್ಞನು 'ನಾರದೀಯ ಶೀಕ್ಷಾ' ಎಂಬ ಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿ ಸಾಮವೇದದ ಸ್ವರಗಳಿಗೆ ವಿಶೇಷ ಮಹತ್ವ ನೀಡಿದ್ದಾನೆ. ಹಾಗೇ ಷಾಡವ, ಪಂಚಮ, ಮಧ್ಯಮ, ಷಡ್ಜ, ಗ್ರಾಮ, ಸಾಧರಿತ, ಕೈಶಿಕಮಧ್ಯಮ ಗ್ರಾಮಗಳೆಂಬ ಏಳು ಗ್ರಾಮಗಳ

ಬಗ್ಗೆ ಮಾಹಿತಿ ನೀಡಿದ್ದಾನೆ. ಈ ಗ್ರಂಥವಲ್ಲದೇ 'ಮಕರಂದ'ವೆಂಬ ಇವನ ಮತ್ತೊಂದು ಗ್ರಂಥದಲ್ಲಿ ರಾಗ-ರಾಗಿಣಿಗಳ ಬಗ್ಗೆ, ರಸಶಾಸ್ತ್ರ ಹಾಗು ಸಮಯದ ಬಗ್ಗೆ ವಿವರಿಸಿದ್ದಾನೆ.

ಎಂಟನೇಯ ಶತಮಾನದಲ್ಲಿ ಮತಂಗಮುನಿಯು 'ಬೃಹದ್ದೇಶಿ' ಎಂಬ ಗ್ರಂಥವನ್ನು ರಚಿಸಿದ್ದಾನೆ. ಇದರಲ್ಲಿ ಗ್ರಾಮ ಹಾಗು ಮೂರ್ಛನಗಳನ್ನು ಉಲ್ಲೇಖಿಸಿದ್ದಾನೆ. ಹಾಗೇ ರಾಗ, ಜಾತಿ, ಗ್ರಹ, ಅಂಶ, ಮಂದ್ರ, ಔಡವ, ಷಾಡವ, ಅಲ್ಪತ್ವ, ಬಹುತ್ವ ಹಾಗು ಉಪನ್ಯಾಸಗಳ ಬಗ್ಗೆ ವಿವರಿಸಿದ್ದಾನೆ.

**೨.೨. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ**

ಹನ್ನೊಂದನೇ ಶತಮಾನದಲ್ಲಿ ಮುಸಲ್ಮಾನರು ಧರ್ಮ ಪ್ರಚಾರ ಹಾಗೂ ರಾಜ್ಯ ವಿಸ್ತರಣೆಯ ಆಶಯವನ್ನು ಇಟ್ಟುಕೊಂಡು ಭಾರತ ದೇಶಕ್ಕೆ ಬಂದರು. ಪದೇ ಪದೇ ಆಕ್ರಮಣ ಮಾಡಿ ಭಾರತದ ಸಂಪತ್ತನ್ನು ಲೂಟಿ ಮಾಡಿದರು. ಮುಸಲ್ಮಾನರ ದಬ್ಬಾಳಿಕೆ ಹಾಗೂ ಆಡಳಿತಾರೂಢ ಆಜ್ಞೆಗಳಿಂದ ಮತ್ತು ಆಕರ್ಷಕ ಪ್ರಚೋದನೆಗಳಿಂದ ಅನೇಕ ಭಾರತೀಯರು ತಮ್ಮ ನೈತಿಕ ಮಟ್ಟವನ್ನು ಕಳೆದುಕೊಂಡರು. ಮುಸಲ್ಮಾನರ ದಾಳಿಯಿಂದ ಸಂಗೀತ ಹಾಗೂ ಸಂಸ್ಕೃತಿಗಳು ಹಾಳಾಯಿತು. ಆಗಿನ ಕಾಲದಲ್ಲಿ ಭಾರತೀಯ ಸಂಗೀತವು ಸಂಸ್ಕೃತ ಭಾಷೆಯಲ್ಲಿತ್ತು. ವೇದ, ಪುರಾಣ ಹಾಗೂ ಉಪನಿಷತ್ತುಗಳನ್ನು ಸಂಗೀತದಲ್ಲಿ ಋಷಿಮುನಿಗಳು ಬೆರೆಸಿ ತಮ್ಮ ದೈನಂದಿನ ಜಗತ್ತಿನಲ್ಲಿ ಸಂಗೀತವನ್ನು ಪೋಷಿಸಿ ಬೆಳೆಸುತ್ತಿದ್ದರು.

ಸಂಸ್ಕೃತ ಭಾಷೆಯಲ್ಲಿರುವ ಅಂದಿನ ಸಂಗೀತವನ್ನು ಮುಸಲ್ಮಾನರು ತಿಳಿಯಲು ಅಸಮರ್ಥರಾದರು. ಭಾಷೆ ಬೇರೆ ಬೇರೆ ಆಗಿದ್ದರಿಂದ ಸಂಗೀತದ ಭಾವನೆಗಳು ಅದರ ಅರ್ಥ ತಿಳಿಯದಾದರು. ಈ ಕಾರಣದಿಂದ ಮುಸಲ್ಮಾನರು ಭಾರತೀಯ ಸಂಗೀತದಲ್ಲಿ ತಮ್ಮ ಭಾಷೆಯ ಸಾಹಿತ್ಯವನ್ನು ಬೆರೆಸಲು ಭಾರತೀಯ ಸಂಗೀತಜ್ಞರ ಮೇಲೆ ಒತ್ತಡ ಹಾಕಿದರು. ಇದರಿಂದಾಗಿ ಭಾರತೀಯ ಸಂಗೀತದಲ್ಲಿ ಪರಿವರ್ತನೆಯಾಯಿತು, ಮಿಶ್ರರೂಪ ಕಂಡಿತು. ಈ ರೀತಿಯ ಬೆಳವಣಿಗೆಯಲ್ಲಿ ಹಲವು ಹೊಸ ಹೊಸ ರಾಗಗಳು, ವಾದ್ಯಗಳು, ಗಾಯನ ಪ್ರಕಾರಗಳು ಭಾರತೀಯ ಸಂಗೀತದಲ್ಲಿ ಹುಟ್ಟಿಕೊಂಡಿತು. ಈ ಹಿಂದೆ ಕಾಣದ ಸಂಗೀತದ ಬೆಳವಣಿಗೆ ದಿನೇ ದಿನೇ ಪ್ರಚಾರಗಳಿಸಿಕೊಳ್ಳುತ್ತಾ ದೇಶದ ತುಂಬೆಲ್ಲಾ ಹರಡಿತು. ಸಂಗೀತಕ್ಕೆ ಗಾಯಕರಿಗೆ, ವಾದಕರಿಗೆ ಅಂದಿನ ಮುಸಲ್ಮಾನ ಬಾದಷಾಹಗಳು ಪುರಸ್ಕಾರ, ಪ್ರೋತ್ಸಾಹ ಹಾಗೂ ಗೌರವವನ್ನು ಕೊಡಲಾರಂಭಿಸಿದರು.

ಅಲ್ಲಾವುದ್ದೀನ್ ಖಿಲ್ಜಿಯ ಕಾಲದಲ್ಲಿ ಫಾರಸಿ ರಾಗಗಳ ಆಗಮನ ಭಾರತ ದೇಶದಲ್ಲಾಯಿತು. ಸ್ವತಃ ಸಾಹಿತ್ಯಗಾರ ಹಾಗೂ ಸಂಗೀತಗಾರನಾದ ಖಿಲ್ಜಿಯು ತನ್ನ ದರಬಾರಿನಲ್ಲಿರುವ ಅಮೀರ್ ಖುಸ್ರೋ ಎಂಬ ಸಂಗೀತಜ್ಞನ ಸಹಾಯದಿಂದ ಹೊಸ ರೂಪವನ್ನು ಹೊಂದಿದ ಸಂಗೀತವನ್ನು ದೇಶದಲ್ಲೆಲ್ಲಾ ಪ್ರಚಾರ ಮಾಡಿದನು. ಈ ರೀತಿ ಹೊಸ ರೂಪ ಪಡೆದ ಸಂಗೀತವೇ ಕವಲೊಡೆದು

ಮುಂದೆ ಹಿಂದೂಸ್ತಾನಿ(ಉತ್ತರಾದಿ) ಸಂಗೀತವೆಂದು ಹಾಗೂ ಮೂಲ ಭಾರತೀಯ ಸಂಗೀತವು ಕರ್ನಾಟಕಿ(ದಕ್ಷಿಣಾದಿ) ಸಂಗೀತವೆಂದು ಕರೆಸಿಕೊಂಡಿತು.

ಶ್ರೇಷ್ಠ ಮಟ್ಟದ ಸಂಗೀತಜ್ಞ, ಗಾಯಕ ಹಾಗೂ ಕವಿಯೂ ಆಗಿದ್ದ ಅಮೀರ್ ಖುಸ್ರೋ ೧೩ನೇ ಶತಮಾನದಲ್ಲಿ ಅನೇಕ ರಾಗಗಳನ್ನು, ವಾದ್ಯಗಳನ್ನು ಹಾಗೂ ತಾಳಗಳನ್ನು ರಚಿಸಿದನು. ಈತನು ಭಾರತೀಯ ಸಂಗೀತದಲ್ಲಿ ತನ್ನ ದೇಶದ ರಾಗಗಳನ್ನು ಬೆರೆಸಿ ಒಂದು ಬಗೆಯ ನವೀನತೆಯನ್ನು ಸೃಷ್ಟಿಸಿದನು. ಅಮೀರ್ ಖುಸ್ರೋ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತಕ್ಕೆ ನೀಡಿದ ಅಮೂಲ್ಯ ಕೊಡುಗೆಗಳನ್ನು ನಾವು ಎಂದೂ ಮರೆಯುವಂತಿಲ್ಲ.

ಇತನು ಗೀತ ಪ್ರಕಾರಗಳಲ್ಲಿ ಗಜಲ್, ಕವ್ವಾಲಿ, ತರಾನಾ ಮತ್ತು ಖ್ಯಾಲಗಳನ್ನು, ರಾಗಗಳಲ್ಲಿ ಸಾಜಗಿರಿ, ಯಮನ್, ಪೂರಿಯಾ, ಪೂರ್ವಿ ಮುಂತಾದವುಗಳನ್ನು, ತಾಳಗಳಲ್ಲಿ ಝುಮ್ರಾ, ಅಡಾಚೌತಾಲ, ಸೂಲಫಾಕ್ತ, ಪೇಶ್ತೊ, ಸವಾರಿಗಳನ್ನು ಹಾಗೂ ಕರ್ನಾಟಕಿ ವಾದ್ಯವಾದ ವೀಣೆಯಲ್ಲಿ ಕೆಲವು ಸುಲಭದ ಬದಲಾವಣೆಗಳನ್ನು ಮಾಡಿ ಸೆಹತಾರ(ಸಿತಾರ್) ವಾದ್ಯವನ್ನು ಆವಿಷ್ಕರಿಸಿದನು. ಈ ವಾದ್ಯದ ಮೇಲೆ ನುಡಿಸುವಂತಹ ಅನೇಕ ರಚನೆಗಳನ್ನು ರಚಿಸಿ, ತನ್ನ ಮಗನಾದ ಫಿರೋಜ್‌ಖಾನ್‌ನ ಸಹಾಯದಿಂದ ಅದನ್ನು ಸಿತಾರ್ ವಾದ್ಯದಲ್ಲಿ ನುಡಿಸಿದನು. ಈ ರಚನೆಗಳು ಇಂದಿಗೂ ಫಿರೋಜ್‌ಖಾನಿಗತ್ ಎಂದೇ ಪ್ರಸಿದ್ಧವಾಗಿದೆ. "ಪಖವಾಜ ಎಂಬ ಅವನದ್ಧ ವಾದ್ಯವನ್ನು ಎರಡು ಭಾಗ ಮಾಡಿ ತಬಲಾ ವಾದ್ಯವನ್ನು ನಿರ್ಮಿಸಿದ ಬಗ್ಗೆ ಕೆಲ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ"(ಉಲ್ಲೇಖ: ಬಿಂದುಮಾಧವ ಪಾಠಕ್, ಭಾರತೀಯ ಸಂಗೀತದ ಚರಿತ್ರೆ, ೧೯೭೫, ಪುಟ ಸಂಖ್ಯೆ ೭೯).

ಹದಿನೈದನೇ ಶತಮಾನದಲ್ಲಿ ಮೊಗಲರು ಭಾರತದಲ್ಲಿ ತಮ್ಮ ಆಳ್ವಿಕೆಯನ್ನು ಪ್ರಾರಂಭಿಸಿದರು. ಮೊಗಲರ ದೊರೆಗಳಲ್ಲಿ ಅಕ್ಬರ ಬಾದಷಹಾ ಪ್ರಸಿದ್ಧಿ ಪಡೆದ ರಾಜನಾಗಿದ್ದು ಇವನ ರಾಜಾಶ್ರಯದಲ್ಲಿ ಪ್ರಸಿದ್ಧ ಸಂಗೀತಗಾರರಾದ ಸ್ವಾಮಿ ಹರಿದಾಸರು, ತಾನಸೇನರು, ಬೈಜು, ರಾಮದಾಸರು, ಪಾನರಂಗ, ದಿನಕರ ಪಂಡಿತ, ಗೋಪಾಲ ಲಾಲ, ಮದನಕಾಯ, ಸೌರಸೇನನಂತವರು ಇದ್ದರು. ಖ್ಯಾತ ಗಾಯಕ ತಾನಸೇನರು ಈ ಕಾಲದಲ್ಲಿ ದೃಪದ ಹಾಗೂ ದಮಾರ ಪ್ರಕಾರದ ಸಂಗೀತವನ್ನು ಜಗತ್‌ಪ್ರಸಿದ್ಧಿ ಮಾಡಿದರು. ತಾನಸೇನರು ಮಿಯಾಕಿತೋಡಿ, ಮಿಯಾಮಲ್ಹಾರ, ಮಿಯಾಕೀ ಸಾರಂಗ, ಸಾಜಗಿರಿ, ದರ್ಬಾರಿ ಕಾನ್ಹಡಾ ರಾಗಗಳನ್ನು ರಚಿಸಿದರು.

ಅಕ್ಬರನ ಮರಣದ ನಂತರ ಅವನ ಮಗನಾದ ಸಲೀಮ ಜಹಂಗೀರ ಪಟ್ಟಕ್ಕೇರಿದನು. ತಂದೆಯಂತೆ ಇವನು ಸಹ ಸಂಗೀತ, ಸಾಹಿತ್ಯದ ಪ್ರೇಮಿಯಾಗಿದ್ದನು. ಈತನು ಸ್ವತಃ ಸಿತಾರ ವಾದಕನಾಗಿದ್ದನು. ಈತನ ಕಾಲದಲ್ಲಿ ಪಂಡಿತ ಸೋಮನಾಥ "ರಾಗ-ವಿಭೋದಾ" ಎಂಬ ಗ್ರಂಥವನ್ನು ರಚಿಸಿದನು.

ಪಂಡಿತ ದಾಮೋದರನು "ಸಂಗೀತದರ್ಪಣ" ಎಂಬ ಗ್ರಂಥವನ್ನು ರಚಿಸಿದನು. ಸಂಗೀತ ದರ್ಪಣದಲ್ಲಿ ರಾಗ-ರಾಗಿಣಿಯ ಬಗ್ಗೆ ವಿವರಿಸಿದ್ದಾರೆ. ಅಕ್ಬರನ ಮಗ ಜಹಂಗೀರನ ಮರಣದ ನಂತರ ಅವನ ಮಗ ಷಹಜಾನನು ಕ್ರಿ.ಶ. ೧೬೨೮ರಲ್ಲಿ ಪಟ್ಟಕ್ಕೇರಿದನು. ತಂದೆ ಹಾಗೂ ಅಜ್ಜನಂತೆ ಇವನೂ ಸಂಗೀತ ಪ್ರೇಮಿಯಾಗಿದ್ದು ಇವನ ಕಾಲದಲ್ಲಿ ಸಂಗೀತವನ್ನು ದೇಶದುದ್ದಕ್ಕೂ ಪ್ರಚಾರ ಮಾಡಿದನು. ಇವನ ಕಾಲದಲ್ಲೇ "ಕಥಕ್" ನೃತ್ಯವು ಪ್ರಚಾರದಲ್ಲಿ ಬಂತು. ಇವನ ನಂತರ ಅಂದರೆ ಕ್ರಿ.ಶ. ೧೬೫೮ರ ನಂತರ ಔರಂಗಜೇಬನು ಪಟ್ಟಕ್ಕೇರಿದನು. ಇವನು ಸಂಗೀತದ ಪರಮ ಶತ್ರುವಾಗಿದ್ದನು. ಸಂಗೀತ ಕಲಾವಿದರಿಗೆ ಪ್ರೋತ್ಸಾಹ, ಸ್ಥಾನಮಾನ, ಗೌರವ ನೀಡುತ್ತಿರಲಿಲ್ಲ. ತನ್ನ ದರ್ಬಾರಿನಲ್ಲಿರುವ ಸಂಗೀತಗಾರರನ್ನು ಮನೆಗೆ ಕಳುಹಿಸಿದ್ದನು. ಆದ್ದರಿಂದ ಔರಂಗಜೇಬನನ್ನು ಸಂಗೀತಗಾರರು ಸಂಗೀತದ "ಸೈತಾನ್" ಎಂದೇ ಬೈಯುತ್ತಿದ್ದರು. ಇವನು ಸಂಗೀತದ ವಾದ್ಯಗಳನ್ನು ಭೂಮಿಯ ಆಳದಲ್ಲಿ ಹುಗಿಯಿರಿ ಎಂದು ಆಜ್ಞೆ ಮಾಡಿದ್ದನು.

ಔರಂಗಜೇಬನ ನಂತರದಲ್ಲಿ ಮಹಮ್ಮದ್ ಷಹಾ ರಂಗೀಲೆ ಮೊಗಲ ವಂಶದ ಕೊನೆಯ ರಾಜ ಪಟ್ಟಕ್ಕೇರಿದನು. ಈತನು ಸಂಗೀತಪ್ರೇಮಿಯಾಗಿದ್ದು, ಇವನ ದರ್ಬಾರಿನಲ್ಲಿ ಸಂಗೀತ ವಿದ್ವಾಂಸರಾದ ಸದಾರಂಗ ಹಾಗೂ ಅದಾರಂಗ ಎಂಬ ಸಂಗೀತಜ್ಞರಿದ್ದರು. ಸದಾರಂಗ ಹಾಗೂ ಅದಾರಂಗರವರು ಸಾವಿರಾರು ಖ್ಯಾಲಗಳ ಸಾಹಿತ್ಯವನ್ನು ರಚಿಸಿ ಅನೇಕ ಶಿಷ್ಯರನ್ನು ತಯಾರಿಸಿದರು. ವಾಸ್ತವವಾಗಿ ಖ್ಯಾಲಗಾಯನದ ಪ್ರಚಾರದ ಶ್ರೇಯಸ್ಸು ಇವರಿಬ್ಬರಿಗೇ ಸಲ್ಲುತ್ತದೆ. ಇವರ ಖ್ಯಾಲಗಳ ಸಾಹಿತ್ಯಗಳೇ ಇಂದು ಪ್ರಚಾರದಲ್ಲಿವೆ. ಇವರ ಗೀತೆಗಳಲ್ಲಿ ಮಹಮ್ಮದ್ ಷಾಹ ರಂಗೀಲೆ ಹೆಸರು ಅಲ್ಲಲ್ಲಿ ಕಂಡುಬರುತ್ತದೆ.

ಉದಾರಣೆಗೆ- ಭೂಪ ರಾಗದ ಛೋಟಾಖ್ಯಾಲಿನ ಸಾಹಿತ್ಯ:

ಸ್ಥಾಯಿ-

ಭೈರನ ಬಯಿ ರಾತ ಸಖಿಯಾ

ಮನಲಾಗಿ ರೇ.........

ಅಂತರಾ-

ಮೌಮದ (ಮಹಮ್ಮದ) ಷಾ ಪಿಯ

ಸದಾರಂಗೀಲೆ ಬಾತೆ ಕರತಾರೆ.........

ಮೊಗಲರ ಆಳ್ವಿಕೆಯ ಸಂದರ್ಭದಲ್ಲಿ ಭಾರತೀಯ ಸಂಗೀತದ ಮೇಲೆ ಹೊಸ ಅಲೆ ಉಂಟಾದದ್ದು ನಿಜ. ಈ ಹಿನ್ನೆಲೆಯಲ್ಲಿ ಎಸ್.ಕೆ. ರಾಮಚಂದ್ರರಾವ್‌ರವರ ಈ ಮಾತು ಉಲ್ಲೇಖನೀಯ. "ಹಾಡಿಕೆ ಕೇವಲ ಕಲೆಯಾಗಿ ಕಾಣಿಸಿಕೊಂಡುದುದು ನಮ್ಮ ದೇಶದಲ್ಲಿ ನಾನೂರು ಐನೂರು ವರ್ಷಗಳಿಂದೀಚೆಗೆ

ಅಷ್ಟೆ; ಅದೂ ಮೊಗಲ್ ಅರಸರ ಒತ್ತಾಸೆಯಿಂದ ಉತ್ತರ ಭಾರತದಲ್ಲಿ ಮೊದಲಾಯಿತು. ದಕ್ಷಿಣದಲ್ಲಿ ಅದು ಬರಿಯ ಕಲಾಪ್ರಕಾರವಾಗಿ ತೋರಿಕೊಂಡು ಇನ್ನೂರು-ಮುನ್ನೂರು ವರ್ಷಗಳೂ ಆಗಿಲ್ಲ. ಮೊದಲಿನಿಂದ ಕೀರ್ತನೆ, ಸಂಕೀರ್ತನೆ, ನಗರ ಕೀರ್ತನೆಗಳು ಧಾರ್ಮಿಕ ಸಮಾರಂಭದ ಅಂಗವಾಗಿಯೇ ಇರುತ್ತಿದ್ದವು. ಇಂದಿಗೂ ಸಂಗೀತಕ್ಕೆ ದಕ್ಷಿಣ ದೇಶದಲ್ಲಿ ಧಾರ್ಮಿಕ ಕಳೆಯೇ ಮುಖ್ಯವಾಗಿರುವುದು"(ಉಲ್ಲೇಖ: ರಾಮಚಂದ್ರರಾವ್ ಎಸ್.ಕೆ., ಸಂಗೀತ ಇತಿಹಾಸ ಪರಂಪರೆ, ೧೯೯೩, ಪುಟ ಸಂಖ್ಯೆ-೦೩)

೧೮ನೇ ಶತಮಾನದ ಕೊನೆಯಲ್ಲಿ ಮುಸಲ್ಮಾನ ದೊರೆಗಳ, ಮೊಗಲರ ಆಳ್ವಿಕೆ ಕೊನೆಯಾಯಿತು. ಇದೇ ಸಮಯದಲ್ಲಿ ಭಾರತ ದೇಶದ ಮೇಲೆ ಬ್ರಿಟೀಷರ ಅಧಿಕಾರ ದಿನೇ ದಿನೇ ಬೆಳೆಯುತ್ತಾ ಹೋಯಿತು. ಭಾರತೀಯ ಶಾಸ್ತ್ರೀಯ ಸಂಗೀತವನ್ನು ಇಂಗ್ಲೀಷರು ಒಳ್ಳೆಯ ದೃಷ್ಟಿಯಿಂದ ನೋಡುತ್ತಿರಲಿಲ್ಲ. ರಾಜಾಶ್ರಯದಿಂದ ಹೊರಬಂದು ಸ್ವತಂತ್ರ ರೂಪದಿಂದ ಸಣ್ಣ, ಪುಟ್ಟ ಸಂಸ್ಥಾನಗಳಲ್ಲಿ ಸಂಗೀತಗಾರರು ನೆಲೆಸಿದರು. ಈ ಕಾಲದಲ್ಲಿ ಹಿಂದೂಸ್ತಾನಿ ಸಂಗೀತದಲ್ಲಿ ಹಿಂದೂ ಹಾಗೂ ಫಾರಸಿಯ ಭಾಷೆಗಳ ಸುಂದರ ಮಿಶ್ರಣವಾಯಿತು.

೧೯ನೇ ಶತಮಾನದಲ್ಲಿನ ಆಧುನಿಕ ಕಾಲದ ಸಂಗೀತವನ್ನು ಪುನರುದ್ಧಾರ ಮಾಡಿ, ಪ್ರಚಾರ ಮಾಡಿದ ಶ್ರೇಯಸ್ಸು ಭಾರತದ ಮಹಾನ್ ಸಂಗೀತಜ್ಞರಾದ ದಿವಂಗತ ಪಂ.ವಿಷ್ಣು ನಾರಾಯಣ ಭಾತಖಂಡೆ ಹಾಗೂ ದಿವಂಗತ ಪಂ.ವಿಷ್ಣು ದಿಗಂಬರ ಪಲ್ಲೂಸ್ಕರರಿಗೆ ಸಲ್ಲುತ್ತದೆ. ಪಂ.ವಿಷ್ಣು ನಾರಾಯಣ ಭಾತಖಂಡೆಯವರು ಅನೇಕ ಸಂಗೀತ ವಿದ್ಯಾಲಯಗಳನ್ನು ಸ್ಥಾಪಿಸಿದರು. ಮನೆ-ಮನೆಗಳಲ್ಲಿ ಸಂಗೀತದ ಅಭಿರುಚಿ ಹೆಚ್ಚಿಸಿದರು. ಸಂಗೀತ ಸಮ್ಮೇಳನ ಆಯೋಜಿಸಿದರು. ಹಾಗೂ ಅನೇಕ ಸಂಗೀತಮಯ ಪುಸ್ತಕಗಳನ್ನು ಬರೆದರು. ಲಕ್ನೋದಲ್ಲಿ "ಮಾರಿಸ್ ಮ್ಯೂಜಿಕ್ ಕಾಲೇಜ್" (ಈಗಿನ ಹೆಸರು ಭಾತಖಂಡೇ ಕಾಲೇಜ್ ಆಫ್ ಮ್ಯೂಜಿಕ್), ಗ್ವಾಲಿಯರ್‌ನಲ್ಲಿ "ಮಾಧವ ಸಂಗೀತ ವಿದ್ಯಾಲಯ", ಬರೋಡಾದಲ್ಲಿ ಮ್ಯೂಜಿಕ್ ಕಾಲೇಜು ಸ್ಥಾಪನೆ ಮಾಡಿದರು. ಇದೇ ರೀತಿ ಪಂ.ವಿಷ್ಣು ದಿಗಂಬರ ಪಲ್ಲೂಸ್ಕರರು ಲಾಹೋರಿನಲ್ಲಿ 'ಗಂಧರ್ವ ಮಹಾವಿದ್ಯಾಲಯ' ಸ್ಥಾಪಿಸಿದರು.

೨೦ನೇ ಶತಮಾನದ ಪೂರ್ವಾರ್ಧದಲ್ಲಿ ಅಂದರೆ ೧೯೫೦ರ ಆಸುಪಾಸಿನಲ್ಲಿ ಹಿಂದೂಸ್ತಾನಿ ಸಂಗೀತವು ಭಾರತೀಯ ಜನರಿಂದ ಬಹಳ ದೂರ ಉಳಿದಿತ್ತು. ಇದನ್ನು ಗಮನಿಸಿ ಪಂ. ವಿಷ್ಣು ನಾರಾಯಣ ಭಾತ್ಕಂಡೆ ಹಾಗೂ ಪಂ. ವಿಷ್ಣು ದಿಗಂಬರ ಪಲ್ಲೂಸ್ಕರರವರು ತಮ್ಮ ತಮ್ಮ ಅನುಭವ ಹಾಗೂ ಮಾನಸಿಕ ಕ್ಷಮತೆಯ ಆಧಾರದ ಮೇಲೆ ಸಂಗೀತದ ಪ್ರಚಾರಕ್ಕೋಸ್ಕರವಾಗಿ ಸ್ವರಲಿಪಿ ಹಾಗೂ ತಾಳಲಿಪಿ ಪದ್ಧತಿಗಳನ್ನು ರಚಿಸಿದರು. ಇದಕ್ಕೂ ಮುನ್ನ ಹಿಂದೂಸ್ತಾನಿ ಸಂಗೀತಕ್ಕೆ ಸಾಹಿತ್ಯವಿತ್ತು, ಆದರೆ ಲಿಪಿಯ ಆಧಾರದ ಮೇಲೆ ಅದನ್ನು ಬರೆಯುವ ಪದ್ಧತಿ ಇರಲಿಲ್ಲ.

ಆದಕಾರಣ ಅದೆಷ್ಟೋ ಸಾಹಿತ್ಯಗಳು ಲಿಪಿ ಇಲ್ಲದೇ ನಶಿಸಿಹೋದವು. ಸಂಗೀತವನ್ನು ಉಳಿಸಲು ಹಾಗೂ ಬೆಳೆಸಲು ಇವರಿಬ್ಬರೂ ಭಾರತ ದೇಶದ ಹಳ್ಳಿ ಹಳ್ಳಿಗಳಲ್ಲಿ ಸಂಗೀತದ ಪ್ರಚಾರ ಮಾಡಿದರು. ಇವರಿಬ್ಬರ ಸ್ವರಲಿಪಿ, ತಾಳಲಿಪಿ ಪದ್ಧತಿಗಳನ್ನು ಗಮನಿಸಿದಾಗ ಪಂ. ಭಾತಖಂಡೆಯವರಿಗಿಂತ ಪಂ. ಪಲ್ಲೂಸ್ಕರವರ ಸ್ವರಲಿಪಿಯಲ್ಲಿ ಹೆಚ್ಚಿನ ಚಿಹ್ನೆಗಳು ಇವೆ. ಹಾಗೇ ಪಂ. ಭಾತಖಂಡೆಯವರ ಸ್ವರಲಿಪಿಯು ಕಡಿಮೆ ಚಿಹ್ನೆಗಳಿಂದ ಕೂಡಿದ್ದು ಜನಸಾಮಾನ್ಯರಿಗೆ ತಿಳಿದುಕೊಳ್ಳಲು ಸರಳ ಹಾಗೂ ಸುಲಭವಾಗಿದೆ. ಆದ್ದರಿಂದಲೇ ಭಾರತದ ತುಂಬೆಲ್ಲಾ ಪಂ. ಭಾತಖಂಡೆಯವರ ಸ್ವರಲಿಪಿ ಹಾಗೂ ತಾಳಲಿಪಿ ಪದ್ಧತಿಗಳು ಪ್ರಸಿದ್ಧಿಯನ್ನು ಪಡೆದಿವೆ.

ಸ್ವರಲಿಪಿ ಪದ್ಧತಿಯು ಸಂಗೀತದ ಕನ್ನಡಿ ಇದ್ದಂತೆ. ಶಾಸ್ತ್ರೀಯ ಸಂಗೀತವನ್ನು ಕಲಿಯುವ ಶಿಷ್ಯರಿಗೆ, ವಿದ್ಯಾರ್ಥಿಗಳಿಗೆ ಸ್ವರಲಿಪಿಯು ಒಂದು ಸುಲಭ ವಿಧಾನವಾಗಿದೆ. ಸಂಗೀತ ಪರಂಪರೆಯ ಚೀಜ್‌ಗಳನ್ನು ಅಂದರೆ ಸಾಹಿತ್ಯವನ್ನು ಸ್ವರಲಿಪಿಯಲ್ಲಿ ಬರೆದಿಟ್ಟಿರುವುದರಿಂದ ಶಾಸ್ತ್ರೀಯ ಸಂಗೀತವು ಇಂದಿಗೂ ಸುರಕ್ಷಿತವಾಗಿದೆ, ಅಜರಾಮರವಾಗಿದೆ.

ಇಂದಿನ ಸಂಗೀತ ಪಾಠಶಾಲೆಗಳಲ್ಲಿ, ಶಾಲೆ ಕಾಲೇಜುಗಳಲ್ಲಿ ಸಂಗೀತದ ಅಧ್ಯಾಪಕರು ಶಿಷ್ಯವೃಂದಕ್ಕೆ ಸಂಗೀತವನ್ನು ಹೇಳಿಕೊಡುವುದರ ಜೊತೆ ಜೊತೆಗೆ ಅದೇ ಸಂಗೀತವನ್ನು ಸ್ವರಲಿಪಿ ಪದ್ಧತಿಯಲ್ಲಿ ಬರೆದಿಡುವುದನ್ನು ಕಲಿಸಿಕೊಡುತ್ತಾರೆ. ಅದರಂತೆಯೇ ಇಂದಿನ ಸಂಗೀತದ ವಿದ್ಯಾರ್ಥಿಗಳು ಯಾವುದೇ ಸಂಗೀತವನ್ನು ಕೇಳಿದಾಗ ಅದನ್ನು ನೆನಪಿನಲ್ಲಿ ಇಟ್ಟುಕೊಳ್ಳುವ ಸಲುವಾಗಿ ಅದನ್ನು ಸ್ವರಲಿಪಿಯಲ್ಲಿ ಬರೆದಿಡುವ ಅರ್ಹತೆ ಪಡೆದಿರುತ್ತಾರೆ. ಸ್ವರಲಿಪಿ ಹಾಗೂ ತಾಳಲಿಪಿ ಪದ್ಧತಿಯು ಸಂಗೀತ ಕಲಿಯುವವರಿಗೆ ಹಾಗೇ ಕಲಿಸುವವರಿಗೆ ಒಂದು ದಾರಿದೀಪವಾಗಿದೆ ಎಂದರೆ ಅತಿಶಯವಾಗಲಾರದು.

ಸುಮಾರು ಹತ್ತೊಂಭತ್ತನೇ ಶತಮಾನದ ೫೦–೬೦ರ ದಶಕಗಳಲ್ಲಿ ಆಕಾಶವಾಣಿ ಮತ್ತು ಚಲನಚಿತ್ರಗಳು ಹಾಗೂ ೭೦ರ ದಶಕದಲ್ಲಿ ದೂರದರ್ಶನವು ಎಲ್ಲಾ ಪ್ರಕಾರದ ಸಂಗೀತಗಳನ್ನು, ಸಂಗೀತ ಕಲಾವಿದರನ್ನು ಭಾರತ ದೇಶದಾದ್ಯಂತ ಪ್ರಚಾರಗೊಳಿಸಿದವು.

ಈ ರೀತಿ ಹನ್ನೊಂದನೇ ಶತಮಾನದಿಂದ ಇಪ್ಪತ್ತನೇ ಶತಮಾನದವರೆಗೆ ಹಿಂದೂಸ್ತಾನಿ ಸಂಗೀತವು ಹಲವು ರೀತಿಯಲ್ಲಿ ಭಾರತ ದೇಶದುದ್ದಕ್ಕೂ ಪ್ರಚಾರವನ್ನು ಕಂಡು ಸಂಗೀತಗಾರರನ್ನು, ವಾದಕರನ್ನು, ಸಂಗೀತಜ್ಞರನ್ನು ಬೆಳೆಸಿತು. ಹಾಗೇ ಗುರುಶಿಷ್ಯ ಪರಂಪರೆಯು ಸಂಗೀತವನ್ನು ಮುನ್ನೆಡೆಸಿತು.

## ೨.೩ ಕರ್ನಾಟಕದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಬೆಳವಣಿಗೆ

ಕರ್ನಾಟಕದಲ್ಲಿ ಹಿಂದೂಸ್ತಾನಿ ಹಾಗು ಕರ್ನಾಟಕ ಶಾಸ್ತ್ರೀಯ ಸಂಗೀತ ಪದ್ಧತಿಗಳೆರಡೂ ಪ್ರಚಾರದಲ್ಲಿರುವುದು ಮಹತ್ವದ ಸಂಗತಿಯಾಗಿದೆ. ಕರ್ನಾಟತ ಸಂಗೀತ ಹಿಂದೂಸ್ತಾನಿ ಸಂಗೀತಕ್ಕಿಂತ

ಮೊದಲೇ ಕರ್ನಾಟಕ ರಾಜ್ಯದಲ್ಲಿ ಭದ್ರವಾಗಿ ನೆಲೆಯೂರಿದ್ದು, ಹಿಂದೂಸ್ತಾನಿ ಸಂಗೀತವು ಕಾಲಕ್ರಮೇಣ ತನ್ನ ಇರುವಿಕೆಯನ್ನು ಸಾಬೀತುಪಡಿಸಿದೆ. ಕರ್ನಾಟಕ ಸಂಗೀತವು ಕರ್ನಾಟಕ ರಾಜ್ಯದ ಮೈಸೂರು, ತಮಿಳುನಾಡು, ಆಂಧ್ರಪ್ರದೇಶ, ಕೇರಳ ರಾಜ್ಯಗಳಲ್ಲಿ ಹೆಚ್ಚು ಪ್ರಚಾರದಲ್ಲಿದೆ. ಹಾಗೇ ಹಿಂದೂಸ್ತಾನಿ ಸಂಗೀತವು ಕರ್ನಾಟಕ ರಾಜ್ಯದ ಉತ್ತರ ಭಾಗ ಹಾಗೂ ಭಾರತ ದೇಶದ ಉತ್ತರ ಭಾಗದಲ್ಲಿರುವ ಮಹಾರಾಷ್ಟ್ರ, ಉತ್ತರ ಪ್ರದೇಶ, ಬಿಹಾರ, ಪಶ್ಚಿಮ ಬಂಗಾಳದ ಕಲ್ಕತ್ತಾ, ಮಧ್ಯಪ್ರದೇಶಗಳಲ್ಲಿ ಹೆಚ್ಚು ಪ್ರಚಾರದಲ್ಲಿದೆ. ಕರ್ನಾಟಕ ರಾಜ್ಯದಲ್ಲಿ ಈ ಎರಡೂ ಸಂಗೀತ ಪದ್ಧತಿಗಳು ಪ್ರಚಾರದಲ್ಲಿರುವುದು ಮಹತ್ವದ ಸಂಗತಿಯಾಗಿದೆ. ಹಾಗೇ ಹಿಂದೂಸ್ತಾನಿ ಸಂಗೀತವು ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿ ಹಾಗೂ ಕರ್ನಾಟಕ ಸಂಗೀತವು ಕರ್ನಾಟಕ ರಾಜ್ಯದ ದಕ್ಷಿಣ ಭಾಗದಲ್ಲಿ ಬಳಕೆಯಲ್ಲಿರುವುದು ವಿಶೇಷವಾಗಿದೆ.

ಕರ್ನಾಟಕ ರಾಜ್ಯದಲ್ಲಿ ಅಧಿಕೃತವಾಗಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಆರಂಭವಾದದ್ದು ಹದಿನಾರನೇ ಶತಮಾನದ ಬಿಜಾಪುರದ ದೊರೆ ಎರಡನೇ ಇಬ್ರಾಹಿಂ ಆದಿಲ್‌ಶಾಹನ ಕಾಲದಲ್ಲಿ. ಬಹುಮುಖ ಪ್ರತಿಭೆಯುಳ್ಳವನಾಗಿದ್ದ ಈತ ಸ್ವತಃ ಕವಿ, ಚಿತ್ರಗಾರ ಹಾಗೂ ಸಂಗೀತಗಾರನಾಗಿದ್ದ. ಅಲ್ಲದೇ ಸಂಸ್ಕೃತ, ಫಾರಸಿ ಭಾಷೆಗಳನ್ನು ಬಲ್ಲವನಾಗಿದ್ದು, ದ್ರುಪದ ಗೀತೆಗಳನ್ನು ತಾನೇ ರಚಿಸಿ ಹಾಡುತ್ತಿದ್ದ. ಇತನ ಕಾಲದಲ್ಲಿ ಬಿಜಾಪುರ ಲಲಿತಕಲೆಗಳ 'ಮೆಕ್ಕಾ' ಆಗಿತ್ತು. ದೇಶದೆಲ್ಲಡೆ ಕಲೆ ಮತ್ತು ಸಂಸ್ಕೃತಿಗಾಗಿ ಉನ್ನತ ಸ್ಥಾನ-ಮಾನ ಪಡೆದ ಬಿಜಾಪುರ ನಗರವನ್ನು ರಸ ಕಿ ಖಾನ (ರಸದ ಕಲೆಗಳ ಗಣಿ) ಎಂದೇ ಭಾವಿಸಲಾಗಿತ್ತು. ಎರಡನೇಯ ಇಬ್ರಾಹಿಂ ಆದಿಲ್‌ಶಾಹ 'ನವರಸ' ಎಂಬ ಹಿಂದೂ ಸಂಗೀತಗಾರನ ನೆನಪಿಗಾಗಿ ಬಿಜಾಪುರದಿಂದ ನಾಲ್ಕು ಮೈಲಿ ದೂರದಲ್ಲಿ 'ನವರಸಪುರ' ಎಂಬ ಹೆಸರಿನ ನಗರವನ್ನು ನಿರ್ಮಿಸಿದ್ದ. ಆ ನಗರದ ಮಧ್ಯ ಭಾಗದಲ್ಲಿ 'ನವರಸ' ಎಂಬ ಹೆಸರಿನ ಮಹಲನ್ನು ನಿರ್ಮಿಸಿ ತನ್ನ ಬಹುತೇಕ ಸಮಯವನ್ನು ಅಲ್ಲೇ ಕಳೆಯುತ್ತಿದ್ದ. ಅದಕ್ಕೆ ಸಂಗೀತಮಹಲ್ ಎಂದೂ ಹೆಸರಿದೆ.

ಎರಡನೇ ಇಬ್ರಾಹಿಂ ಆದಿಲ್‌ಶಾಹನು ೧೬೦೦ರಲ್ಲಿ 'ಕಿತಾಬೆ ನೌರಸ' ಎಂಬ ಸಂಗೀತಮಯ ಗ್ರಂಥವನ್ನು ರಚಿಸಿದನು. ಈ ಗ್ರಂಥದಲ್ಲಿ ಅನೇಕ ದೃಪದ್ ಕೃತಿಗಳಿವೆ. ಈ ಕೃತಿಗಳಲ್ಲಿ ೫೯ ಗೀತೆಗಳು, ೧೭ ದೋಹಾಗಳಿವೆ. ರಾಗ ಮತ್ತು ರಚನೆಗಳನ್ನು ಒಳಗೊಂಡ ಕಿತಾಬೆ ನೌರಸ ಕೃತಿಯಲ್ಲಿ ರಾಮಕಲಿ, ಅಸವರಿ, ಗೌರಿ, ಭೂಪಾಲಿ, ಧನಶ್ರೀ ರಾಗಗಳಲ್ಲಿ ತಲಾ ಎರಡು ರಚನೆಗಳಿವೆ. ಪೂರ್ವ, ದೇಸಿ ರಾಗದಲ್ಲಿ ತಲಾ ಒಂದು, ತೋಡಿ, ಕಲ್ಯಾಣ್ ಹಾಗೂ ಕೇದಾರ ರಾಗಗಳಲ್ಲಿ ತಲಾ ನಾಲ್ಕು ರಚನೆಗಳಿವೆ. ಕಾನಡಾ ರಾಗದಲ್ಲಿ ೧೯ ಹಾಗೂ ಮಲ್ಹಾರ ರಾಗದಲ್ಲಿ ೫ ರಚನೆಗಳಿದ್ದು, ಕಾನಡ ರಾಗವು ಇಬ್ರಾಹಿಂ ಆದಿಲ್‌ಶಾಹನಿಗೆ ಅಚ್ಚು ಮೆಚ್ಚಿನ ರಾಗವಾಗಿತ್ತು.

ಇಬ್ರಾಹಿಂ ಆದಿಲ್‌ಶಾಹನ ಆಸ್ಥಾನದಲ್ಲಿ ಸುಮಾರು ನಾಲ್ಕು ಸಾವಿರಕ್ಕಿಂತ ಹೆಚ್ಚು ಸಂಗೀತಗಾರರು ಆಶ್ರಯ ಪಡೆದಿದ್ದರು. ಅವರಲ್ಲಿ ಅನೇಕರು ಬನಾರಸ ಹಾಗೂ ಭಾರತ ದೇಶದ ವಿವಿಧ ಪ್ರದೇಶಗಳಿಂದ ಬಂದವರಾಗಿದ್ದರು. ದಿಲ್ಲಿಯ ದೊರೆ ಅಕ್ಬರ ಬಾದಶಾಹನಿಗೂ ಇಬ್ರಾಹಿಂ ಆದಿಲ್‌ಶಾಹನು ಹಿಂದೂಸ್ತಾನಿ ಗಾಯಕನಾಗಿದ್ದ ಎಂಬುದು ತಿಳಿದಿತ್ತು. ಇಬ್ರಾಹಿಂ ಆದಿಲ್‌ಶಾಹನ ದ್ರುಪದ ರಚನೆಗಳು ದೆಲ್ಲಿಯವರೆಗೂ ಎಲ್ಲರ ಗಮನ ಸೆಳೆದಿದ್ದವು. ತಾನಸೇನನ ನಂತರ ಅಕ್ಬರನ ಆಸ್ಥಾನದಲ್ಲಿ ಬೈಜೂ ಎಂಬ ಗಾಯಕನಿದ್ದ. ಅಕ್ಬರ ಬಾದಶಹ ಇಬ್ರಾಹಿಂ ಆದಿಲ್‌ಶಾಹನ ದ್ರುಪದ ರಚನೆಗಳನ್ನು ಕಲಿಯಲು ಬೈಜೂನನ್ನು ತನ್ನ ಮಂತ್ರಿ ಅಸದ ಬೇಗನೊಂದಿಗೆ ಬಿಜಾಪುರಕ್ಕೆ ಕಳುಹಿಸಿಕೊಟ್ಟ. ಆದರೆ ದುರಾದೃಷ್ಟಕ್ಕೆ ಬೈಜೂ ಬಿಜಾಪುರಕ್ಕೆ ಆಗಮಿಸುವುದರೊಳಗೇ ದೊರೆ ಅಕ್ಬರ ಬಾದಶಹ ತೀರಿಕೊಂಡ ವಿಷಯ ತಿಳಿದು ದಿಲ್ಲಿಗೆ ಹಿಂದಿರುಗಿದ.

ಹದಿನೈದು ಮತ್ತು ಹದಿನಾರನೇ ಶತಮಾನದಲ್ಲಿ ಎರಡನೇ ಇಬ್ರಾಹಿಂ ಆದಿಲ್‌ಶಾಹ(೧೫೮೦–೧೬೨೬) ಉತ್ತರ ಕರ್ನಾಟಕ ಭಾಗದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಉಳಿಸಿ, ಬೆಳಸಿದಂತೆಯೇ ಹದಿನೆಂಟನೇ ಶತಮಾನದಲ್ಲಿ ದಕ್ಷಿಣ ಕರ್ನಾಟಕ ಭಾಗದಲ್ಲಿ ಮೈಸೂರಿನ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರವರ ಕಾಲದಲ್ಲಿ(೧೮೮೪–೧೯೪೦) ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಮರುಹುಟ್ಟು ಪಡೆಯಿತು. ಉತ್ತರ ಭಾರತದ ಹಲವು ಸಂಗೀತಗಾರರು ಮೈಸೂರಿಗೆ ಬಂದು ಹೋಗುತ್ತಿದ್ದರು. ಮೈಸೂರಿನ ಅರಸರಾಗಿದ್ದ ಒಡೆಯರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು, ನಾಲ್ವಡಿ ಕೃಷ್ಣರಾಜ ಒಡೆಯರು ಹಾಗೂ ಜಯಚಾಮರಾಜ ಒಡೆಯರು ಹಿಂದೂಸ್ತಾನಿ ಸಂಗೀತ ಪದ್ಧತಿಯು ಕರ್ನಾಟಕ ರಾಜ್ಯದಲ್ಲೆಲ್ಲಾ ಹೆಮ್ಮರವಾಗಿ ಬೆಳೆದು ನಿಲ್ಲಲು ಕಾರಣೀಕರ್ತರಾದವರು. ದೇಶದಾದ್ಯಂತ ಪ್ರಸಿದ್ಧಿ ಪಡೆದ ಖ್ಯಾತ ಹಿಂದೂಸ್ಥಾನಿ ಸಂಗೀತಗಾರರನ್ನು ಇವರು ತಮ್ಮ ಆಸ್ಥಾನಕ್ಕೆ ಆಹ್ವಾನಿಸಿ ಉತ್ತಮ ಸಂಭಾವನೆ ನೀಡಿ, ಕಾರ್ಯಕ್ರಮ ನಡೆಸಿ ಗೌರವಿಸುತ್ತಿದ್ದರು. ಇವರ ಆಸ್ಥಾನದಲ್ಲಿ ಆಗ್ರಾ ಘರಾಣೆಯ ನತ್ಥನ್ ಖಾನ್, ಮೌಲಾಭಕ್ಷ, ಕೇಶವ ಬುವಾ ಹಾಗೂ ಸುಪ್ರಸಿದ್ಧ ಠುಮರಿ ಗಾಯಕಿ ಗೋಹರಜಾನರು ಆಸ್ಥಾನ ಗಾಯಕರಾಗಿದ್ದರು.

ಪ್ರತಿ ವರ್ಷ ನಡೆಯುವಂತಹಾ ಮೈಸೂರು ದಸರಾ ಉತ್ಸವಕ್ಕೆ ಒಡೆಯರ ಅರಸರು ಭಾರತದ ಮೂಲೆ ಮೂಲೆಗಳಿಂದ ಖ್ಯಾತ ಹಿಂದೂಸ್ತಾನಿ ಸಂಗೀತಗಾರರನ್ನು ಆಹ್ವಾನಿಸುತ್ತಿದ್ದರು. ಹೀಗೆ ಮೈಸೂರಿಗೆ ಆಗಮಿಸುತ್ತಿದ್ದ ಸಂಗೀತಗಾರರು ಬರುವಾಗ ಹುಬ್ಬಳ್ಳಿ–ಧಾರವಾಡಗಳಲ್ಲಿ ಸಂಗೀತ ಕಛೇರಿ ನೀಡುತ್ತಿದ್ದರು. ಇದರಿಂದಾಗಿ ಈ ಭಾಗದ ಜನರಿಗೆ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಕೇಳುವ ಹಾಗೂ ಕಲಿಯುವ ಆಸಕ್ತಿ ಹುಟ್ಟಿಕೊಂಡಿತು. ಈ ರೀತಿಯಾಗಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಖ್ಯಾತ ಸಂಗೀತಗಾರರಾದ ಕಿರಾಣಾ ಘರಾಣೆಯ ಉಸ್ತಾದ್ ಅಬ್ದುಲ್ ಕರೀಂಖಾನರು,

ಗ್ವಾಲಿಯರ್ ಘರಾಣೆಯ ಪಂ. ನೀಲಕಂಠ ಬುವಾರವರು, ಜೈಪುರ-ಅತ್ರೌಲಿ ಘರಾಣೆಯ ಉಸ್ತಾದ್ ಅಲ್ಲಾದಿಯಾ ಖಾನರು, ಮಂಜೀಖಾನ್, ಬುರ್ಜಿಖಾನರು ಹಾಗೇ ಆಗ್ರಾ ಘರಾಣೆಯ ವಿಲಾಯತ್ ಹುಸೇನ್ ಖಾನರು, ಸಿತಾರ ರತ್ನ ರಹಿಮತ್ ಖಾನರು ಕರ್ನಾಟಕ ರಾಜ್ಯದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಬೆಳವಣಿಗೆಗೆ ನಾಂದಿ ಹಾಡಿದರು.

ಅಧ್ಯಾಯ ೩

# ಘರಾಣೆ ಶಬ್ದದ ಅರ್ಥ, ವಿಶ್ಲೇಷಣೆ

## ೩.೧ ಘರಾಣೆ ಶಬ್ದದ ಅರ್ಥ

ಘರಾನ, ಘರಾಣಾ ಅಥವಾ ಘರಾಣೆ ಎಂಬ ಶಬ್ದವು ಹಿಂದಿ ಭಾಷೆಯ ಪದವಾಗಿದ್ದು, ಘರ್ + ಆನಾ(ಮನೆಗೆ ಬಾ) ಎಂಬುದು ಈ ಶಬ್ದದ ಅರ್ಥವಾಗಿದೆ. "ಘರ್" ಎಂಬುದು ಘರಾಣೆ ಶಬ್ದದ ಮೂಲವಾಗಿದ್ದು, ಸಂಸ್ಕೃತ ಭಾಷೆಯ "ಗೃಹ" ಎಂಬ ಶಬ್ದದಿಂದ ಇದನ್ನು ತೆಗೆದುಕೊಳ್ಳಲಾಗಿದೆ. ವಂಶ, ಕುಲ, ಪರಿವಾರ, ಕುಟುಂಬ, ಪರಂಪರೆ ಅಥವಾ ಮನೆತನ ಎಂಬುದು ಈ ಪದದ ಅರ್ಥವಾಗಿರುತ್ತದೆ. ಗುರುಗಳಿಂದ ಶಿಷ್ಯರಿಗೆ ಹಾಗೇ ಶಿಷ್ಯರಿಂದ ಅವರ ಶಿಷ್ಯರಿಗೆ, ಅಥವಾ ತಂದೆಯಿಂದ ಮಗನಿಗೆ, ಮಗನಿಂದ ಮೊಮ್ಮಗನಿಗೆ ಹೀಗೆ ಕನಿಷ್ಠ ಮೂರು ತಲೆಮಾರು ಬೆಳೆದು ಬಂದ ಗಾಯನ ಮಾಡುವ ಅಥವಾ ವಾದನ ನುಡಿಸುವ ಶೈಲಿಗೆ ಘರಾಣೆ ಎಂದು ಕರೆಯಲಾಗಿದೆ. ಒಟ್ಟಿನಲ್ಲಿ ಮೂರಕ್ಕೂ ಹೆಚ್ಚು ತಲೆಮಾರು ಪ್ರಚಾರ ಹಾಗೂ ಪ್ರಸಿದ್ಧಿಗಳನ್ನು ಪಡೆದಂತಹಾ ಗಾಯನ ಅಥವಾ ವಾದನ ಶೈಲಿಗೆ "ಘರಾಣೆ" ಎನ್ನಲಾಗಿದೆ.

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಸಂಪೂರ್ಣವಾಗಿ ಅರಿತು, ಗಮನವಿಟ್ಟು ಕೇಳಿದವರಿಗೆ ಪ್ರತಿಯೊಬ್ಬ ಕಲಾವಿದನು ತನ್ನದೇ ಆದ ಕಲ್ಪನೆಯಲ್ಲಿ, ಒಂದು ನಿರ್ದಿಷ್ಟವಾದ ಶೈಲಿಗೆ ಬದ್ಧನಾಗಿ, ಆ ಚೌಕಟ್ಟಿನೊಳಗೇ ತನ್ನ ಪ್ರತಿಭೆಯನ್ನು ಪ್ರದರ್ಶಿಸುವುದು ಕಂಡುಬರುತ್ತದೆ. ಇಬ್ಬರು ಕಲಾವಿದರ ಪ್ರಾತೀಕ್ಷತೆಗಳನ್ನು ತುಲನಾತ್ಮಕವಾಗಿ ಆಲಿಸಿದಾಗ ಅಲ್ಲಿ ಏನೋ ಒಂದು ವ್ಯತ್ಯಾಸವಿರುವುದು ಕಂಡುಬರುತ್ತದೆ. ಈ ವ್ಯತ್ಯಾಸಕ್ಕೆ ಕಾರಣವೇ ಅವರಿಬ್ಬರು ಪ್ರಸ್ತುತಪಡಿಸುವ ಶೈಲಿಯಾಗಿರುತ್ತದೆ. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದಲ್ಲಿರುವ ಈ ರೀತಿಯ ವಿವಿಧ ಶೈಲಿಗಳನ್ನೇ ಘರಾಣೆ ಎನ್ನಲಾಗಿದೆ.

ಒಂದು ಮನೆತನದ ಪೂರ್ವಜರು ತಮ್ಮತಮ್ಮ ಮನೆತನದ ರೀತಿ,ರಿವಾಜು ಮತ್ತು ಕೌಶಲಗಳನ್ನು ತಮ್ಮ ಮಕ್ಕಳಿಗೆ, ಮೊಮ್ಮಕ್ಕಳಿಗೆ ಹೇಗೆ ಹೇಳಿಕೊಡುವರೋ ಅದೇ ಪದ್ಧತಿ ಶಾಸ್ತ್ರೀಯ ಸಂಗೀತದಲ್ಲೂ ಬೆಳೆದುಬಂದಿದೆ. ಒಂದು ಮನೆತನದಲ್ಲಿ ತಂದೆ, ತಾಯಿಗಳು ಹೇಗೆ ಪ್ರಮುಖರೋ ಅದೇ ರೀತಿ

ಶಾಸ್ತ್ರೀಯ ಸಂಗೀತದಲ್ಲಿ ಗುರು, ಶಿಷ್ಯರು ಪ್ರಮುಖರಾಗಿರುತ್ತಾರೆ. ತಂದೆ, ತಾಯಿಗಳ ಅಂಗ ಅಂಶಗಳನ್ನು ಹಂಚಿಕೊಂಡ ಮನೆತನದ ಮಕ್ಕಳಂತೆ, ಶಾಸ್ತ್ರೀಯ ಸಂಗೀತದ ಘರಾಣೆಯಲ್ಲಿ ಶಿಷ್ಯರು ಗುರುವಿನ ಸಂಗೀತದ ನಿರ್ದಿಷ್ಟ ಶೈಲಿ, ರೀತಿ ನೀತಿಗಳನ್ನು ಹೊಂದಿರುತ್ತಾರೆ.

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಖ್ಯಾಲ ಪ್ರಕಾರದಲ್ಲಿ ಕ್ರಿಯಾಶೀಲತೆಗೆ ಹೆಚ್ಚು ಪ್ರಾಧಾನ್ಯತೆ ಇರುವುದರಿಂದ ಸಂಗೀತದ ವೈಶಿಷ್ಟ್ಯತೆಗಳು ವಿವಿಧ ಘರಾಣೆಗಳ ರೂಪದಲ್ಲಿ ಬೆಳೆದು ನಿಂತಿವೆ. ಶಾಸ್ತ್ರೀಯ ಸಂಗೀತದ ನವನವೀನ ವಿಷಯಗಳು ಆವಿಷ್ಕಾರವಾದಂತೆ, ಹೆಚ್ಚೆಚ್ಚು ವಿಷಯಗಳ ಸಂಗ್ರಹಣೆ ನೆನಪಿನಲ್ಲಿಡಬೇಕಾಗುತ್ತದೆ. ಸಂಗ್ರಹಿಸಿದ ವಿಷಯಗಳನ್ನು ಗುಂಪುಗಳಾಗಿ ಬೇರ್ಪಡಿಸುವುದು, ರಾಗಗಳ ಬಂದೀಷಗಳು, ತಾನುಗಳು, ಬೋಲತಾನುಗಳು ಕಲಾವಿದನ ನೈಪುಣ್ಯತೆಯ ಆಧಾರದಮೇಲೆ ಹೊರಹೊಮ್ಮುತ್ತದೆ. ಈ ತರಹದ ತಾಲೀಮುಗಳನ್ನು ಗುರುಮುಖೇನವಾಗಿಯೇ ಕಲಿಬೇಕಾಗುತ್ತದೆ. ಹೀಗೆ ಗುರುವಿನ ಮುಖಾಂತರ ಕಲಿಯುವ ನಿರ್ದಿಷ್ಟ ಶೈಲಿಯನ್ನೇ ಘರಾಣೆ ಎನ್ನಲಾಗಿದೆ.

ಘರಾಣೆ ಎಂಬುದು ಶಾಸ್ತ್ರೀಯ ಸಂಗೀತದ ಪ್ರಪಂಚದಲ್ಲಿ ನೂರಾರು ವರ್ಷಗಳಿಂದಲೇ ಬೆಳೆದುಕೊಂಡು ಬಂದಿದೆ. ಆದರೂ ಪ್ರಾಚೀನ ಕಾಲದಲ್ಲಿ ಘರಾಣೆಗಳು ಇರಲಿಲ್ಲವೆಂದು ಹೇಳಲಾಗುವುದಿಲ್ಲ. ಆಗಲೂ ಘರಾಣೆ ಹಾಗು ಅದರ ಪದ್ಧತಿಗಳು ಇದ್ದವು. ಆದರೆ ಘರಾಣೆ ಎಂಬ ಶಬ್ದವು ಪ್ರಚಾರದಲ್ಲಿರಲಿಲ್ಲ. ಶಾಸ್ತ್ರೀಯ ಸಂಗೀತದ ಶಿಕ್ಷಣ ಗುರುಕುಲ ಪದ್ಧತಿಯಂತೆ ವೇದಕಾಲದಿಂದಲೂ ಬೆಳೆದು ಬಂದಿದೆ ಎಂಬುದನ್ನು ನಮ್ಮ ಸಂಗೀತಜ್ಞರ ಗ್ರಂಥಗಳಿಂದ ತಿಳಿಯಬಹುದಾಗಿದೆ. ಪ್ರಾಚೀನ ಕಾಲದಲ್ಲಿ ತಂದೆ ಮಗನಿಗೆ ಶಾಸ್ತ್ರೀಯ ಸಂಗೀತ ಪಾಠ ಮಾಡುವಂತೆಯೇ ಅನ್ಯ ಶಿಷ್ಯರನ್ನೂ ತನ್ನ ಮಗನಂತೆಯೇ ತಿಳಿದು ಅವನಿಗೂ ಸರಿಸಮಾನ ವಾಗುವಂತೆ ತಾರತಮ್ಯ ಮಾಡದೇ ಶಾಸ್ತ್ರೀಯ ಸಂಗೀತ ಶಿಕ್ಷಣ ನೀಡುತ್ತಿದ್ದರು. ಈ ಸಂಪ್ರದಾಯ ಪ್ರಾಚೀನ ಕಾಲದಿಂದಲೂ ಬೆಳೆದುಕೊಂಡು ಬಂದಿದೆ. ಈ ರೀತಿಯಾಗಿ ಕಲುಷಿತಗೊಳ್ಳದೇ, ವಿರೂಪಗೊಳ್ಳದೇ ಒಂದು ನಿರ್ದಿಷ್ಟ ಕುಟುಂಬದ ರೀತಿ-ನೀತಿಗಳ ಆಧಾರಗಳ ಮೇಲೆ ಬೆಳೆದು ಬಂದ ಶಾಸ್ತ್ರೀಯ ಸಂಗೀತದ ಪದ್ಧತಿಗೆ, ಶೈಲಿಗೆ ಘರಾಣೆ ಎಂದು ಕರೆಯಲಾಗಿದೆ.

## ೩.೨ ಘರಾಣೆಯ ಸ್ವರೂಪ

ಘರಾಣೆಗಳ ಉಗಮ, ವಿಕಾಸಗಳನ್ನು ಅರಿಯುವಾಗ ಅದರ ಬೆಳವಣಿಗೆಗೆ ಆಯಾ ಘರಾಣೆಯ ಕಲಾವಿದರೂ ಕೂಡಾ ಕಾರಣಿಕರ್ತರಾಗಿರುತ್ತಾರೆ ಎಂಬುದು ತಿಳಿದು ಬರುತ್ತದೆ. ಸಮಾಜದಲ್ಲಿ ಮನೆತನ,ಕುಟುಂಬಕ್ಕೆ ಯಾವ ಸ್ಥಾನ-ಮಾನ ನೀಡಲಾಗಿದೆಯೋ ಅದೇ ಸ್ಥಾನ-ಮಾನವನ್ನು ಶಾಸ್ತ್ರೀಯ ಸಂಗೀತದ ಕ್ಷೇತ್ರದಲ್ಲಿ ಘರಾಣೆಗೆ ನೀಡಲಾಗಿದೆ. ಈ ಘರಾಣೆಗಳು ಶಾಸ್ತ್ರೀಯ ಸಂಗೀತದ ಅಭಿವೃದ್ಧಿ ಹಾಗು ಸಂಗೀತದ ಬಾಂಧವ್ಯ ಬೆಳೆಯಲು ಸಹಾಯ ಮಾಡುತ್ತವೆ. ಪ್ರತಿಯೊಂದು ಘರಾಣೆಗಳೂ ಶಾಸ್ತ್ರೀಯ ಸಂಗೀತದ ಅಂಗ ಹಾಗು ಅಡಿಪಾಯಗಳಾಗಿವೆ. ಈ ಘರಾಣೆಗಳ

ಮೇಲೆಯೇ ಶಾಸ್ತ್ರೀಯ ಸಂಗೀತದ ಅಭಿವೃದ್ಧಿಯಾಗುತ್ತದೆ. ಮನೆತನ, ಕುಟುಂಬದ ಅವನತಿಯು ಹೇಗೆ ಸಮಾಜದ ಅವನತಿಗೆ ಕಾರಣವಾಗುವುದೋ ಅದೇ ರೀತಿ ಘರಾಣೆಗಳ ಅವನತಿಯು ಶಾಸ್ತ್ರೀಯ ಸಂಗೀತದ ಅವನತಿಗೆ ಕಾರಣವಾಗುತ್ತವೆ. ಕುಟುಂಬದ ಪ್ರತಿಯೊಬ್ಬ ಸದಸ್ಯನ ಚಾರಿತ್ರ್ಯವು ಹೇಗೆ ಸಮಾಜದ ಒಟ್ಟಾರೆ ಚಾರಿತ್ರ್ಯಕ್ಕೆ ಕಾರಣವಾಗುತ್ತದೆಯೋ ಅದೇ ರೀತಿ ಪ್ರತೀ ಘರಾಣೆಯ ಸೌಂದರ್ಯ, ವೈವಿಧ್ಯತೆಗಳು ಶಾಸ್ತ್ರೀಯ ಸಂಗೀತದ ಏಳಿಗೆಗೆ ಕಾರಣವಾಗುತ್ತದೆ. ಕುಟುಂಬವು ತನ್ನ ಪ್ರತಿಯೊಬ್ಬ ಸದಸ್ಯನನ್ನು ಹೇಗೆ ಸ್ನೇಹಜೀವಿ ಹಾಗು ಸಂಘಜೀವಿಯನ್ನಾಗಿ ಮಾಡುತ್ತದೆಯೋ ಹಾಗೆಯೇ ಘರಾಣೆಗಳೂ ಕೂಡಾ ತನ್ನ ಘರಾಣೆಯ ಪ್ರತಿಯೊಬ್ಬ ಕಲಾವಿದನನ್ನು ಒಳ್ಳೆಯ ಗಾಯಕ, ವಾದಕ ಹಾಗು ಸಂಗೀತಜ್ಞನನ್ನಾಗಿಸುತ್ತವೆ.

ಶತಶತಮಾನಗಳಿಂದಲೂ ಗುರುಕುಲ ಪದ್ಧತಿಯಲ್ಲಿ ಶಾಸ್ತ್ರೀಯ ಸಂಗೀತದ ವಿದ್ಯಾರ್ಥಿಗಳು ಸದಾಕಾಲ ಗುರುವಿನೊಂದಿಗೆ ಇದ್ದು, ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ ಎಂಬ ನಾಣ್ಣುಡಿಯಂತೆ ಕಾಯ, ವಾಚಾ, ಮನಸಾ ಅವರ ಸೇವೆಯನ್ನು ಮಾಡುತ್ತಾ, ಹಲವಾರು ವರ್ಷಗಳ ಕಾಲ ಕಠಿಣ ಅಭ್ಯಾಸವನ್ನು ಮಾಡಿ, ಶಾಸ್ತ್ರೀಯ ಸಂಗೀತವನ್ನು ಕಲಿಯುತ್ತಿದ್ದರು. ಈ ಸೇವಾವಧಿಯಲ್ಲಿ ಗುರುವಾದವರು ಶಿಷ್ಯನ ಸಂಯಮ, ಕಷ್ಟ ಸಹಿಷ್ಣುತೆ ಹಾಗು ಗುರುಗಳ ಬಗೆಗಿರುವ ನಿಷ್ಠೆ, ಭಕ್ತಿಗಳ ಬಗ್ಗೆ ಹಲವು ಪರೀಕ್ಷೆಗಳನ್ನು ಮಾಡುತ್ತಿದ್ದರು. ಶಿಷ್ಯನ ನಡವಳಿಕೆಯನ್ನು ಕಂಡು ಸಂತುಷ್ಟನಾದ ಗುರು ಆ ಶಿಷ್ಯನಿಗೆ ವಿದ್ಯಾದಾನ ಮಾಡುತ್ತಿದ್ದರು. ಗುರುವಿನಿಂದ ವಿದ್ಯಾರ್ಹತೆ ಹಾಗು ವಿದ್ಯೆಯನ್ನು ಪಡೆದುಕೊಂಡ ಶಿಷ್ಯನು ಪ್ರಬುದ್ಧವಾಗಿ ಬೆಳೆದು, ಕಲಾವಿದನಾಗಿ, ಮುಂದೆ ತನ್ನ ಶಿಷ್ಯರಿಗೂ ಇದೇ ರೀತಿಯಾಗಿ ಶಾಸ್ತ್ರೀಯ ಸಂಗೀತವನ್ನು ಧಾರೆಯರೆಯುವನು. ಹೀಗೆ ಗುರು-ಶಿಷ್ಯರಲ್ಲಿರುವ ಪರಸ್ಪರ ಶ್ರದ್ಧೆ, ಭಕ್ತಿಗಳು ಅವರವರ ಶೈಲಿಯ ಘರಾಣೆಯ ಶಾಸ್ತ್ರೀಯ ಸಂಗೀತವನ್ನು ಬೆಳೆಸಲು ಕಾರಣವಾದವು.

ಶಾಸ್ತ್ರೀಯ ಸಂಗೀತದ ಘರಾಣೆಗಳನ್ನು ಪರಸ್ಪರ ತುಲನಾತ್ಮಕವಾಗಿ ನೋಡಿದಾಗ ಪ್ರತೀ ಘರಾಣೆಯು ಮತ್ತೊಂದು ಘರಾಣೆಯಿಂದ ಭಿನ್ನವಾಗಿರುವುದು ಕಂಡುಬರುತ್ತವೆ. ಈ ರೀತಿಯ ಪರಸ್ಪರ ಭಿನ್ನತೆಗಳನ್ನು ಅರಿತು, ಸಂಗೀತಜ್ಞರು ಕೆಲವು ಕಟ್ಟು-ನಿಟ್ಟಿನ ನಿಯಮಗಳನ್ನು ಮಾಡಿದರು. ಇವರ ಪ್ರಕಾರ ಯಾವುದೇ ಒಂದು ಘರಾಣೆಯು ಉಗಮವಾಗಲು ಕನಿಷ್ಠ ಮೂರು ತಲೆಮಾರಿನ ಕಲಾವಿದರು ಆ ಘರಾಣೆಯ ಶೈಲಿಯನ್ನು ಅನುಸರಿಸುತ್ತಿರಬೇಕು. ಹಾಗೆಯೇ ಪ್ರತಿಯೊಬ್ಬ ಶಿಷ್ಯನೂ ತನ್ನ ಗುರುವಿನ ಶೈಲಿಯನ್ನೇ ತನ್ನ ಪ್ರಸ್ತುತಿಯಲ್ಲಿ ಬಳಸಬೇಕು. ಇದಲ್ಲದೇ ಪ್ರತಿಯೊಂದು ಘರಾಣೆಯೂ ತನ್ನದೇ ಆದ ಕೆಲವು ಮುಖ್ಯ ರಾಗಗಳನ್ನು ಹೊಂದಿರ ಬೇಕು. ಇದರೊಂದಿಗೆ ಖಾಂದಾನಿ ಚೀಜ್‌ಗಳ ಬಂದೀಷ್‌ಗಳನ್ನೂ ಹೊಂದಿರಬೇಕು. ಹಾಗೆಯೇ ಆಯಾ ಘರಾಣೆಯ ಕಲಾವಿದರು ಅಂತಹಾ ಖಾಂದಾನ ಚೀಜ್‌ಗಳ ಬಂದೀಷ್‌ಗಳನ್ನು ಪ್ರಚಲಿತಗೊಳಿಸಬೇಕು.

# ಅಧ್ಯಾಯ ೪

# ಘರಾಣೆಗಳ ಪರಂಪರೆ

೪.೧ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳು

೪.೨ ಪ್ರಚಲಿತ ಹಾಗೂ ಅಪ್ರಚಲಿತ ಗಾಯನ, ವಾದನ ಘರಾಣೆಗಳು

೪.೩ ಪ್ರಸ್ತುತ ಕಾಲಮಾನದಲ್ಲಿ ಘರಾಣೆಗಳ ಸ್ಥಾನ ಮಾನ

೪.೪ ಕರ್ನಾಟಕದಲ್ಲಿ ಘರಾಣೆಗಳ ಬೆಳವಣಿಗೆ

# ಅಧ್ಯಾಯ ೪

# ಘರಾಣೆಗಳ ಪರಂಪರೆ

### ೪.೧. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳು

ಷಾರ್ಙ್ಗಗದೇವನ 'ಸಂಗೀತ ರತ್ನಾಕರ'ದಲ್ಲಿ ಘರಾಣೆಯನ್ನು ಉದ್ದೇಶಿಸಿ ಒಂದೇ ರೀತಿಯ ಶೈಲಿಯನ್ನು ಅನುಸರಿಸುವವರನ್ನು 'ಸಂಪ್ರದಾಯ' ಎಂಬ ಶಬ್ದದಿಂದ ಕರೆಯಲಾಗಿದೆ. ಈ ಘರಾಣೆಗಳು ಸ್ವತಂತ್ರವಾಗಿದ್ದರೂ ಕೂಡ ಒಂದು ನಿರ್ದಿಷ್ಟ ಚೌಕಟ್ಟಿಗೆ ಒಳಪಟ್ಟಿವೆ. ಘರಾಣೆಗಳಲ್ಲಿ ಎಲ್ಲಾ ಸುಂದರ ಅಂಶಗಳಿದ್ದರೂ ಒಂದಲ್ಲ ಒಂದು ಅಂಶದ ಕೊರತೆಯಿದೆ. ಯಾವುದೇ ಘರಾಣೆಯಲ್ಲಿ ಸಂಗೀತದ ಸಮಗ್ರ ಅಂಶಗಳನ್ನು ಕಾಣಲಾರೆವು. ಎಲ್ಲ ಘರಾಣೆಗಳು ಕೆಲವೊಂದು ಲಕ್ಷಣಗಳನ್ನು ಮಾತ್ರ ಹೊಂದಿವೆ. ಈ ದಿಶೆಯಲ್ಲಿ ಘರಾಣೆಗಳ ಬಗ್ಗೆ ಆಳವಾಗಿ ಅಭ್ಯಸಿಸಿದಾಗ ಸಂಗೀತದ ಎಲ್ಲಾ ಅಂಶಗಳನ್ನು ಒಂದೇ ಘರಾಣೆಯಲ್ಲಿ ಕಾಣದೇ ಎಲ್ಲಾ ಘರಾಣೆಗಳಲ್ಲಿ ಹರಿದು ಹಂಚಿ ಹೋಗಿದೆ ಎಂಬ ಸಂಗತಿ ತಿಳಿಯುತ್ತದೆ. ಈ ಘರಾಣೆಗಳು ಯಾವ ಊರಿನಲ್ಲಿ ಹುಟ್ಟುತ್ತವೆಯೋ ಆಯಾ ಊರಿನ ಹೆಸರಿನಿಂದಲೇ ಇವು ಪ್ರಚಾರ ಹೊಂದಿರುತ್ತವೆ. ಉದಾಹರಣೆ: ಗ್ವಾಲಿಯರ್, ಆಗ್ರಾ, ಕಿರಾಣಾ, ಜೈಪುರ, ಪಂಜಾಬಿ, ಡೆಲ್ಲಿ ಘರಾಣ.

### ೪.೨. ಪ್ರಚಲಿತ ಹಾಗು ಅಪ್ರಚಲಿತ ಗಾಯನ, ವಾದನ ಘರಾಣೆಗಳು

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳಲ್ಲಿ ಎರಡು ಪ್ರಕಾರದ ಘರಾಣೆಗಳಿವೆ. ೧. ಗಾಯನ ಘರಾಣೆಗಳು ೨. ವಾದನ ಘರಾಣೆಗಳು

#### ಗಾಯನ ಘರಾಣೆಗಳು

ಮೊಟ್ಟ ಮೊದಲು ದ್ರುಪದ್ ಎಂಬ ಗಾಯನ ಪ್ರಕಾರವು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದಲ್ಲಿ ಪ್ರಚಾರದಲ್ಲಿತ್ತು. ಈ ಪ್ರಕಾರದ ಗಾಯನದಲ್ಲಿ ಗೋಬರವಾಣಿ, ನೌಹಾರವಾಣಿ, ಡಾಗರವಾಣಿ ಹಾಗೂ ಖಂಡಾರವಾಣಿ ಎಂಬ ಶೈಲಿಗಳಿದ್ದು, ಈ ಶೈಲಿಯ ವಾಣಿಗಳ ಆಧಾರದ ಮೇಲೆಯೇ ಬೇರೆ ಬೇರೆ ಘರಾಣೆಗಳ ಉತ್ಪತ್ತಿ ಆಯಿತೆಂದು ಹೇಳಲಾಗುತ್ತದೆ. ಎಲ್ಲಾ ಘರಾಣೆಗಳು ತಮ್ಮದೇ

ಆದ ಬಡಾಖ್ಯಾಲ್ ಹಾಗೂ ಛೋಟಾಖ್ಯಾಲಗಳ ಚೀಜು(ಸಾಹಿತ್ಯ)ಗಳನ್ನು ಹೊಂದಿವೆ. ಅವು ಖಾಂದಾನಿ ಚೀಜುಗಳಾಗಿವೆ. ಈ ಖಾಂದಾನಿ ಚೀಜ್‌ಗಳು ಆಯಾ ಘರಾಣೆಗೆ ಹೊಂದುವಂತಹ ವ್ಯಕ್ತಿತ್ವ, ರಸ, ಮಧುರತೆ, ಸೌಂದರ್ಯ ಮತ್ತು ಲಕ್ಷಣಗಳನ್ನು ಹೊಂದಿವೆ. ಗಾಯನ ಘರಾಣೆಗಳಲ್ಲಿ ಖ್ಯಾಲ ಘರಾಣೆಗಳು, ಧೃಪದ ಘರಾಣೆಗಳು, ಠುಮರಿ ಘರಾಣೆಗಳು ಎಂಬ ೩ ವಿಧದ ಘರಾಣೆಗಳಿವೆ.

**ಖ್ಯಾಲ ಘರಾಣೆಗಳು**

ಖ್ಯಾಲ್ ಅಥವಾ ಖಯಾಲ್ ಎಂಬ ಶಬ್ದವು ಪಾರಸಿ ಭಾಷೆಯ ಶಬ್ದವಾಗಿದ್ದು, 'ಕಲ್ಪನೆ' ಎಂಬ ಅರ್ಥವನ್ನು ಇದು ಸೂಚಿಸುತ್ತದೆ. ಈ ಗಾಯನ ಪದ್ಧತಿಯಲ್ಲಿ ಕಲಾವಿದರಿಗೆ ತಮ್ಮ ಕಲ್ಪನಾ ಶಕ್ತಿಯನ್ನು ಬೆಳೆಸಲು ಸಾಕಷ್ಟು ಅವಕಾಶವಿರುವುದರಿಂದ ಈ ಗಾಯನ ಪದ್ಧತಿಯು 'ಖ್ಯಾಲ್'ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿದೆ. ಖ್ಯಾಲ ಅಥವಾ ಖಯಾಲ್‌ನ ಅರ್ಥ "ಖಯಾಲ ಸೇ ಗಾನಾ" ಅಂದರೆ ರಾಗ ವಿಸ್ತಾರವನ್ನು ಸ್ವತಂತ್ರವಾದ ರೀತಿಯಲ್ಲಿ ವ್ಯಕ್ತಪಡಿಸುವುದು ಎಂದಾಗಿದೆ.

"ಯಾವ ಒಂದು ಗೀತ ಪ್ರಕಾರದಲ್ಲಿ ರಾಗ-ನಿಯಮಗಳ ಪಾಲನೆ ಮಾಡುತ್ತಾ, ಆಲಾಪ, ತಾನ್, ಬೋಲತಾನ್, ಸರಗಮ್, ಖಟಕಾ, ಮುರ್ಕಿ, ಮುಂತಾದ ವಿಭಿನ್ನ ಅಲಂಕಾರಗಳನ್ನು ಸೇರಿಸಿ ಗಾಯಕ ತನ್ನ ಭಾವನೆಗಳನ್ನು ಹೊಸ ಹೊಸ ಕಲ್ಪನೆಗಳನ್ನು ತಬಲಾದೊಂದಿಗೆ ಸಜ್ಜುಗೊಳಿಸಿ, ಸಿದ್ಧ ಮಾಡಿ ಹಾಡುತ್ತಾನೋ, ಆಗ ಅದನ್ನು "ಖ್ಯಾಲ" ಎನ್ನಲಾಗುತ್ತದೆ"(ಶೈಲಜಾ ಮಂಗಳೂರಕರ, ಸಿದ್ಧರಾಮಯ್ಯ ಮಠಪತಿ ಗೋರಟಾ(ಸಂ), ನಾದ ಲಹರಿ, ಪುಟ ಸಂಖ್ಯೆ ೨೦೩).

"೧೫ರಿಂದ ೧೮ನೇ ಶತಮಾನದವರೆಗೆ 'ದ್ರುಪದ' ಗಾಯನ ಪ್ರಚಾರದಲ್ಲಿತ್ತು. ಸಮಯ ಕಳೆದಂತೆ ಈ ಗಾಯನದಲ್ಲಿ ಪರಿವರ್ತನೆ ತರುವುದು ಅವಶ್ಯವಾಯಿತು. ಆಗ ಒಂದು ಹೊಸ ಪ್ರಕಾರದ ಗಾಯನ ಶೈಲಿಯ ಆವಿಷ್ಕಾರ ಮಾಡಬೇಕೆಂಬ ಪ್ರಯತ್ನಗಳು ನಡೆದವು. ಆಗ ಮೊಗಲರ ಕಾಲದ 'ದ್ರುಪದ'ವನ್ನೇ 'ಖ್ಯಾಲ' ಆಗಿ ಪರಿವರ್ತಿಸಲಾಯಿತು ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯ. ದ್ರುಪದ್‌ದಲ್ಲಿರುವ ಸರಗಮ್‌ಗಳೇ ಖ್ಯಾಲ ಗಾಯನದಲ್ಲಿ ಇವೆ, ಖ್ಯಾಲದ ಆವಿಷ್ಕಾರದಲ್ಲಿ ಯವುದೇ ಹೊಸ ಕಲ್ಪನೆ ಇಲ್ಲ, ಇನ್ನೂ ಕೆಲವು ವಿದ್ವಾಂಸರ ಹೇಳಿಕೆ ಏನೆಂದರೆ ಭರತಮುನಿಯು ಗಂಧರ್ವ ಹಾಗು ಗಾನ ಮೂರು ತತ್ವಗಳನ್ನು ಹೇಳಿದ್ದಾನೆ. ಅವು ಸ್ವರ, ತಾಲ, ಪದಗಳಾಗಿವೆ. ಈ ಮೂರರ ಮಿಶ್ರಣದಿಂದ ಖ್ಯಾಲ ಉತ್ಪತ್ತಿಯಾಯಿತು ಎನ್ನುತ್ತಾರೆ"(ಶೈಲಜಾ ಮಂಗಳೂರಕರ, ಸಿದ್ಧರಾಮಯ್ಯ ಮಠಪತಿ ಗೋರಟಾ(ಸಂ), ನಾದ ಲಹರಿ, ಪುಟ ಸಂಖ್ಯೆ ೨೦೫).

"ರೂಪಕಲಾಪ್ತಿಯಿಂದ ಖ್ಯಾಲ ಗಾಯಕಿಯ ನಿರ್ಮಿತ ಆಯಿತೆಂದು ಠಾಕೂರ ಜಯದೇವಸಿಂಹರ ಅಭಿಪ್ರಾಯವಾಗಿದೆ. ಕೆಲವು ವಿದ್ವಾಂಸರ ಹೇಳಿಕೆಯಂತೆ ಕವ್ವಾಲಿ ಗಾಯನದ ಪ್ರಕಾರದಿಂದ ಖ್ಯಾಲ ಗಾಯನದ ಉದಯವಾಯಿತು. ನಂತರ ದ್ರುಪದ ಗಾಯಕಿಯು ರಾಜದರ್ಬಾರಿನಲ್ಲಿ

ಪ್ರತಿಷ್ಠೆ ಪಡೆಯಿತು. ಲೆಕ್ಕಾಚಾರದ ರೀತಿಯಲ್ಲಿ ಇರುವ(ಗಣಿತ) ರಾಗ ಸ್ವರೂಪವನ್ನು ಅತ್ಯಂತ ಶುದ್ಧ ರೂಪದಲ್ಲಿ ಇಟ್ಟಂತಹ, ಹಾಗು ರಾಜದರ್ಬಾರಿನಲ್ಲಿ ಜನರನ್ನು ಆಕರ್ಷಿಸಿದ ಈ ಗಾಯಕಿ ಕಾಲ ಕ್ರಮೇಣ ಹಿಂದೂಡಲ್ಪಟ್ಟಿತು ಮತ್ತು ಅದರ ಸ್ಥಾನವನ್ನು 'ಖ್ಯಾಲ' ಆಕ್ರಮಿಸಿತು. ಹೀಗೆ ಖ್ಯಾಲ ಗಾಯಕಿಯ ಉಗಮದ ವಿಷಯದ ಬಗ್ಗೆ ನಮಗೆ ಇತಿಹಾಸ ಹೇಳುತ್ತದೆ"(ಶೈಲಜಾ ಮಂಗಳೂರಕರ, ಪಂ. ಸಿದ್ಧರಾಮಯ್ಯ ಮಠಪತಿ ಗೋರಟಾ(ಸಂ), ನಾದ ಲಹರಿ, ಪುಟ ಸಂಖ್ಯೆ ೨೦೬)

ಖ್ಯಾಲ್ ಗಾಯನದ ಆವಿಷ್ಕಾರವನ್ನು ಕುರಿತು ನಮ್ಮ ಹಿಂದೂಸ್ತಾನಿ ಶಾಸ್ತ್ರಜ್ಞರಲ್ಲಿ ಒಮ್ಮತ ವಿರುವುದಿಲ್ಲ. ಕೆಲವರ ಪ್ರಕಾರ ಅಮೀರ ಖುಸ್ರೋ ಆದರೆ, ಕೆಲವರ ಪ್ರಕಾರ ಹುಸ್ಸೇನ್ ಶರ್ಕಿ ಅವರು ಆಧುನಿಕ ಖ್ಯಾಲಿನ ಜನಕ ಎನ್ನುವ ಅಭಿಪ್ರಾಯವಿದೆ. ಈ ಖ್ಯಾಲ ಪದ್ಧತಿಯಲ್ಲಿ ಬಡಾಖ್ಯಾಲ್ ಮತ್ತು ಛೋಟಾಖ್ಯಾಲ್‌ಗಳೆಂಬ ಎರಡು ಭಾಗಗಳಿದ್ದು, ಬಡಾಖ್ಯಾಲ ವಿಲಂಬಿತ ಅಂದರೆ ನಿಧಾನ ಗತಿಯ ಲಯದಲ್ಲಿ ಇರುತ್ತದೆ. ಛೋಟಾ ಖ್ಯಾಲ ಮಧ್ಯ ಅಥವಾ ದೃತ(ವೇಗ) ಲಯದಲ್ಲಿರುತ್ತದೆ. ಬಡಾಖ್ಯಾಲನ್ನು ವಿಲಂಬಿತ ಎಂದು ಛೋಟಾಖ್ಯಾಲನ್ನು ದೃತ ಎಂದೂ ಕರೆಯಲಾಗುತ್ತದೆ.

ಖ್ಯಾಲಗಳ ಸಾಹಿತ್ಯವನ್ನು ಬಂದೀಷ್ ಎಂದೂ ಕರೆಯಲಾಗುತ್ತದೆ. ನ್ಯಾಮತಖಾನ ಹಾಗು ಫಿರೋಜಖಾನರು ಸದಾರಂಗ, ಅದಾರಂಗ ಎಂಬ ಉಪನಾಮ(ಅಂಕಿತನಾಮ)ದಿಂದ ಹಲವಾರು ಖ್ಯಾಲಗಳ ಸಾಹಿತ್ಯವನ್ನು ರಚಿಸಿದ್ದಾರೆ. ಇವರಲ್ಲದೇ ಮನರಂಗ, ಹರರಂಗ, ವಿಲರಂಗ, ಇಶ್ಕರಂಗ, ಶೂಕರಂಗ, ಮೊದಲಾದವರು ಖ್ಯಾಲಗಳ ಸಾಹಿತ್ಯ ರಚನೆಯಲ್ಲಿ ತಮ್ಮ ಅಮೋಘ ಕೊಡುಗೆಯನ್ನು ನೀಡಿದ್ದಾರೆ. ಆಧುನಿಕ ಕಾಲದಲ್ಲಿ ಪ್ರೇಮಪಿಯಾ, ದರಸಪಿಯಾ, ಸಬರಂಗ, ಪ್ರಾಣಪಿಯಾ, ಸುಬ್ಬಾನಪಿಯಾ, ಪಂ. ವಿನಾಯಕರಾವ್ ಪಟವರ್ಧನ್ ಗುಣಿದಾಸ, ಶಂಕರರಾವ್ ವ್ಯಾಸ, ಅಮೀರಖಾನ ಮುಂತಾದವರು ನವ್ಯಕಾಲದ ಖ್ಯಾಲ ಸಾಹಿತ್ಯದ ರಚನಾಕಾರರಾಗಿದ್ದಾರೆ.

ಬಡಾಖ್ಯಾಲಿನ ರಚನೆಯಲ್ಲಿ 'ಮುಖಡಾ'ಗೆ ತುಂಬಾ ಮಹತ್ವವಿದೆ. ಬಡಾಖ್ಯಾಲಿನ ಬಂದೀಷದಲ್ಲಿ ಸಮ್‌ಗಿಂತ ಮೊದಲು ಬರುವಂತಹಾ ಸಾಹಿತ್ಯದ ರಚನೆಗೆ 'ಮುಖಡಾ' ಎನ್ನುತ್ತಾರೆ. ಬಡಾಖ್ಯಾಲ್ ಬಂದೀಷ್‌ನ ಮುಖಡಾ ಸಾಮಾನ್ಯವಾಗಿ ೪ರಿಂದ ೫ ಮಾತ್ರಗಳಾಗಿದ್ದು, ಛೋಟಾಖ್ಯಾಲಿನ ಬಂದೀಷ್ ಹೆಚ್ಚಾಗಿ ಆಯಾ ತಾಳದ ಹುಸಿ ಅಥವಾ ಖಾಲಿ ಮಾತ್ರದಿಂದ ಅಥವಾ ೭ನೆಯ ಮಾತ್ರದಿಂದ, ಇನ್ನು ಕೆಲವು ಬಂದೀಷ್‌ಗಳಲ್ಲಿ ೧೨ನೇ ಮಾತ್ರದಿಂದ, ಇನ್ನೂ ಕೆಲವುಗಳು ಆಯಾ ತಾಳದ ಸಮ್(೧ನೇ ಮಾತ್ರದಿಂದ) ಆರಂಭವಾಗುತ್ತವೆ.

ಬಡಾಖ್ಯಾಲನೊಂದಿಗೆ ಹಾಡಲು ವಿಲಂಬಿತ ಏಕತಾಲ, ವಿಲಂಬಿತ ತೀನತಾಲ, ಝುಮರಾ, ಅಡಾ ಚೌತಲ ಮುಂತಾದ ತಾಳಗಳನ್ನು ಬಳಸುತ್ತಾರೆ. ಹಾಗೆಯೇ ಛೋಟಾಖ್ಯಾಲಿನೊಂದಿಗೆ

ಹಾಡಲು ಹೆಚ್ಚಾಗಿ ತೀನತಾಲ ತಾಳವನ್ನು ಬಳಸುತ್ತಿದ್ದು, ಇದಲ್ಲದೇ ಏಕತಾಲ, ರೂಪಕ್‌ತಾಲ, ಝುಪ್‌ತಾಲಗಳನ್ನು ಬಳಸುತ್ತಾರೆ. ಅತೀ ದೃತ್ ಲಯಗಳ ಬಂದೀಷ್‌ಗಳನ್ನು ಹಾಡುವಾಗ, ಅಥವಾ ತರಾನಾ ಪ್ರಕಾರವನ್ನು ಹಾಡುವಾಗ ತೀನತಾಲ ಅಥವಾ ಏಕತಾಲವನ್ನು ಬಳಸುತ್ತಾರೆ.

ಸಾಮಾನ್ಯವಾಗಿ ಖ್ಯಾಲನ ಸಾಹಿತ್ಯಗಳು ಅಥವಾ ಬಂದೀಷ್‌ಗಳು ಬ್ರಿಜ, ಉರ್ದು, ಪಾರ್ಸಿ, ಅರಬ್ಬೀ, ಬುಂದೇಲಖಂಡ, ಭೋಜಪುರಿ, ಪಂಜಾಬಿ, ಮಾರವಾಡಿ ಮುಂತಾದ ಭಾಷೆಗಳಲ್ಲಿರುತ್ತವೆ. ಖ್ಯಾಲಿನ ಸಾಹಿತ್ಯ ರಚನೆಯಲ್ಲಿ ಶೃಂಗಾರ, ಗಂಭೀರ, ಶಾಂತ, ಕರುಣ, ಬಿಬತ್ಸ ಹೀಗೆ ನವರಸಗಳು ಒಳಗೊಂಡಿರುವಂತಹಾ ಸಾಹಿತ್ಯಗಳಿರುತ್ತವೆ.

ಖ್ಯಾಲಿನ ಸಾಹಿತ್ಯವು ಸಾಮಾನ್ಯವಾಗಿ ಈಶಸ್ತುತಿ, ಕೃಷ್ಣಲೀಲೆಯ ವರ್ಣನೆ, ಋತುವರ್ಣನೆ, ಸೃಷ್ಟಿ ಸೌಂದರ್ಯದ ವರ್ಣನೆ, ಉತ್ಸವ ಪ್ರಸಂಗಗಳ ವರ್ಣನೆ, ನಾಯಕ–ನಾಯಕಿಯ ಪ್ರಣಯದ ವರ್ಣನೆ, ನಾಯಕಿಯ ವಿರಹ ವೇದನೆಯ ವರ್ಣನೆ, ಹೀಗೆ ನಾನಾ ವಿಧದ ಪ್ರಸಂಗಗಳ ವರ್ಣನೆಗಳ ವಿಷಯದ ಮೇಲೆ ಅವಲಂಭಿತವಾಗಿರುತ್ತದೆ. ಕೆಲವು ಸಾಹಿತ್ಯಗಳಲ್ಲಿ ಅರಸನ ರಾಸಲೀಲೆಯ ಅಥವಾ ಅವನ ವರ್ಣನೆಗಳ ವಿಷಯಗಳೂ ಇರುತ್ತವೆ.

ಖ್ಯಾಲ ಗಾಯನದ ಶೈಲಿಯ ಆಧಾರದ ಮೇಲೆಯೇ ಖ್ಯಾಲ ಘರಾಣೆಗಳು ಜನ್ಮ ತಾಳಿದವು. ಖ್ಯಾಲ ಗಾಯನದಲ್ಲಿನ ಸಾಹಿತ್ಯ, ಆಲಾಪ, ತಾನ್, ಮೀಂಡ, ವಿಸ್ತಾರಗಳು ಪ್ರತಿ ಘರಾಣೆಗಳಲ್ಲಿದ್ದರೂ ಪ್ರತಿ ಘರಾಣೆಗಳಲ್ಲಿ ಇದನ್ನು ಪ್ರಸ್ತುತ ಪಡಿಸುವ ಅಂಶವು ಬೇರೆ ಬೇರೆಯಾಗಿರುತ್ತದೆ. ಈ ಅಂಶದ ಆಧಾರದ ಮೇಲೆ ಈ ಕೆಳಗಿನ ಘರಾಣೆಗಳು ಇಂದಿಗೂ ಪ್ರಚಲಿತ ಘರಾಣೆ ಎಂದೆನಿಸಿಕೊಂಡಿವೆ.

**ಖ್ಯಾಲ ಗಾಯನ ಘರಾಣೆ ಕೆಲವು ಗುಣ ಲಕ್ಷಣಗಳು**

೧. ಪ್ರತಿಯೊಂದು ಘರಾಣೆಗೆ ತನ್ನದೇ ಆದ ಸ್ವತಂತ್ರ ಶೈಲಿ ಇರುತ್ತದೆ.

೨. ಪ್ರತಿಯೊಂದು ಘರಾಣೆಯಲ್ಲಿ ಗಾಯನವನ್ನು ಬೆಳೆಸುವ ನಿರ್ದಿಷ್ಟ ರೂಪುರೇಷೆ ಇರುತ್ತದೆ.

೩. ಆಯಾ ಘರಾಣೆಯ ವೈಶಿಷ್ಟ್ಯಗಳನ್ನು ಪ್ರಸ್ತುತ ಪಡಿಸುವ ಅನುಯಾಯಿ ಕಲಾವಿದನಾಗಿರುತ್ತಾನೆ.

೪. ನಿರ್ದಿಷ್ಟವಾದ ಅಭ್ಯಾಸ ಕ್ರಮ, ರಾಗ ಪ್ರಸ್ತುತ ಪಡಿಸುವ ವೈಶಿಷ್ಟ್ಯ ಘರಾಣೆಯಲ್ಲಿರುತ್ತದೆ.

**ಖ್ಯಾಲ ಗಾಯನದ ಪ್ರಮುಖ ಘರಾಣೆಗಳು**

**ಗ್ವಾಲಿಯರ್ ಘರಾಣೆ:** ಗ್ವಾಲಿಯರ್ ಘರಾಣೆ ಎಲ್ಲಾ ಘರಾಣೆಗಳ ಮೂಲವಾಗಿದೆ. ನಥ್ಥನ ಪೀರಭಕ್ಷರು ಈ ಘರಾಣೆಯ ಮೂಲ ಪುರುಷರು. ಇವರ ಮೊಮ್ಮಕ್ಕಳಾದ ಹದ್ದೂಖಾನ್ ಹಾಗು ಹಸ್ಸುಖಾನ್‌ರವರು ಗ್ವಾಲಿಯರ್ ಘರಾಣೆಗೆ ಘನತೆ, ಗೌರವ ತಂದುಕೊಟ್ಟು, ಈ ಘರಾಣೆಯ ಸಂಸ್ಥಾಪಕರೆಂದೇ ಪ್ರಸಿದ್ಧರಾದರು. ಗ್ವಾಲಿಯರ್ ಘರಾಣೆಯ ಗಾಯಕಿಯು ಅಷ್ಟಾಂಗ ಪ್ರಧಾನವಾಗಿದೆ.

ಆಲಾಪ, ಬೋಲ್, ಬೋಲ್‌ತಾನ್ ವಿವಿಧ ತಾನ್‌ಗಳ ಪ್ರಕಾರಗಳು, ಲಯಕಾರಿ, ಮೀಂಡ, ಗಮಕ ಹಾಗೂ ಮುರ್ಖಿ ಮುಂತಾದ ಸಂಗತಿಗಳು ವಿಶೇಷ ರೂಪದಿಂದ ಗ್ವಾಲಿಯರ್ ಘರಾಣೆಯ ಗಾಯಕಿಯಲ್ಲಿ ಕೇಳಸಿಗುತ್ತದೆ. ಈ ಘರಾಣೆಯ ಗಾಯಕಿಯಲ್ಲಿ ಆಗುವಷ್ಟು ಗಮಕ ಪ್ರಯೋಗವು ಇನ್ನುಳಿದ ಘರಾಣೆಯಲ್ಲಿ ಕಂಡುಬರುವುದಿಲ್ಲ. ಸ್ಪಷ್ಟ ಸಾಹಿತ್ಯದ ಉಚ್ಚಾರಣೆ, ಸರಳ ಹಾಗು ಸಪಾಟ ತಾನ್‌ಗಳ ಬಳಕೆ, ಆರೋಹ, ಅವರೋಹ ಕ್ರಮದಲ್ಲಿ ರಾಗದ ಬಡತ್(ವಿಸ್ತಾರ) ಮಾಡುವುದು ಗ್ವಾಲಿಯರ್ ಘರಾಣೆಯ ವಿಶೇಷತೆಗಳು.

"ಮೀಂಡ್ ಹಾಗೂ ಆರೋಹ ಮತ್ತು ಅವರೋಹದಲ್ಲಿ ಸರಳ ತಾನ್‌ಗಳು ಈ ಘರಾಣೆಯ ವೈಶಿಷ್ಟ್ಯವಾಗಿದೆ. ಹೆಚ್ಚಾಗಿ ಮಧ್ಯ ಲಯದಲ್ಲೇ ಖ್ಯಾಲಗಳನ್ನು ಈ ಘರಾಣೆಯ ಗಾಯಕರು ಹಾಡುತ್ತಾರೆ. ಭಾವಪೂರ್ಣವಾಗಿ ಗ್ವಾಲಿಯರ್ ಘರಾಣೆಯ ಗಾಯಕರು ಭೈರವ್, ಲಲತ್, ದರ್ಬಾರಿಕಾನ್ಹಡ, ಭಾಗೇಶ್ರೀ, ಅಸಾವರಿ, ಶ್ರೀ, ಗೌಡಮಲ್ಹಾರ, ಬಸಂತ ಮುಂತಾದ ರಾಗಗಳನ್ನು ಹಾಡುತ್ತಾರೆ. ತರಾನ ಎಂಬ ಪ್ರಕಾರವು ಗ್ವಾಲಿಯರ್ ಘರಾಣೆಯಲ್ಲಿ ತುಂಬಾ ಇದ್ದು, ಈ ತರಾನಗಳು ವಿವಿಧ ಲಯಗಳಲ್ಲಿ ಅಂದರೆ ವಿಲಂಬಿತ, ಮಧ್ಯ ಮತ್ತು ಧೃತ್ ಲಯಗಳಲ್ಲಿ ದೊರೆಯುತ್ತದೆ" ಎಂಬುದು ಡಾ. ಪಾಠಕ್‌ರವರ ಅನಿಸಿಕೆ(ಬಿಂಧುಮಾಧವ ಪಾಠಕ್, ಇಂಚರ, ಹಿಂದೂಸ್ತಾನಿ ಸಂಗೀತದ ಘರಾಣೆಗಳು, ಪುಟ ಸಂಖ್ಯೆ ೧೩೪).

ಗ್ವಾಲಿಯರ್ ಘರಾಣೆಯ ಗಾಯಕಿಯ ವೈಶಿಷ್ಟ್ಯವೆಂದರೆ ಸ್ಪಷ್ಟ ಹಾಗು ಸರಳತೆಯ ನಿರೂಪಣೆ. ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿರುವಂತಹಾ ಜನಪ್ರಿಯ ರಾಗಗಳನ್ನು ಈ ಘರಾಣೆಯ ಗಾಯಕರು ಹಾಡುತ್ತಾರೆ. ಉದಾಹರಣೆಗೆ- ಅಲಯಾ ಬಿಲಾವಲ, ಯಮನ್, ಭೈರವ, ಸಾರಂಗ, ಮುಲ್ತಾನಿ, ಶ್ರೀ, ಭೂಪ, ಕಾಮೋದ, ಹಮೀರ, ಬಸಂತ, ಪರಜ್, ಗೌಡಮಲ್ಹಾರ, ಮೀಯಾಮಲ್ಹಾರ, ಶಂಕರಾ ಇತ್ಯಾದಿ. ಇದಲ್ಲದೇ ಪಾರಂಪರಿಕ ಬಂದೀಷ್‌ಗಳನ್ನು ಹಾಡುವುದರ ಕಡೆಗೆ ಹೆಚ್ಚಿನ ಒಲವು ತೋರಿಸುತ್ತಾರೆ. ಇಲ್ಲಿ ರಾಗ ನಿರೂಪಣೆಗಿಂತ ಬಂದೀಷ್‌ಗಳಿಗೇ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗುತ್ತದೆ. ಬಂದೀಷ್‌ಗಳೇ ಇಲ್ಲಿ ರಾಗದ ಮಾರ್ಗದರ್ಶಿಗಳಾಗಿರುತ್ತವೆ. ವಿಶೇಷವಾಗಿ ಆರೋಹ, ಅವರೋಹ, ಸಪಾಟ ತಾನಗಳನ್ನು, ಜೋಡು ಸ್ವರಗಳನ್ನು ಇಲ್ಲಿ ಉಪಯೋಗಿಸುತ್ತಾರೆ.

ಈ ಘರಾಣೆಯಲ್ಲಿ ಖಯಾಲನ್ನು ಹೆಚ್ಚಾಗಿ ಮಧ್ಯಲಯದಲ್ಲಿ ಪ್ರಸ್ತುತ ಪಡಿಸುತ್ತಾರೆ. ಸ್ವರಗಳ ಸೂಕ್ಷ್ಮ ನಿರೂಪಣೆಗೆ ಇಲ್ಲಿ ಕಡಿಮೆ ಅವಕಾಶವಿದ್ದು, ಬೋಲತಾನಗಳು ಕೂಡಾ ಹರಿತವಾಗಿರುವುದಿಲ್ಲ. ಬಡಾಖ್ಯಾಲಗಳು ವಿಲಂಬಿತ ಏಕತಾಳ, ತಿಲವಾಡ, ಝುಮರಾ, ಅಡಾಚೌತಾಳಗಳಲ್ಲಿ ನಿಬದ್ಧಗೊಳಿಸ ಲಾಗಿರುತ್ತದೆ. ಹಾಗೆಯೇ ಧೃತ್ ಬಂದೀಷ್‌ಗಳು ತೀನತಾಲ ಹಾಗು ಧೃತ್ ಏಕತಾಳದಲ್ಲಿರುತ್ತವೆ. ಸ್ಥಾಯಿ-ಅಂತರಾ ನಂತರ ಮೂರು ಸಪ್ತಕಗಳಲ್ಲಿ ಸಂಚರಿಸುವ ಪರಿಪಾಠ ಈ ಘರಾಣೆಯ

ಗಾಯಕರಲ್ಲಿರುತ್ತದೆ. ವಿವಿಧ ಗಾಯನ ಪ್ರಕಾರಗಳಲ್ಲಿ ಒಂದಾದ ತರಾನ ಗಾಯನವು ಮೂಲತಃ ಈ ಘರಾಣೆಯ ಒಂದು ವಿಶೇಷವಾಗಿದೆ.

**ಗ್ವಾಲಿಯರ್ ಘರಾಣೆಯ ಗಾಯನದ ವೈಶಿಷ್ಟ್ಯತೆಗಳು**

೧. ಖ್ಯಾಲ ಬಂದೀಷನ ಸಂಪೂರ್ಣ ಪ್ರಸ್ತುತಿ.

೨. ಖುಲ್ಲಾ ಧ್ವನಿಯಿಂದ ಜೋರಾಗಿ ಹಾಡುವುದು.

೩. ಬೋಲ್ ತಾನಗಳಲ್ಲಿ ಲಯಕಾರಿಗಳನ್ನು ಮಾಡುವುದು.

೪. ಆರಂಭದ ಸ್ವರ 'ಆ' ಕಾರದಿಂದ ಬುಲಂದ ಹಚ್ಚುವುದು.

೫. ತೀವ್ರಗತಿಯಲ್ಲಿ ಜೋರ್‌ದಾರ್ ಮತ್ತು ಬೋಲ್‌ತಾನ್‌ಗಳನ್ನು ಪ್ರಯೋಗ ಮಾಡುವುದು.

೬. ಗಮಕ ಭರಿತ ಸಂಪುಟ ತಾನ್‌ಗಳೊಂದಿಗೆ ರಾಗದ ವಿಸ್ತಾರ ಮಾಡುವುದು.

೭. ಸ್ವರ ಮತ್ತು ಲಯಕ್ಕೆ ಸಮಾನವಾದ ಸ್ಥಾನ-ಮಾನ ನೀಡುವುದು.

೮. ಪ್ರಚಲಿತ ಮತ್ತು ಸಂಪೂರ್ಣ ರಾಗಗಳನ್ನು ಹಾಡುವುದು.

**ಗ್ವಾಲಿಯರ್ ಘರಾಣೆಯ ಪ್ರಮುಖ ಗಾಯಕರು(ಕೃಪೆ: ಸಾಮಾಜಿಕ ಜಾಲತಾಣ)**

* ಉಸ್ತಾದ ನಥ್ಥನ ಫಿರ್ ಭಕ್ಷ
* ಉಸ್ತಾದ ನಥ್ಥನ್ ಖಾನ
* ಉಸ್ತಾದ ಹದ್ದುಖಾನ
* ಉಸ್ತಾದ ಹಸ್ಸುಖಾನ
* ಉಸ್ತಾದ ಕುರ್ಬಾನ ಹುಸೇನಖಾನ
* ಉಸ್ತಾದ ಬಡೆ ಇನಾಯತ್ ಹುಸೇನಖಾನ
* ಉಸ್ತಾದ ರೆಹಮತ್ ಅಲಿಖಾನ
* ಪಂ. ನಾನುಭಾಯ ತಿಲಂಗ
* ಪಂ. ಬಾಲಕೃಷ್ಣಬುವಾ ಈಚಲಕರಂಜೀಕರ
* ಪಂ. ವಿಷ್ಣು ದಿಗಂಬರ ಪಲುಸ್ಕರ
* ಪಂ. ಡಿ.ವಿ. ಪಲುಸ್ಕರ
* ಪಂ. ಗುಲಾಮ ಹಸನ ಶಗ್ಗನ
* ಪಂ. ಬಾಲಕೃಷ್ಣ ಬುವಾ ಈಚಲಕರಂಜೀಕರ
* ಪಂ. ನೀಲಕಂಠ ಬುವಾ ಮೀರಜಕರ್
* ಪಂ. ಪಂಚಾಕ್ಷರಿ ಗವಾಯಿಗಳು

* ಪ್ರೊ. ಬಿ. ಆರ್ ದೇವಧರರ
* ಶ್ರೀ ಪಾದರಾವ್ ಜೋಶಿ
* ಪಂ. ಕುಮಾರ ಗಂಧರ್ವ
* ಪಾಡೋಬ ಮಾಸ್ತಾರ
* ಆರ್. ಕೆ. ವಿಜಾಯಪುರೆ
* ಪಂ. ಕೃಷ್ಣಬಾಯಿ ರಾಮದುರ್ಗಾ
* ಪಂ. ಕೃಷ್ಣಜೀ ಪಾವರ
* ಪಂ. ಪುಟ್ಟರಾಜ ಗವಾಯಿಗಳು
* ಪಂ. ಬಸವರಾಜ ರಾಜಗುರು
* ಪಂ. ಪಂಚಾಕ್ಷರಿ ಸ್ವಾಮಿ ಮತ್ತಿಕಟ್ಟಿ
* ಪಂ. ಶೇಷಾದ್ರಿ ಗವಾಯಿಗಳು
* ಪಂ. ಮೃತ್ಯುಂಜಯ ಪುರಾಣಿಕ್‌ಮತ್
* ಪಂ. ಗುರುಬಸವಾಚಾರ್ಯ ಹಿರೇಮಠ
* ಪಂ. ಚಂದ್ರಶೇಖರ ಪುರಾಣಿಕ್‌ಮಠ
* ಪಂ. ಸಿದ್ಧರಾಮ ಜಂಬಲದಿನ್ನಿ
* ಪಂ. ಅರ್ಜುನ ಸಾ ನಾಕೋಡ್
* ಪಂ. ಗುರುರಾವ್ ದೇಶಪಾಂಡೆ
* ಪಂ. ವಿನಾಯಕರಾವ ಪಟವರ್ಧನ
* ಪಂ. ಅನಂತ ಮನೋಹರ ಜೋಷಿ
* ಪಂ. ಕೃಷ್ಣರಾವ ಶಂಕರ
* ಉಸ್ತಾದ ರಫಿಕ್‌ಖಾನ
* ಉಸ್ತಾದ ಮೈಬನ್ನಾಯ ಖಾನಸಾಹೇಬ
* ಉಸ್ತಾದ ಮೀರನ ಭಕ್ಷಖಾನ
* ಉಸ್ತಾದ ಅಮೀರಖಾನ
* ಉಸ್ತಾದ ಗಾಮನಖಾನ
* ಉಸ್ತಾದ ಪ್ಯಾರೆಖಾನ
* ಉಸ್ತಾದ ಸೆಂಧಯಖಾನ

* ಉಸ್ತಾದ ಮುಬಾರಕ ಅಲಿಖಾನ
* ಉಸ್ತಾದ ಅಬ್ದುಲ್ ರಶೀದಖಾನ
* ಉಸ್ತಾದ ಬೀಬಯಖಾನ
* ಉಸ್ತಾದಮುರದ ಅಲಿಖಾನ
* ಉಸ್ತಾದ ಆಶಿಕ ಹುಸೇನಖಾನ
* ಉಸ್ತಾದ ಖುದ್ರದುಲ್ಲಾಖಾನ
* ಉಸ್ತಾದ ಉಮೀದ ಅಲಿಖಾನ
* ಉಸ್ತಾದ ಮಂಜುರ ಅಲಿಖಾನ
* ಉಸ್ತಾದ ಗುಲಾಮಖಾನ
* ಉಸ್ತಾದ ಅಹಮ್ಮದ ಅಲಿಖಾನ
* ಉಸ್ತಾದ ರೆಹಮತ ಅಲಿಖಾನ
* ಉಸ್ತಾದ ಹಮೀದ ಅಲಿಖಾನ
* ಉಸ್ತಾದ ಫತೆ ಅಲಿಖಾನ
* ಉಸ್ತಾದ ವಹೀದ ಅಲಿಖಾನ
* ಉಸ್ತಾದ ಕರಮ ಅಬ್ಬಾಸಖಾನ
* ಉಸ್ತಾದ ರೋಶನ ಅಬ್ಬಾಸಖಾನ
* ಉಸ್ತಾದ ಈ ಕಾರದ ವಹೀದ ಅಲಿಖಾನ
* ಉಸ್ತಾದ ತೌಸಿಫ ಅಲಿ
* ಉಸ್ತಾದ ಖಾನ
* ಉಸ್ತಾದ ಲತಿಫ ಅಲಿಖಾನ
* ಪಂ. ಯಶವಂತ ಬಿ. ಜೋಷಿ
* ಪಂ. ಆದಿತ್ಯ ಖಾಂಡ್ವೆ
* ಪಂ. ಆದಿತ್ಯಮೋದಕ
* ಪಂ. ಮಧು ಪ. ಮುದುಗಲ್
* ಪಂ. ವಿನಯಚಂದ್ರ ಮೌದಗಲ್ಯ
* ಪಂ. ಗಂಗಾಧರರಾವ ತೆಲಂಗ
* ಪಂ. ವಸಂತರಾವ ರಾಜುಕರರ

* ಪಂ. ಗುರುರಾವ ದೇಶಪಾಂಡೆ
* ಶ್ರೀಮತಿ ಮಾಲಿನಿ ರಾಜುರಕರ
* ಪಂ. ವಿನಾಯಕ ತೊರವಿ
* ಡಾ. ಎಂ. ವೆಂಕಟೇಶ ಕುಮಾರ
* ಪಂ. ಕುಮಾರದಾಸ
* ಶ್ರೀಮತಿ ವೀಣಾ ಸಹಸ್ರಬುದ್ಧಿ
* ಶ್ರೀಮತಿ ನೀಲಾ ಭಾಗವತ
* ಮೀಟಾ ಪಂಡಿತ
* ಮಂಜುಷಾ ಕುಲಕರ್ಣಿ ಪಾಟೀಲ
* ಪಂ. ಅರ್ಮಾನಖಾನ
* ಉಸ್ತಾದ ಷಾಹಜಾನಖಾನ
* ಉಸ್ತಾದ ಮುಸ್ಲಿಂ ಹಸನ ಶಗ್ಗನ
* ಶ್ರೀಮತಿ ವಸುಂಧರಾ ಕೋಮಕಲಿ
* ಉಸ್ತಾದ ಗುಲಾಮಫರಿದವೊರಾ
* ಪಂ. ವಿಕಾಸ ಗಂಗಾಧರ ರಾವ
* ಪಂ. ಭಾರತ ತೆಲಂಗ
* ದಿ. ಪಂ. ನಾರಾಯಣಾಚಾರ್ಯ ದಂಡಾಪುರ
* ಪಂ. ನರಗುಂದ ಚೆನ್ನಸ್ವಾಮಿ ಮಲ್ಲಾಸಾನಿ
* ಪಂ. ಆರ್.ಪಿ. ಹೂಗಾರ
* ಶ್ರೀಮತಿ ಗೀತಾ ಜೋಶಿ
* ಶ್ರೀಮತಿ ಭಾರತಿ ಮೆಸ್ತಾ
* ಕುಮಾರಿ ವಿಜಯಾ ಹಿರೇಮಠ
* ಪ್ರೊ. ಸಿದ್ಧರಾಮಯ್ಯ ಮಠಪತಿ
* ಡಾ. ವ್ಹಿ.ಆರ್. ಹೂಗಾರ

**ಕಿರಾಣಾ ಘರಾಣೆ**

'ಸ್ವರ ಸಾಮ್ರಾಟ್' ಎಂದೇ ಪ್ರಸಿದ್ಧರಾದ ಉಸ್ತಾದ ಅಬ್ದುಲ್ ಕರೀಂಖಾನ್ ಮತ್ತು ಉಸ್ತಾದ ವಹೀದ್ ಖಾನ್‌ರವರು ಈ ಘರಾಣೆಯ ಮೂಲ ಪುರುಷರು. ೧೭ನೇ ಶತಮಾನದಲ್ಲಿ ಈ ಘರಾಣೆಯನ್ನು ಆವಿಷ್ಕರಿಸಲಾಯಿತು ಎನ್ನಬಹುದಾಗಿದೆ. ಕಿರಾಣಾ ಘರಾಣೆಯ ಗಾಯಕಿಯು ಮೂಲತಃ ತಂತಿ ವಾದ್ಯದ ಅಂಗವಾಗಿದೆ. ಸಾರಂಗಿ, ಬೀನ ಮುಂತಾದ ತಂತಿ ವಾದ್ಯಗಳಲ್ಲಿ ಪ್ರಯೋಗಿಸಲ್ಪಡುವ ಮೀಂಡ, ಗಮಕ, ಖಟಕಾ, ಮುರ್ಖಿ ಮುಂತಾದ ಅಂಗಗಳು ವಿಶೇಷ ರೂಪದಿಂದ ಈ ಗಾಯಕಿಯಲ್ಲಿ ಕಂಡುಬರುತ್ತದೆ. ಭಾವಪೂರ್ಣವಾಗಿ ಸ್ವರಗಳನ್ನು ಹಚ್ಚುವುದು, ವಿಸ್ತಾರವಾಗಿ ಹಾಡಲ್ಪಡುವ ರಾಗಾಲಾಪನೆ, ಮೇರುಖಂಡ ತಾನ್‌ಗಳ ಪ್ರಯೋಗ, ರಾಗ ವಿಸ್ತಾರಕ್ಕೆ ಸರಗಮ್ ಹೇಳುವ ಪರಿಪಾಠ ವೈಚಿತ್ರ್ಯಪೂರ್ಣವಾಗಿರುವುದನ್ನು ಈ ಘರಾಣೆಯ ಗಾಯಕಿಯಲ್ಲಿ ಕಾಣಬಹುದಾಗಿದೆ.

ಕಿರಾಣಾ ಘರಾಣೆಯ ಗಾಯಕಿ ಪದ್ಧತಿಯು ಆಲಾಪ ಪ್ರಧಾನ ಗಾಯಕಿ ಆಗಿದೆ. ಧ್ರುಪದ್ ವಾಣಿಯ ಗೋಬರ್‌ವಾಣಿಯ ಪ್ರಭಾವದಿಂದ ಉತ್ಪನ್ನವಾದ ಕಿರಾಣ ಘರಾಣೆಯಲ್ಲಿ ರಾಗದ ವಿಸ್ತಾರವನ್ನು ಒಂದೊಂದೇ ಸ್ವರವನ್ನು ಕ್ರಮಬದ್ಧವಾಗಿ ಹಚ್ಚಿ ಮಾಡಲಾಗುತ್ತದೆ. ಆಲಾಪಕ್ಕೆ ಯೋಗ್ಯವೆನಿಸಿದ ರಾಗಗಳನ್ನು ಮಾತ್ರ ಈ ಘರಾಣೆಯ ಗಾಯಕರು ಹಾಡುತ್ತಾರೆ. ವಿಶೇಷವಾಗಿ ವಿಲಂಬಿತ ಲಯದ ಖ್ಯಾಲಗಳನ್ನು ಈ ಘರಾಣೆಯ ಗಾಯಕಿ ಪದ್ಧತಿಯಲ್ಲಿ ಹಾಡಲ್ಪಡುತ್ತವೆ. ಲಯವು ಕೂಡ ಸ್ವರಗಳಿಗೆ ಅನುಗುಣವಾಗಿ ಇರುತ್ತವೆ. 'ತಾಲ ಗಯಾ ತೊ ಬಾಲ ಗಯಾ, ಸೂರ ಗಯಾ ತೊ ಸಿರ ಗಯಾ'(ತಾಲ ಹೋದರೆ ಕೂದಲಿನ ಎಳೆ ಹೋದಂತೆ, ಸ್ವರ ಹೋದರೆ ತಲೆಯೇ ಹೋದಂತೆ) ಎಂಬುದು ಈ ಘರಾಣೆಯ ಉಕ್ತಿಯಾಗಿದೆ.

"ಕಿರಾಣಾ ಘರಾಣವನ್ನು ೧೩ನೇ ಶತಮಾನದಲ್ಲಿ ಗೋಪಾಲನಾಯಕ ಎನ್ನುವವರು ಆರಂಭಿಸಿದರು. ಇವರು ಮೂಲತಃ ಧ್ರುಪದ ಶೈಲಿಯ ಗಾಯಕರು. ಇಂದಿನ ಉತ್ತರ ಪ್ರದೇಶದ ಶಾಮ್ಲಿ ಜಿಲ್ಲೆಯಲ್ಲಿ 'ಕೈರಾನ' ಎಂಬ ನಗರವಿದೆ. ಮಹಾಭಾರತದ ಕಾಲದಲ್ಲಿ ದುರ್ಯೋದನನು ಕರ್ಣನಿಗೆ ಅಂಗರಾಜ್ಯ ಪಟ್ಟಾಭಿಷೇಕವನ್ನು ಮಾಡಿದ ಮೇಲೆ ಒಂದು ನಗರವನ್ನು ಕಟ್ಟಿ ಅದಕ್ಕೆ 'ಕರ್ಣನಗರಿ' ಎಂದು ಕರೆದರಂತೆ. ಕಾಲಕ್ರಮೇಣ ಕರ್ಣನಗರಿ ಎನ್ನುವುದು ಜನರ ಬಾಯಿಯಲ್ಲಿ 'ಕೈರಾನ' ಎನ್ನುವ ಹೆಸರನ್ನು ಪಡೆಯಿತಂತೆ. ಈ ಪ್ರದೇಶದಲ್ಲಿ ಗೋಪಾಲ ನಾಯಕ ಅವರು ವಾಸವಾಗಿದ್ದರು. ಹಾಗಾಗಿ ಗೋಪಾಲ ನಾಯಕ ಅವರು ಆರಂಭಿಸಿದ ಹಿಂದೂಸ್ತಾನಿ ಶೈಲಿಯು 'ಕಿರಾನ ಘರಾನ' ಎಂದು ಹೆಸರುವಾಸಿಯಾಗಿದೆ"(ಬಾ.ಹ. ಉಪೇಂದ್ರ, ಸಂ. ಡಾ. ನಾ. ಸೋಮೇಶ್ವರ, ಸ್ವರಾಧಿರಾಜ, ಭಾರತ ರತ್ನ ಪಂಡಿತ್ ಭೀಮಸೇನ ಜೋಶಿ, ಪುಟ ಸಂಖ್ಯೆ–೪೭).

"ಈ ಘರಾಣೆಯ ಗಾಯಕರು ತಮ್ಮನ್ನು ಬೀನಕರ-ದ್ರುಪದೀಯ ಪರಂಪರೆಯವರೆಂದು ಕರೆದುಕೊಳ್ಳುತ್ತಾರೆ. ಆದರೆ ಮೀರ ಅವರು ಅಭಿಪ್ರಾಯಪಡುವಂತೆ ಈ ಘರಾಣೆ ಸಾರಂಗಿಯಾ (ಮೀರಾಸಿಯಾ) ಪರಂಪರೆಗೆ ಸೇರಿದ್ದಾರೆ. ನರ್ತಕಿಯರಿಗೆ (ತವಾಯಿಫ್‌ಗಳಿಗೆ) ಸಾಥ್ ನೀಡುವುದು ಮೀರಾಸಿಗಳ ಸಂಪ್ರದಾಯವಾಗಿತ್ತು. ಹೀಗಾಗಿ ಸಾರಂಗಿಯಾ ಪರಂಪರೆಯವರೆಂದು ಹೇಳಿಕೊಳ್ಳುವುದು ಒಂದು ಬಗೆಯ ಕೀಳರಿಮೆ ಎಂದು ಅವರು ಭಾವಿಸುತ್ತಿದ್ದರು. ಈ ಶೈಲಿಯ ಗಾಯಕರ ಧ್ವನಿ, ಸೃಷ್ಟಿ ಹಾಗೂ ತಾನಗಳು ಸಾರಂಗಿಯಿಂದ ಪ್ರಭಾವಿತವಾಗಿದ್ದವು. ಈ ಘರಾಣೆಯಲ್ಲಿ ಸ್ವರಾಲಾಪಕ್ಕೆ ಅನುಕೂಲವಾಗುವಂತೆ ಪೂರ್ವಾಂಗ ಪ್ರಧಾನ ರಾಗಗಳನ್ನೇ ಹೆಚ್ಚಾಗಿ ಉಪಯೋಗಿಸುವುದನ್ನು ನಾವು ಕಾಣುತ್ತೇವೆ"(ಸಿದ್ಧರಾಜ ಪೂಜಾರಿ, ಸಿದ್ಧರಾಮಯ್ಯ ಮಠಪತಿ ಗೋರಟಾ(ಸಂ), ನಾದ ಲಹರಿ, ಪುಟ ಸಂಖ್ಯೆ ೧೧೪).

ಖ್ಯಾಲ ಗಾಯನದ ಸಮಯದಲ್ಲಿ ಸ್ವರಾಲಾಪ ಹಾಗು ವಿಲಂಬಿತ ಲಯಗಳಿಗೆ ಮಹತ್ವ ನೀಡುವುದು ಕಿರಾಣಾ ಘರಾಣೆಯ ವೈಶಿಷ್ಟವಾಗಿದೆ. ಸ್ವರ ಮಾಧುರ್ಯಕ್ಕೆ ಹೆಸರಾದ ಕಿರಾಣಾ ಘರಾಣೆ ಕರುಣ ರಸ ಪ್ರಧಾನವಾಗಿದೆ. ಕೆಲವೊಂದು ರಾಗವನ್ನು ಹಾಡುವಾಗ ತಾನಪುರಾವನ್ನು ನಿಷಾಧ ಸ್ವರಕ್ಕೆ ನಿಬದ್ಧಗೊಳಿಸುವ ಪರಿಪಾಠ ಈ ಶೈಲಿಯ ಗಾಯಕರಲ್ಲಿದೆ. ಹೆಚ್ಚಾಗಿ ಶುದ್ಧಕಲ್ಯಾಣ, ದರ್ಬಾರಿ, ಮಾಲಕೌಂಸ, ಭೀಮಪಲಾಸಿ, ತೋಡಿ, ಜೋಗಿಯಾ ಮುಂತಾದ ರಾಗಗಳ ಬಡಾಖ್ಯಾಲನ್ನು ವಿಲಂಬಿತ ಏಕತಾಳದಲ್ಲಿ ಹಾಗು ತೀನತಾಳದಲ್ಲಿ ಛೋಟಾಖ್ಯಾಲಗಳನ್ನು ಬಂದೀಷ್‌ಗಳನ್ನು ಇಲ್ಲಿ ಹಾಡಲಾಗುತ್ತದೆ.

**ಕಿರಾಣಾ ಘರಾಣೆಯ ಗಾಯನದ ವೈಶಿಷ್ಟ್ಯತೆಗಳು**

೧. ಖ್ಯಾಲ ಗಾಯನದಲ್ಲಿ ಸ್ವರ, ಶೃತಿ, ಲಯಗಳ ಸುಂದರ ಜೋಡಣೆ ಮಾಡುವುದು.
೨. ಒಂದು ಸ್ವರದಿಂದ ಮತ್ತೊಂದು ಸ್ವರವನ್ನು ಉಚ್ಚರಿಸಲು ತಂತಿ ವಾದ್ಯಗಳಲ್ಲಿ ಪ್ರಯೋಗಿಸಲ್ಪಡುವ ಮೀಂಡ್, ಗಮಕ್, ಖಟ್ಕಾ, ಮುರ್ಕಿಗಳ ಪ್ರಯೋಗ ಮಾಡುವುದು.
೩. ತಾನ್ ವಿಭಾಗದಲ್ಲಿ ಮೇರುಖಂಡ ತಾನ್‌ಗಳ ಪ್ರಯೋಗ ಮಾಡುವುದು.
೪. ಸರಗಂಗಳಲ್ಲೇ ಗಮಕಯುಕ್ತ ತಾನ್‌ಗಳ ಪ್ರಯೋಗ ಮಾಡುವುದು.
೫. ಭಾವಪೂರ್ಣವಾಗಿ ಸ್ವರ ಸಂಯೋಜನೆ ಹಾಗು ವಿಸ್ತಾರವಾದ ಗಾಯನ ಮಾಡುವುದು.

**ಕಿರಾಣಾ ಘರಾನೆಯ ಪ್ರಮುಖ ಗಾಯಕರು**

* ಉಸ್ತಾದ ಅಬ್ದುಲ್ ವಹೀದ್ ಖಾನ್
* ಉಸ್ತಾದ ಅಬ್ದುಲ್ ಕರೀಮ್ ಖಾನ್
* ಪಂ. ಸವಾಯಿ ಗಂಧರ್ವ

* ಪಂ. ಗಣಪತರಾವ ಗುರವ
* ಪಂ. ಸಂಗಮೇಶ ಗುರುರಾವ್
* ಪಂ. ಕೈವಲ್ಯಕುಮಾರ ಗುರವ
* ಪಂ. ಸುರೇಶಬಾಬು ಮಾನೆ
* ವಿದುಷಿ ಹೀರಾಬಾಯಿ ಬೊಡೆದ್ಕರ್
* ವಿದುಷಿ ರೋಷನ್ ಅರಾ ಬೇಗಂ
* ವಿದುಷಿ ಸರಸ್ವತಿ ರಾಣಿ
* ಪಂ. ಭೀಮಸೇನ್ ಜೋಶಿ
* ವಿದೂಷಿ ಗಂಗೂಬಾಯಿ ಹಾನಗಲ್
* *ವಿದೂಷಿ ಕೃಷ್ಣ ಹಾನಗಲ್
* ನಾಗನಾಥ್ ಒಡೆಯರ
* ವಿದೂಷಿ ಸುಲಭ ದತ್ತ ನೀರಲಗಿ
* ಪಂ. ಫಿರೋಜ್ ದಸ್ತೂರ್
* ಪಂ. ಬಸವರಾಜ ರಾಜಗುರು
* ವಿದುಷಿ ಪ್ರಭಾ ಅತ್ರೆ
* ಪಂ. ಮಾಣಿಕ್ ವರ್ಮಾ
* ಪಂ. ಮಣಿ ಪ್ರಸಾದ
* ಉಸ್ತಾದ ನಿಯಾಜ್ ಅಹಮ್ಮದ್ ಖಾನ್
* ಉಸ್ತಾದ ಫೈಯಾಜ್ ಅಹಮ್ಮದ್ ಖಾನ್
* ಉಸ್ತಾದ ಶಾಕೂರ್ ಖಾನ
* ಪಂ. ಮಾಧವ ಗುಡಿ
* ಪಂ. ಶ್ರೀಕಾಂತ ದೇಶಪಾಂಡೆ
* ಉಸ್ತಾದ ನೂರ್ ಹಸನ್‌ಖಾನ
* ಉಸ್ತಾರ ನೂರ್ ಹಾಸನ್ ಖಾನ
* ಪಂ. ಗಣಪತಿ ಭಟ್ ಹಾಸಣಗಿ
* ಪಂ. ಪರಮೇಶ್ವರ್ ಹೆಗಡೆ
* ಉಸ್ತಾದ ಮಹಮ್ಮದಖಾನ್

* ಪಂ. ಸೋಮನಾಥ ಮರಡೂರ್
* ಪಂ. ರಾಘವೇಂದ್ರ ಗುಡಿ
* ಪಂ. ಶ್ರೀನಿವಾಸ ಜೋಶಿ
* ಪಂ. ಜಯತೀರ್ಥ ಮೇವುಂಡಿ
* ಶ್ರೀ ಪ್ರಸನ್ನ ಗುಡಿ
* ಶ್ರೀ ಕೃಷ್ಣೇಂದ್ರ ವಾಡಿಕರ

## ಜೈಪುರ-ಅತ್ರೌಲಿ ಘರಾಣೆ

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ 'ಕಬ್ಬಿಣದ ಕಡಲೆ' ಎಂದೇ ಹೆಸರಾದ ಅತ್ಯಂತ ಕಠಿಣ ಲೆಕ್ಕಾಚಾರ ಹಾಗು ಸಂಕೀರ್ಣ ಸ್ವರೂಪವನ್ನು ಹೊಂದಿದ ಜೈಪುರ-ಅತ್ರೌಲಿ ಘರಾಣೆಯನ್ನು ಉಸ್ತಾದ್ ಅಲ್ಲಾದಿಯಾ ಖಾನ್ ಸ್ಥಾಪಿಸಿದರು. ಮೂಲತಃ ಇವರ ಮನೆತನದವರು ಅಲಿಗಡ ಸಮೀಪದ ಅತ್ರೌಲಿ ಎಂಬ ಗ್ರಾಮದವರು. ಜೀವನ ನಡೆಸಲು ಕೆಲಸವನ್ನು ಹುಡುಕಾಡುತ್ತಾ ಅತ್ರೌಲಿಯನ್ನು ತೊರೆದು ಜೈಪುರ ಬಳಿಯ ಉನಿಯಾರ ಎಂಬ ಗ್ರಾಮಕ್ಕೆ ಬಂದು ನೆಲೆಸಿದರು. ಅದರಿಂದಾಗಿಯೇ ಈ ಘರಾಣೆಗೆ ಜೈಪುರ-ಅತ್ರೌಲಿ ಎಂಬ ಹೆಸರು ಬಂದಿತು.

ಜೈಪುರ ಘರಾಣೆಯಲ್ಲಿ ವಿಲಂಬಿತ, ಗಮಕಯುಕ್ತ ಆಲಾಪ ಹಾಗೂ ಕಠಿಣ ಅಂದರೆ ವಕ್ರ ತಾನುಗಳ ಪ್ರಯೋಗವಿದೆ. ಗಾಯಕರು ಸ್ವರದ ಮೇಲೆ ಗಟ್ಟಿಯಾಗಿ ಉಸಿರು ಹಿಡಿದುಕೊಂಡು ಐದಾರು ನಿಮಿಷದವರೆಗೆ ಸ್ವರ ಹಚ್ಚುತ್ತಾರೆ. ಹೊಸ ಹೊಸ ಬಂದೀಷಗಳನ್ನು ಹಾಗೂ ಅಪ್ರಚಲಿತ ರಾಗಗಳನ್ನು ಹೆಚ್ಚು ಹಾಡುತ್ತಾರೆ. ವಿಲಂಬಿತ ಲಯದ ಖ್ಯಾಲನ್ನು ತೀನತಾಳದಲ್ಲಿಯೇ ಹೆಚ್ಚು ಹಾಡುತ್ತಾರೆ. ದೃತ್ ಲಯದಲ್ಲಿ ಖ್ಯಾಲನ್ನು ಹಾಡುವುದು ಕಡಿಮೆ. ದೃತ್ ಲಯದಲ್ಲಿ ಮಾಡುವಂತಹಾ ಕಾಲ್ಪನಿಕ ಕೆಲಸವನ್ನು ವಿಲಂಬಿತ ಲಯದಲ್ಲೇ ಸಾಮಾನ್ಯವಾಗಿ ಹಾಡುತ್ತಾರೆ.

"ಅಲ್ಲಾದಿಯಾ ಖಾನರ ಪೂರ್ವಜರು ದ್ರುಪದ ಗಾಯಕರಾಗಿದ್ದರು. ತಮ್ಮ ಚಿಕ್ಕಪ್ಪ ಜಹಂಗೀರ ಖಾನರ ಬಳಿ ಅವರು ದ್ರುಪದ ಹಾಗು ಖಯಾಲ ಶೈಲಿಗಳೆರಡನ್ನೂ ಅಭ್ಯಸಿಸಿದರು. ದ್ರುಪದವನ್ನು ಖಯಾಲ ಶೈಲಿಯಲ್ಲಿ ಹಾಡುವುದೇ ಜೈಪುರ ಘರಾಣೆಯ ವೈಶಿಷ್ಟ್ಯವಾಗಿದೆ ಎಂದು ಪಂ. ಮಲ್ಲಿಕಾರ್ಜುನ ಮನಸೂರ ಹೇಳುತ್ತಾರೆ"(ಸಿದ್ಧರಾಜ ಪೂಜಾರಿ, ಸಿದ್ಧರಾಮಯ್ಯ ಮಠಪತಿ ಗೋರಟಾ (ಸಂ), ನಾದ ಲಹರಿ, ಪುಟ ಸಂಖ್ಯೆ ೧೧೫).

ಜೈಪುರ ಘರಾಣೆಯ ಗಾಯನದಲ್ಲಿ ಸಾಹಿತ್ಯವನ್ನು ಸ್ವರದಂತೆಯೇ ಬಳಸಿಕೊಳ್ಳಲಾಗುತ್ತದೆ. ಅಂದರೆ ಸಾಹಿತ್ಯಕ್ಕೂ ಇಲ್ಲಿ ಸಂಗೀತಾತ್ಮಕ ಗುಣಧರ್ಮವಿರುತ್ತದೆ. ಈ ಘರಾಣೆಯ ಗಾಯಕರು ಹೊಸ ಹೊಸ ಬಂದೀಷ್‌ಗಳನ್ನು ತಮ್ಮ ಗಾಯನದಲ್ಲಿ ಬಳಸದೇ ಮೂಲ ಪಾರಂಪರಿಕ ಬಂದೀಷ್ ಗಳನ್ನೇ ಹೆಚ್ಚಾಗಿ ಬಳಸುತ್ತಾರೆ. ರಾಗದ ಬಡತ್ ಹಾಡುವಾಗ ಆಕಾರವನ್ನು ಉಪಯೋಗಿಸದೇ ಆಯಾ ಬಂದೀಷ್‌ಗಳ ಬೋಲಗಳನ್ನೇ ಬಳಸುತ್ತಾರೆ. ಈ ಸಮಯದಲ್ಲಿ ಧ್ರುತ್ ಲಯದಲ್ಲಿ ಖಟ್ಕಾ, ಮುರ್ಕಿಗಳನ್ನು ಹಾಗು ತಾನುಗಳನ್ನು ಸುಂದರವಾಗಿ ಹಾಡುತ್ತಾರೆ. ಮಂದ್ರ ಸಪ್ತಕದಿಂದ ಮಧ್ಯ ಸಪ್ತಕ ಹಾಗೇ ತಾರ ಸಪ್ತಕದವರೆಗೆ ವಿಲಂಬಿತ ಖ್ಯಾಲನ್ನು ಹಂತ ಹಂತವಾಗಿ ಇಲ್ಲಿ ಸ್ವರವಿಸ್ತಾರ ಮಾಡುತ್ತಾರೆ. ತಿರುವು ಮುರುವಾದ ವಕ್ರತಾನಗಳ ಬಳಕೆ ಇಲ್ಲಿರುತ್ತದೆ.

**ಜೈಪುರ-ಅತ್ರೌಲಿ ಘರಾಣೆಯ ಗಾಯನದ ವೈಶಿಷ್ಟ್ಯತೆಗಳು**

೧. ಖ್ಯಾಲ ಗಾಯನದಲ್ಲಿ  ವಿಲಂಬಿತ ಗಮಕಯುಕ್ತ ಆಲಾಪಗಳ ಪ್ರಯೋಗ.

೨. ಕಠಿಣ ವಕ್ರ ತಾನ್‌ಗಳ ಪ್ರಯೋಗ.

೩. ಸ್ವರಗಳನ್ನು ಗಟ್ಟಿಯಾಗಿ ಉಸಿರು ಹಿಡಿದುಕೊಂಡು ಐದಾರು ನಿಮಿಷದವರೆಗೆ ಉಚ್ಚರಿಸುವುದು.

೪. ಖಟ್ಕಾ-ಮುರ್ಕಿ ತಾನ್‌ಗಳ ಪ್ರಯೋಗ.

೫. ಅಪ್ರಚಲಿತ, ಜೋಡಿರಾಗ ಹಾಗು ವರ್ಕ ರಾಗಗಳನ್ನು ಹಾಡುವುದು.

೬ ಖ್ಯಾಲ ಗಾಯನದಲ್ಲಿ ಹೊಸ ಹೊಸ ಬಂದೀಶ್‌ಗಳನ್ನು ಹಾಡುವುದು.

೭ ಬಡಾಖ್ಯಾಲನ್ನು ತೀನ್‌ತಾಳದಲ್ಲೇ ಹಾಡುವುದು.

೮. ದೃತ್ ಗತ್ ಅಥವಾ ದೃತ್ ಲಯದಲ್ಲಿ ಮಾಡುವಂತಹಾ ಕಾಲ್ಪನಿಕ ಕೆಲಸವನ್ನು ವಿಲಂಬಿತ ಲಯದಲ್ಲೇ ಮಾಡುವುದು.

೯. ವಿಲಂಬಿತ ಬಡಾಖ್ಯಾಲದಲ್ಲಿ  ಅಂತರಾ ಹಾಡುವುದು ಕಡಿಮೆ.

**ಜೈಪೂರ, ಅತ್ರೌಲಿ ಘರಾಣೆಯ ಪ್ರಮುಖ ಗಾಯಕರು(ಕೃಪೆ: ಸಾಮಾಜಿಕ ಜಾಲತಾಣ)**

* ಉಸ್ತಾದ ಹೈದರ ಅಲಿಖಾನ್
* ಉಸ್ತಾದ ನಥ್ಥನಖಾನ್
* ಉಸ್ತಾದ ಅಜಿಜುದ್ದಿನಖಾನ್
* ಉಸ್ತಾದ ನಥ್ಥನಖಾನ್
* ಉಸ್ತಾದ ಮಂಜಿಖಾನ್
* ಉಸ್ತಾದ ಬುರ್ಜಿಖಾನ್
* ಪಂಡಿತ ಭಾಸ್ಕರಬುವಾ ಬಖಲ
* ಉಸ್ತಾದ ಬದ್ರುದ್ದೀನ
* ಉಸ್ತಾದ್ ಶ್ಯಾಮಸುದ್ದೀನ
* ಉಸ್ತಾದ ನಸೀರುದ್ದೀನ
* ಉಸ್ತಾದ ಗುಲುಬಾಯ ಜಸ್ಥನವಾಲಾ
* ಉಸ್ತಾದ ಅಬ್ದುಲ ಮಜೀದಖಾನ
* ಪಂಡಿತ ಗೋವಿಂದರಾವ ಟೆಂಬ
* ಪಂಡಿತ ಶಂಕರರಾವ್ ಸರಸನಾಯಕ

* ಶ್ರೀಮತಿ ಕೇಸರಬಾಯಿ ಕೇಳ್ಕರ್
* ಶ್ರೀಮತಿ ಮೋಗುಬಾಯಿ ಕುರುಡಿಕರ
* ಶ್ರೀಮತಿ ಲಕ್ಷ್ಮೀಬಾಯಿ ಜಾಧವ
* ಪಂಡಿತ ವಾಮನರಾವ ಸಾಡೋಲಿಕರ
* ಪಂಡಿತ ವಾಮನರಾವ ದೇಶಪಾಂಡೆ
* ಪಂಡಿತ ಮಲ್ಲಿಕಾರ್ಜುನ ಮನಸೂರ
* ಶ್ರೀಮತಿ ಪದ್ಮಾವತಿ ಸಾಲಿಗ್ರಾಮ ಗೋಖಲೆ
* ಶ್ರೀಮತಿ ಸರ್ದಾರಬಾಯಿ ಕಾರಡೇಕರ
* ಶ್ರೀಮತಿ ಮಾಣಿಕ ಭಿಡೆ
* ಶ್ರೀಮತಿ ಮೊಗುಬಾಯಿ ಕರುಡಿಕರ
* ಪಂಡಿತ ಗಜಾನನರಾವ ಜೋಶಿ
* ಶ್ರೀಮತಿ ಜಯಶ್ರೀ ಪಾಟ್ನೇಕರ್
* ಪಂಡಿತ ಮಲ್ಲಿಕಾರ್ಜುನ ಮನಸೂರ
* ಪಂಡಿತ ರಾಜಶೇಖರ ಮನಸೂರ
* ಡಾ. ಅರುಣ ದ್ರಾವಿಡ
* ಶ್ರೀಮತಿ ಪದ್ಮಾ ತಲವಾಲಕರ
* ಪಂಡಿತ ಜಿ.ಟಿ. ತಿಲಕ
* ಪಂಡಿತ ರತ್ನಾಕರ ಪೈ
* ಡಾ. ಮಿಲಿಂದ ಮಾಲಶೆ ಮತ್ತು
* ಪಂ. ವಿನಾಯಕ ಪಾಠಕ
* ಉಸ್ತಾದ ಗುಲುಬಾಯಿಜಸ್ಥನವಾಲಾ
* ಬಾಬಾ ಅಜಿಜುದ್ದಿನಖಾನ
* ಪಂಡಿತ ವಾಮನರಾವ ಸಾಡೋಲಿಕರ್
* ಶ್ರೀಮತಿ ಶೃತಿ ಸಾಡೋಲಿಕರ್
* ಪಂಡಿತ ನಿವೃತಿ ಬುವಾಸರನಾಯಕ
* ಡಾ. ಭಾರತಿ ವೈಶಂಪಾಯನ
* ಪಂಡಿತ ಉಲ್ಲಾಸ ಕಾಶಲಕರ

* ಪಂಡಿತ ದಿನಕರ ಜಾದವ
* ಶ್ರೀಮತಿ ವಿಜಯಜಾದವ
* ಶ್ರೀಮತಿ ದೊಂಡುತಾಯಿ ಕುಲಕರ್ಣಿ
* ಶ್ರೀಮತಿ ಲಕ್ಷ್ಮಿಬಾಯಿ ಜಾದವ
* ಶ್ರೀಮತಿ ಕೌಸಲ್ಯ ಮಂಜೇಶ್ವರ
* ಉಸ್ತಾದ ಮೊಹಮ್ಮದ
* ಉಸ್ತಾದ್ ರಶೀದಖಾನ
* ಉಸ್ತಾದ್ ಮೊಹಮ್ಮದ ಸಯಿದಖಾನ
* ಉಸ್ತಾದ ಅಜಿಜುದ್ದೀನಖಾನ
* ಪಂಡಿತ ಗೋವಿಂದ ಬುವಾ ಸಾಲಿಗ್ರಾಮ
* ಪಂಡಿತ ಆನಂದರಾವ
* ಪಂಡಿತ ಮೋಹನರಾವ ಪಾಲೇಕಾರರ
* ಪಂಡಿತ ರತ್ನಾಕರ ಪೈ
* ಬಾಬನರಾ ಹಕಲಾಂಕರ
* ಪಂಡಿತ ಪಂಚಾಕ್ಷರಿಸ್ವಾಮಿ ಮತ್ತಿಕಟ್ಟಿ
* ಶ್ರೀಮತಿ ಕೌಸಲ್ಯ ಮಂಜೇಶ್ವರಿ
* ಶ್ರೀಮತಿ ಕಮಲ ಟೆಂಬೆ
* ಶ್ರೀಮತಿ ವಿದೂಷಿ ನೀಲಮ್ಮ ಅಂ. ಕೊಡ್ಲಿ
* ಶ್ರೀಮತಿ ಕುಮುದಿನಿ ಕಡ್ತಾರೆ
* ಪಂಡಿತ ಮಧುಸೂಧನ ಕಾನೆಟಕರ
* ಶ್ರೀಮತಿ ಮಾಣಿಕ ಬೀಡೆ
* ಶ್ರೀಮತಿ ಅಶ್ವಿನಿ ಬೀಡೆ ದೇಶಪಾಂಡೆ
* ಶ್ರೀಮತಿ ದೊಂಡುತಾಯಿ ಕುಲಕರ್ಣಿ
* ಶ್ರೀ ಸಂಜಯ ದಿಕ್ಷಿತ್
* ಶ್ರೀಮತಿ ಮಂಜಿರೆ ವೈಶಂಪಾಯನ
* ಶ್ರೀಮತಿ ಆರತಿ ಅಂಕಲೀಕರ್
* ಪಂಡಿತ ಪ್ರಭಾಕರ ದೇಶಕರ

* ಪಂಡಿತ ಪ್ರಸಾದ ಗುಲವಾನಿ
* ಪಂಡಿತ ಮಧುಕರ ಗುಲವಾನಿ
* ಶ್ರೀಮತಿ ಮಂಜಿರೆ ಕರ್ವೆ ಅಲೆಗಂವಕರ
* ಡಾ. ಬಾಬನರಾವ ಹಲದನಕರ
* ಪಂಡಿತ ಮಧುಸೂದನ ಕಾನೆಟಕರ
* ಉಸ್ತಾದ ಗುಲುಬಾಯಿ ಜಸ್ಥನವಾಲಾ
* ಶ್ರೀಮತಿ ಮಂಜಿರೆ ಅನ್ಸಾರೆ ಕೆಲಕರ
* ಪ್ರೊ. ಎ.ಯು. ಪಾಟೀಲ,
* ಪಂಡಿತ ಆರ್.ಪಿ. ಹೂಗಾರ
* ಡಾ. ವ್ಹಿ.ಆರ್. ಹೂಗಾರ
* ಡಾ. ಮೀರಾ ಗುಂಡಿ
* ಡಾ. ಮೃತ್ಯುಂಜಯ ಅಗಡಿ
* ಡಾ. ನಂದಾ ಪಾಟೀಲ
* ಶ್ರೀಮತಿ ಸವಿತಾ ಅಮರೇಶ ನುಗಡೋಣಿ
* ಶ್ರೀಮತಿ ಸುಮಂಗಲಾ
* ವಿದೂಷಿ ಜಯಶ್ರೀ ಪಾಟ್ನೇಕರ್
* ಡಾ. ಜಯದೇವಿ ಜಂಗಮಶೆಟ್ಟಿ
* ಶ್ರೀಮತಿ ಗೀತಾ ಜಾವಡೆಕರ
* ಶ್ರೀಮತಿ ವಿಜಯಾ ಹಿರೇಮಠ
* ಶ್ರೀಮತಿ ಶಶಿಕಲಾ ವ್ಹಿ. ಚವಡಿ

* ಪ್ರೊ. ಸರಯೂ ಸೊನ್ನಿ

**ಆಗ್ರಾ ಘರಾಣೆ**

ಈ ಘರಾಣೆಯ ಮೂಲ ಪುರುಷರ ಬಗ್ಗೆ ಸಂಗೀತಜ್ಞರಲ್ಲಿ ಭಿನ್ನಾಭಿಪ್ರಾಯಗಳಿದ್ದು, ಕೆಲವರ ಪ್ರಕಾರ ಹಾಜಿ ಸೂಜನ್‌ಖಾನ್‌ರವರು ಮತ್ತು ಘಗ್ಗೆ ಖುದಾಭಕ್ಷರು ಆಗ್ರಾ ಘರಾಣೆಯ ಮೂಲ ಸಂಸ್ಥಾಪಕರು. ಇವರು ತಾನಸೇನರ ಸಮಕಾಲೀನವರು ಎಂಬ ಅಭಿಪ್ರಾಯವಾದರೆ, ಇನ್ನು ಕೆಲವರ ಪ್ರಕಾರ ಶ್ಯಾಮರಂಗ ಹಾಗು ಸರಸರಂಗರವರು ಈ ಘರಾಣೆಯ ಮೂಲ ಪುರುಷರು.

ಆಗ್ರಾ ಘರಾಣೆಯು ಒಂದು ಪ್ರಸಿದ್ಧ ಘರಾಣೆಯಾಗಿದ್ದು, ಮೂಲತಃ ಇದು ಧೃಪದ್ – ಧಮಾರ್ ಹಾಡುವಂತಹ ಸಂಗೀತಗಾರರ ಕೈಯಲ್ಲಿತ್ತು. ಆದುದರಿಂದ ಈ ಘರಾಣೆಯಲ್ಲಿ ಬರುವ ಖ್ಯಾಲ ಗಾಯನದಲ್ಲಿ ಧೃಪದ್–ಧಮಾರ್‌ನ ನೋಂ–ತೋಂ ಆಲಾಪಗಳ, ಬೋಲುಗಳ ಪ್ರಯೋಗ ಸ್ಪಷ್ಟವಾಗಿ, ಮಹತ್ವದ್ದಾಗಿ ಹಾಗೂ ಮುಖ್ಯ ಲಕ್ಷಣವಾಗಿ ಎದ್ದು ಕಾಣುತ್ತದೆ.

ಉಸ್ತಾದ ನಥನ್ ಖಾನ್ರವರು ಆಗ್ರಾ ಘರಾಣೆಯನ್ನು ಬೆಳೆಸುವಲ್ಲಿ ವಿಶೇಷವಾಗಿ ಪರಿಶ್ರಮಿಸಿದರು. ನಂತರ ಇವರ ಪುತ್ರರಾದ ಉಸ್ತಾದ ವಿಲಾಯತ ಹುಸೇನಖಾನರಿಂದ ಈ ಘರಾಣೆಯು ಮಹಾರಾಷ್ಟ್ರ ರಾಜ್ಯದಲ್ಲಿ ವಿಶೇಷವಾಗಿ ಬೆಳೆಯಿತು.

"ಉಸ್ತಾದ ವಿಲಾಯತ ಹುಸೇನಖಾನರ ಅಭಿಪ್ರಾಯದಂತೆ ಆಗ್ರಾ ಘರಾಣೆಯು ಎರಡು ಪರಂಪರೆಗಳಲ್ಲಿ ಮುಂದುವರಿದುಕೊಂಡು ಬಂದುದು ಕಂಡು ಬರುತ್ತದೆ. ಮೊದಲನೇಯದು ೧೭೮೦ರ ಸುಮಾರಿಗೆ ಶ್ಯಾಮರಂಗ ಮತ್ತು ಸರಸರಂಗ ಅವರಿಂದ ಪ್ರಾರಂಭವಾದರೆ, ಇನ್ನೊಂದು ೧೮೦೦ರ ಸುಮಾರಿಗೆ ಉಸ್ತಾದ್ ಇಮ್‌ದಾದ್‌ಖಾನ ಅವರಿಂದ ಪ್ರಾರಂಭವಾಯಿತೆಂದು ತಿಳಿದು ಬರುತ್ತದೆ"(ಜ್ಯೋತಿಲಕ್ಷ್ಮಿ ಡಿ.ಪಿ., ಹಿಂದೂಸ್ಥಾನಿ ಸಂಗೀತಕ್ಕೆ ಗ್ವಾಲಿಯರ್ ಘರಾಣೆಯ ಕೊಡುಗೆ (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ) ಪುಟ ಸಂಖ್ಯೆ ೫೦).

ಈ ಘರಾಣೆಯ ಸಂಗೀತಗಾರರು ತಮ್ಮ ಗಾಯನದಲ್ಲಿ ಖ್ಯಾಲ, ಧೃಪದ್–ಧಮಾರ್ ಮತ್ತು ಠುಮ್ರಿ–ದಾದರಾಗಳನ್ನು ಹಾಡುತ್ತಾರೆ. ಖ್ಯಾಲನ್ನು ವಿಸ್ತರಿಸಲು ಧೃಪದ್ ಅಂಗವನ್ನು ಉಪಯೋಗಿಸುತ್ತಾರೆ. ಆಲಾಪ, ಜೋಡಲಾಪಗಳಲ್ಲಿ ವಿವಿಧವಾದ ಬೋಲ್‌ಗಳ ಲಯಕಾರಿಗಳನ್ನು ಮಾಡುತ್ತಾರೆ. ಸುರ, ಸೌಂದರ್ಯ, ಲಯಕಾರಿ ಸ್ವರಗಳ ಹಾಗೂ ತಾಳಗಳ ಮೇಲೆ ಇಲ್ಲಿ ಹಿಡಿತವಿರುತ್ತದೆ. ಖ್ಯಾಲ ಗಾಯನದಲ್ಲಿ ಹೆಚ್ಚಾಗಿ ತಾವೇ ರಚಿಸಿದ ಬಂದೀಷಗಳನ್ನು ಹಾಡುತ್ತಾರೆ.

**ಆಗ್ರಾ ಘರಾಣೆಯ ಗಾಯನದ ವೈಶಿಷ್ಟ್ಯತೆಗಳು**

೧. ದ್ರುಪದ್, ದಮಾರ ಅಂಗದ ನೋಂ, ತೋಂ ಬೋಲ್‌ಗಳನ್ನು ರಾಗ ವಿಸ್ತಾರದಲ್ಲಿ ಪ್ರಯೋಗ ಮಾಡುವುದು.

೨. ಆಲಾಪ, ಜೋಡಾಲಾಪಗಳಲ್ಲಿ ವಿವಿಧ ಬೋಲಗಳ ಲಯಕಾರಿಗಳ ಪ್ರಯೋಗ ಮಾಡುವುದು.

೩. ಗಂಭೀರ ಪ್ರಕೃತಿಯ ಗಾಯನ ಶೈಲಿ.

೪. ಲಯಕಾರಿಗೆ ಹೆಚ್ಚಿನ ಹಾಗು ವಿಶೇಷ ಮಹತ್ವ ನೀಡುವುದು.

೫. ಗಮಕಯುಕ್ತ ತಾನ್‌ಗಳಿಂದ ಕೂಡಿದ ಗಾಯನ.

೬ ಬೋಲ್ ಆಲಾಪ ಮತ್ತು ಬೋಲತಾನಗಳಲ್ಲಿ ಲಯಕಾರಿ ಮಾಡುವುದು.

**ಆಗ್ರಾ ಘರಾಣೆಯ ಪ್ರಮುಖ ಗಾಯಕರು(ಕೃಪೆ: ಸಾಮಾಜಿಕ ಜಾಲತಾಣ)**

* ಉಸ್ತಾದ ಮೊಸಿನಿಖಾನ ನಿಯಾಜಿ
* ಪಂ. ಘಗ್ಗೇ ಖುಧಾಬಕ್ಷ
* ಉಸ್ತಾದ ಮೆಹಬುಬಖಾನ, ದರಸ ಪಿಯಾ
* ಉಸ್ತಾದ ಗುಲಾಮ ಅಬ್ಬಾಸಖಾನ, ಸಬರಂಗ
* ಉಸ್ತಾದ ನಥ್ಥನಖಾನ
* ಉಸ್ಥಾದ ತಸ್ಸಾದುಕ ಹುಸೇನಖಾನ ವಿನೋದ ಪಿಯಾ
* ಉಸ್ತಾದ ಫಯಾಜಖಾನ
* ಉಸ್ಥಾದ ಅತ್ತಾ ಹುಸೇನಖಾನ
* ಉಸ್ಥಾದ ವಿಲಾಯತ ಹುಸೇನಖಾನ, ಪ್ರಾಣ ಪಿಯಾ
* ಪಂ. ಹನುಮಂತರಾವ್ ವಾಳ್ವೇಕರ್
* ಉಸ್ತಾದ ಖಾದಿಮ ಹುಸೇನಖಾನ, ಸಾಜನ ಪಿಯಾ
* ಉಸ್ತಾದ ಲಟಫಟ ಹುಸೇನಖಾನ, ಪ್ರೇಮದಾಸ
* ಉಸ್ತಾದ ಶರಾಪಟ ಹುಸೇನಖಾನ, ಪ್ರೇಮರಂಗ
* ಅನ್ವರ ಹುಸೇನಖಾನ

* ಉಸ್ತಾದ ಬಶೀರ ಅಹಮದಖಾನ
* ಉಸ್ತಾದ ಅಕೀರ ಅಹಮದಖಾನ, ಮೋಹನ ಪಿಯಾ
* ಉಸ್ತಾದ ಶಬ್ಬೀರ ಅಹಮದಖಾನ
* ಉಸ್ತಾದ ನಸೀಮ ಅಹಮದಖಾನ
* ಉಸ್ತಾದ ವಾಸೀಮ ಅಹಮದಖಾನ
* ಉಸ್ತಾದ ಶಾಫಿ ಅಹಮದಖಾನ
* ಉಸ್ತಾದ ಅಹಸನ ಅಹಮದಖಾನ
* ಉಸ್ತಾದ ಅಜಮತ ಹುಸೇನಖಾನ
* ಉಸ್ತಾದ ಉಸ್ತಾದ ಫಯಾಜ್ ಖಾನ್, ಪ್ರೇಮಪ್ರಿಯ
* ಪಂ. ದಿಲೀಪ್ ಚಂದ್ರಾವೇದಿ
* ಆಗ್ರಾ ಘರಾಣೆಯ ಪ್ರಖ್ಯಾತ ಗಾಯಕರು
* ದಿ॥ ಅಂಜನಿಬಾಯಿ ಲೋಲೆಕರ
* ದಿ॥ ಉಸ್ತಾದ ಅಖೀಲ ಅಹಮದಖಾನ, ಆಗ್ರಾ
* ದಿ॥ ಉಸ್ತಾದನಸೀರ ಅಹಮದಖಾನ
* ದಿ॥ಉಸ್ತಾದ ಶಬ್ಬೀರ ಅಹಮದ ಖಾನ, ಆಗ್ರಾ
* ಪಂ. ಮಧುಸೂಧನ ಜೋಷಿ
* ಪಂ. ಶ್ರೇ. ಕೃಷ್ಣ ಬಾಬನರಾವ
* ಪಂ. ಅರುಣ ಕಾಳಿಕರ, ರಸದಾಸ
* ಉಸ್ತಾದ ಯೂನಸ ಹುಸೇನಖಾನ ದರ್ಪಣ
* ಉಸ್ತಾದ ಜೋಹ್ರಾಬಾಯ
* ಉಸ್ತಾದ ಯಲಿಪೌ, ಸಗುನ ಪಿಯಾ
* ಪಂ. ರಾಮರಾವ ನಾಯಕ
* ಪಂ. ಹರೀಷ ಚಂದೆರ ಬಾಲಿ
* ಪಂ. ಜಗನ್ನಾಥ ಬುವಾ ಪುರೋಹಿತ, ಗುನಿದಾಸ ಮಾರ್ದನ ಸಂಗೀತಜ್ಞ
* ಪ್ರೊ. ಸತ್ಯದೇವ ಶರ್ಮಾ ಜಲಂಧರ ವಾಲೆ
* ಶ್ರೀಮತಿ ಲಲಿತಾ ಜೆ. ರಾವ
* ಶ್ರೀಮತಿ ಭಾರತಿ ಪ್ರತಾಪ
* ಉಸ್ತಾದ ಅಸಾದ ಅಲಿಖಾನ

* ಪಂ. ವಿಜಯ ಕಿಚುಲು
* ಪಂ. ರವಿ ಕಿಚುಲು
* ಪಂ. ಶ್ರೀಕೃಷ್ಣ ನಾರಾಯಣ ರತಂಜನಕರ
* ಪಂ. ಎಸ್.ಸಿ.ಆರ್. ಭಟ್
* ಪಂ. ಕೆ.ಈ. ಗಿಚಿಡೆ
* ಪಂ. ಎಮ್.ಆರ್. ಗೌತಮ
* ಚಿದಾನಂದ ನಗರಕರ, ಚಿಟ ಆನಂದ
* ಪಂ. ದಿನಕರ ಕಾಯ್ಕಿಣಿ
* ಶ್ರೀಮತಿ ಸುಮತಿ ಮುತಟಕರ
* ರಾಮರಾವ ನಾಯಕ
* ಶ್ರೀಮತಿ ಮಾಣಿಕ ವರ್ಮಾ
* ಪಂ. ಜಿತೇಂದ್ರ ಅಭಿಷೇಕ
* ಮೋನಿ ಬಾಬು
* ಪಂ. ಗುಲಾಮ ಗಸನ್ನೈನಖಾನ ಅಲಯಾಸ, ರಾಜ ಮೈಯಾನ
* ಪಂ. ರತ್ನಾಕಾಂತ ರಾಮನಾಥಕರ, ಪ್ರೇಮರಂಗ
* ಶ್ರೀಮತಿ ವೃಂದಾ ಮಂದಕುರ
* ಸುಭ್ರ ಗುಹಾ
* ಶ್ರೀ ರಾಜೇಶ ಕೆಲಕರ
* ಉಸ್ತಾದ ಮೋಸಿನ ಅಹಮದಖಾನ
* ಪಂ. ತುಷಾರ ದತ್ತ
* ಪಂ. ಸುದೀಂದ್ರ ಬೌಮಿಕ
* ಪಂ. ಸುನೀಲ ಬೋಸ
* ರೂಬಿ ಮಲ್ಲಿಕ, ಆಗ್ರಾ

* ಪಂ. ದೇವಶಾಲಿ ಗಂಗೂಲಿ
* ಶ್ರೀ ಗುಲಾಮಫರೀದ
* ಪಂ. ಇಂದೂಧರ ನಿರೋಡಿ
* ಪಂ. ಶ್ರೀನಿವಾಸ ಗದಕರ.

**ಘಟಿಯಾಲಾ ಘರಾಣೆ**

ಘಟಿಯಾಲಾ ಘರಾಣೆಯನ್ನು ಉಸ್ತಾದ ಬಡೆಪಥೆ ಅಲಿಖಾನ್, ಉಸ್ತಾದ್ ಅಲಿಭಕ್ಷಖಾನ್, ತಾನ್‌ರಸ್‌ರವರು ಸ್ಥಾಪಿಸಿದರು. ಗ್ವಾಲಿಯರ್, ಡೆಲ್ಲಿ, ಜೈಪುರ-ಅತ್ರೋಲಿ ಘರಾಣೆಗಳ ಲಕ್ಷಣಗಳನ್ನು ಈ ಘರಾಣೆಯಲ್ಲಿ ಕಾಣಬಹುದು.

ಘಟಿಯಾಲಾ ಘರಾಣೆಯನ್ನು ತಾನ್‌ರಸ್, ಉಸ್ತಾದ್ ಬಡೆಪಥೆ ಅಲಿಖಾನ್, ಉಸ್ತಾದ್ ಅಲಿಭಕ್ಷ ಖಾನ್‌ರವರು ಸ್ಥಾಪಿಸಿದರು. ಟಪ್ಪಾ-ಹೋರಿ ಪದ್ಧತಿಯಂತೆ ಖ್ಯಾಲಗಾಯನವನ್ನು ಹಾಡುವುದು, ಖ್ಯಾಲ ಗಾಯನದಲ್ಲಿ ಅಂತರಾವನ್ನು ಹಾಡುವುದು ಅತೀ ಕಡಿಮೆ. ಗ್ವಾಲಿಯರ್, ಡೆಲ್ಲಿ, ಜೈಪುರ ಘರಾಣೆಗಳ ಮಿಶ್ರಣದಿಂದಾದ ಘರಾಣೆ ಇದಾಗಿದೆ.

**ಘಟಿಯಾಲಾ ಘರಾಣೆಯ ಪ್ರಮುಖ ಗಾಯಕರು(ಕೃಪೆ: ಸಾಮಾಜಿಕ ಜಾಲತಾಣ)**

* ಉಸ್ತಾದ ಬಡೇಗುಲಾಂ ಅಲೀ ಖಾನ್
* ಉಸ್ತಾದ ಬಡೇ ಫಥೆ ಅಲಿಖಾನ್
* ಉಸ್ತಾದ ಶಫ್ ಖತ್ ಅನಾತ್ ಅಲಿ
* ಉಸ್ತಾದ ಮನ್ವರ್ ಅಲಿ ಖಾನ್
* ಉಸ್ತಾದ ಮಾಝುರ್ ಅಲಿ ಖಾನ್
* ಉಸ್ತಾದ ಜಾವೇದ್ ಅಲಿ ಖಾನ್
* ಉಸ್ತಾದ ಫಥೆ ಅಲಿ ಖಾನ್
* ಉಸ್ತಾದ ಅಮಾನಥ ಅಲಿ ಖಾನ್
* ಉಸ್ತಾದ ಶಫಕ್ತ ಅಮಾನಥ್ ಅಲಿ
* ಮಹಮ್ಮದ್ ಐಝಾಝ್ ಸೊಹೇಲ್
* ಬೇಗಂ ಫರೀದಾ ಖಾನೂಮ್

* ಉಸ್ತಾದ ಜೊಹರ್ ಅಲಿ ಖಾನ್
* ಪಂ. ಪ್ರಸೂನ್ ಬ್ಯಾನರ್ಜಿ
* ಪಂ. ವಸಂತರಾವ್ ದೇಶಪಾಂಡೆ
* ಬೇಗಂ ಫರವೇನ್ ಸುಲ್ತಾನ್
* ಪಂ. ಅಜಯ ಚಕ್ರವರ್ತಿ
* ವಿದೂಷಿ ಕೌಷಿಕಿ ಛಟರ್ಜಿ
* ಉಸ್ತಾದ ಆಸಾದ್ ಅಮಾನಥ ಅಲಿ
* ಉಸ್ತಾದ ಗಲಾಂ ಅಲಿ
* ಉಸ್ತಾದ ಹಮೀದ್ ಅಲಿ ಖಾನ್
* ಉಸ್ತಾದ ಅಲಿಭಕ್ಷ ಜರನಲ್
* ಉಸ್ತಾದ ಬರಕತ್ ಅಲಿ
* ಉಸ್ತಾದ ಮನವರ್ ಅಲಿ ಖಾನ್
* ಉಸ್ತಾದ ಅಸದ್ ಅಮಾನತ್ ಅಲಿಖಾನ್
* ಉಸ್ತಾದ ರಜಾ ಅಲಿಖಾನ್
* ವಿದೂಷಿ ಲಕ್ಷ್ಮಿ ಶಂಕರ
* ಪಂ. ಪ್ರಸೂನ್ ಬ್ಯಾನರ್ಜಿ
* ಪಂ. ಜಗದೀಶ್ ಪ್ರಸಾದ್
* ಪಂ. ಸಮರ್ಥ ಪಂಡಿತ್
* ವಿದೂಷಿ ನಿರ್ಮಲಾದೇವಿ
* ವಿದೂಷಿ ಸಂಯುಕ್ತಾ ಘೋಷ್
* ಪಂ. ರಾಹುಲ್ ದೇಶಪಾಂಡೆ

ಇನ್ನೂ ಹಲವಾರು ಘರಾಣೆಗಳು ಪ್ರಸಿದ್ಧಿ, ಪ್ರಚಾರಗಳನ್ನು ದೊಡ್ಡ ಮಟ್ಟದಲ್ಲಿ ಕಾಣದೇ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಪ್ರಪಂಚದಲ್ಲಿ ಅಪ್ರಚಲಿತ ಘರಾಣೆಗಳಾಗಿ ಉಳಿದಿವೆ. ಉದಾಹರಣೆಗೆ- ರಾಮಪುರದ ಸಹಸ್ವಾನ ಘರಾಣೆ, ಬೆಂಡಿಬಜಾರ್ ಘರಾಣೆ, ಇಂದೋರ್ ಘರಾಣೆ, ಡೆಲ್ಲಿ ಘರಾಣೆ, ಜೋದಪುರದ ಮೆಹವಾಟಿ ಘರಾಣೆ, ಶ್ಯಾಮ ಚೌರಾಸಿಯಾ ಘರಾಣೆ, ಇತ್ಯಾದಿ.

## ಅಪ್ರಚಲಿತ ಗಾಯನ ಘರಾಣೆಗಳು

ಎಲ್ಲಕ್ಕಿಂತ ಮೊದಲು ಖ್ಯಾಲದಲ್ಲಿ ಕವ್ವಾಲ ಬಚ್ಚಾಗಳ ಘರಾಣೆ ಪ್ರಚಾರದಲ್ಲಿತ್ತು. ತದನಂತರ ಉಳಿದ ಘರಾಣೆಗಳು ಬೆಳಕಿಗೆ ಬಂದವು. ಅವುಗಳಲ್ಲಿ ಕೆಲವು ಕಾಲಾನಂತರ ಅಪ್ರಚಲಿತವಾದವು. ಅಂತಹ ಘರಾಣೆಗಳು ಈ ಕೆಳಗಿನಂತಿವೆ.

೧. ರಾಮಪುರ ಘರಾಣೆ

೨. ಬೆಂಡಿ ಬಜಾರ ಘರಾಣೆ

೩. ಇಂದೋರ ಘರಾಣೆ

೪. ಜೋದಪುರದ ಮೆಹವಾಟಿ(ಮೇವಾತಿ) ಘರಾಣೆ

೫. ಸಹಸವಾನ ಘರಾಣೆ

೬. ಖುರ್ಜಾ ಘರಾಣೆ

೭. ಸಹರಾನಪುರ ಘರಾಣೆ

೮. ಮಥುರಾ ಘರಾಣೆ

೯. ಗೋಖಲೆ ಘರಾಣೆ

೧೦. ಫತೇಪುರ ಸಿಕ್ರಿ ಘರಾಣೆ

೧೧. ಸಿಕಂದರಾಬಾದ ಘರಾಣೆ

೧೨. ಡೆಲ್ಲಿ ಘರಾಣೆ

೧೩. ಶ್ಯಾಮಚೌರಾಸಿಯಾ ಘರಾಣೆ

೧೪. ಬನಾರಸ ಘರಾಣೆ ಇತ್ಯಾದಿ.

**ರಾಮಪುರದ ಸಾಸ್ವಾನ ಘರಾಣೆ**

ಸಹಸ್ವಾನ ಘರಾಣೆಯನ್ನು ಉಸ್ತಾದ್ ಇನಾಯತ್ ಹುಸ್ಸೇನ್ ಖಾನ್‌ರವರು ೧೯ನೇ ಶತಮಾನದಲ್ಲಿ ಆವಿಷ್ಕರಿಸಿದರು. ಈ ಘರಾಣೆಯಲ್ಲಿ ಮಧುರತೆಗೆ ಹೆಚ್ಚಿನ ಪ್ರಾಧಾನ್ಯತೆ ನೀಡಲಾಗಿದ್ದು, ಸರಗಂ ಹಾಗೂ ಸರಳತಾನಗಳ ಬಳಕೆ ಇಲ್ಲಿ ಹೆಚ್ಚಾಗಿವೆ.

**ರಾಮಪುರದ ಸಾಸ್ವಾನ ಘರಾಣೆಯ ಪ್ರಮುಖ ಗಾಯಕರು**

ಗುಲಾಂ ಮುಸ್ತಫಾ ಖಾನ್

ಉಸ್ತಾದ್ ನಿಸಾರ್ ಹುಸ್ಸೇನ್ ಖಾನ್

ಉಸ್ತಾದ್ ರಷೀದ್‌ಖಾನ್‌ರವರು

**ಇಂದೋರ್ ಘರಾಣೆ**

ಉಸ್ತಾದ್ ಅಮೀರ್ ಖಾನ್‌ರವರು ೨೦ನೇ ಶತಮಾನದಲ್ಲಿ ಇಂದೋರ್ ಘರಾಣೆಯನ್ನು ಆವಿಷ್ಕರಿಸಿದರು. ಈ ಘರಾಣೆಯಲ್ಲಿ ಸಾಹಿತ್ಯಕ್ಕೆ ಹೆಚ್ಚಿನ ಮಹತ್ವ ನೀಡುತ್ತಾರೆ. ಖ್ಯಾಲ ಗಾಯನದಲ್ಲಿ ತಿಹಾಯಿಯ ಬಳಕೆ ಕಡಿಮೆ ಇರುತ್ತದೆ. ಹಾಗೆಯೇ ಅಂತರಾ ಹಾಡುವುದು ಕಡಿಮೆ. ಸ್ಥಾಯಿಯಲ್ಲೇ ಅಂತರಾದ ಎಲ್ಲಾ ಕೆಲಸ ಮಾಡುತ್ತಾರೆ.

**ಡೆಲ್ಲಿ ಘರಾಣೆ**

ಉಸ್ತಾದ್ ಮಮ್ಮನ್ ಖಾನ್‌ರವರು ೧೮ನೇ ಶತಮಾನದಲ್ಲಿ ಡೆಲ್ಲಿ ಘರಾಣೆಯನ್ನು ಆವಿಷ್ಕರಿಸಿದರು. ಖ್ಯಾಲ ಗಾಯನದಲ್ಲಿ ಮೀಂಡ ಹಾಗು ಗಮಕಯುಕ್ತ ತಾನ್‌ಗಳ ಬಳಕೆ, ಸವಾಲ್-ಜವಬ್, ವಿಶಿಷ್ಟ ರೂಪದ ತಾನ್ ಹಾಗೂ ಸರಗಂಗಳ ಪ್ರಯೋಗಗಳು ಈ ಘರಾಣೆಯ ಪ್ರಮುಖ ಅಂಶಗಳು.

**ಡೆಲ್ಲಿ ಘರಾಣೆಯ ಪ್ರಮುಖ ಗಾಯಕರು**

ಉಸ್ತಾದ್ ಚಾಂದ್ ಖಾನ್

ಉಸ್ತಾದ್ ಗುಲಾಂ ಹುಸೇನ್ ಖಾನ್

ಮೀಯ ಅಚಪಲ

ಉಸ್ತಾದ್ ನಜೀರ್ ಅಹಮದ್ ಖಾನ್

ಉಸ್ತಾದ್ ಉಸಮಾನ್‌ಖಾನ್

ಉಸ್ತಾದ್ ಇಕ್‌ಬಾಲ್ ಅಹಮದ್‌ಖಾನ್

ಉಸ್ತಾದ್ ಸಂಗೀ ಖಾನ್

ಉಸ್ತಾದ್ ಮುರಾದಖಾನ್

ಉಸ್ತಾದ್ ಅಲಿಭಕ್ಷ ಖನ್

ಉಸ್ತಾದ್ ವಜೀರ್ ಖಾನ್

**ಜೋದಪುರದ ಮೆಹವಾಟಿ ಘರಾಣೆ**

ಉಸ್ತಾದ್ ಗಗ್ಗೆನಜೀರ್ ಖಾನ್ ೧೯ನೇ ಶತಮಾನದಲ್ಲಿ ಜೋದಪುರದ ಮೆಹವಾಟಿ ಘರಾಣೆಯನ್ನು ಆವಿಷ್ಕರಿಸಿದರು. ಸಪಾಟತಾನ್, ಗಮಕತಾನ್ ಹಾಗೂ ಸರಗಂಗಳ ಬಳಕೆ ಈ ಘರಾಣೆಯಲ್ಲಿ ಹೆಚ್ಚಾಗಿರುತ್ತದೆ.

**ಜೋದಪುರದ ಮೆಹವಾಟಿ ಘರಾಣೆಯ ಪ್ರಮುಖ ಗಾಯಕರು**

ಪಂಡಿತ ಜಸ್‌ರಾಜ್

ಮೋತಿರಾಮ್

ಮನಿರಾಮ್

ಸಂಜೀವ ಅಭಯಂಕರ್

**ಶ್ಯಾಮಚೌರಾಸಿಯಾ ಘರಾಣೆ**

ಶ್ಯಾಮಚೌರಾಸಿಯಾ ಘರಾಣೆಯನ್ನು ಮಿಯಾಚಾಂದ್‌ಖಾನ್, ಮಿಯಾಸೂರಜ್‌ಖಾನ್‌ರವರು ೧೬ನೇ ಶತಮಾನದಲ್ಲಿ ಆವಿಷ್ಕರಿಸಿದರು. ಲಯಕಾರಿ, ಬೋಲ್‌ತಾನ್ ಹಾಗು ವೇಗದ ತಾನ್, ಸರಗಂಗಳಿಗೆ ಹೆಚ್ಚಿನ ಪ್ರಾಧಾನ್ಯತೆ ಈ ಘರಾಣೆಯಲ್ಲಿದೆ.

**ಶ್ಯಾಮಚೌರಾಸಿಯಾ ಘರಾಣೆಯ ಪ್ರಮುಖ ಗಾಯಕರು**

ಉಸ್ತಾದ್ ಸಲಾಮತ್ ಅಲಿಖಾನ್

ಉಸ್ತಾದ್ ನಜಾಕತ್ ಅಲಿಖಾನ್

## ಬೆಂಡಿ ಬಜಾರ್ ಘರಾಣೆ

ಬೆಂಡಿ ಬಜಾರ್ ಘರಾಣೆಯನ್ನು ಉಸ್ತಾದ್ ಚಜ್ಜುಖಾನ್, ನಜೀರ್ ಖಾನ್, ಖದೀಮ್ ಖಾನ್‌ರವರು ೧೯ನೇ ಶತಮಾನದಲ್ಲಿ ಆವಿಷ್ಕರಿಸಿದರು. ಒಂದೇ ಉಸಿರಿನಲ್ಲಿ ತಾನ್ ಹಾಡುವುದು, ಮೇರು ಖಂಡ ಆಲಾಪಗಳ ಬಳಕೆ, ಗಮಕಯುಕ್ತ ತಾನ್ ಹಾಗು ಸರಗಂಗಳ ಬಳಕೆ ಹಾಗು ಕರ್ನಾಟಕಿ ರಾಗಗಳ ಬಳಕೆ ಈ ಘರಾಣೆಯ ಮುಖ್ಯ ಅಂಶಗಳಾಗಿವೆ.

## ಬೆಂಡಿ ಬಜಾರ್ ಘರಾಣೆಯ ಪ್ರಮುಖ ಗಾಯಕರು

ಉಸ್ತಾದ್ ಅಮಾನ್ ಅಲಿಖಾನ್

ಶ್ರೀಮತಿ ಶಶಿಕಲಾ ಕೋರಡ್ ಕರ್

ಶ್ರೀಮತಿ ಅಂಜನೀ ಬಾಯಿ ಮಾಲ್ಪೆಕರ್

## ಬನಾರಸ ಘರಾಣೆ

ಬನಾರಸ ಘರಾಣೆಯನ್ನು ಪಂ.ಗೋಪಾಲ ಮಿಶ್ರರವರು ೧೯ನೇ ಶತಮಾನದಲ್ಲಿ ಆವಿಷ್ಕರಿಸಿದರು. ಠುಮರಿ ಮಾದರಿಯ ಖ್ಯಾಲ್ ಗಾಯಕಿ ಈ ಘರಾಣೆಯ ಪ್ರಮುಖ ಅಂಶವಾಗಿದೆ.

## ಬನಾರಸ ಘರಾಣೆಯ ಪ್ರಮುಖ ಗಾಯಕರು

ಪಂ. ರಾಜನ್ ಮಿಶ್ರ

ಪಂ. ಸಾಜನ್ ಮಿಶ್ರ

ಶ್ರೀಮತಿ ಗಿರಿಜಾದೇವಿ

## ದೃಪದ–ಗಾಯನ ಘರಾಣೆಗಳು

ದೃಪದ್ ಮತ್ತು ದಮಾರ್‌ಗಳು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಮೂಲ ಶೈಲಿ ಅಥವಾ ಪ್ರಕಾರವಾಗಿವೆ. ಈ ಗಾಯನ ಶೈಲಿ ಯಾರಿಂದ, ಯಾವಾಗ ಆಯಿತು ಎಂಬುದು ಖಚಿತವಾಗಿ ತಿಳಿದು ಬಂದಿಲ್ಲ. "ಶಾರ್ಙ್ಗದೇವನ ಸಂಗೀತ ರತ್ನಾಕರ ಗ್ರಂಥದಲ್ಲಿ ಧ್ರುವ ಎನ್ನುವ ಹೆಸರಿನ ಪ್ರಬಂಧದ ವರ್ಣನೆ ಕಂಡುಬರುತ್ತದೆ. ಅಂದರೆ ಧ್ರುವ ಎನ್ನುವ ಪ್ರಬಂಧದಲ್ಲಿ ಉಪಯೋಗಿಸಲ್ಪಡುವ ಪದವೇ ಧ್ರುವಪದವೆಂದು ಅರ್ಥ ಮಾಡಬಹುದು. ಈ ಪದ್ಧತಿಯನ್ನು ೧೫ನೇ ಶತಮಾನದಲ್ಲಿ ರಾಜಮಾನಸಿಂಹತೋಮರನು ಪ್ರಚಾರದಲ್ಲಿ ತಂದನು ಎಂಬುವುದು ವಿದ್ವಾಂಸರ ಅಭಿಪ್ರಾಯ. ಇದಕ್ಕೂ ಮೊದಲು ೧೩ನೇ ಶತಮಾನದಲ್ಲಿಯೇ ದೃಪದ ಪದ್ಧತಿಯ ಅವಿಷ್ಕಾರವಾಗಿದೆಯಂತಲೂ ಕೆಲವು ವಿದ್ವಾಂಸರ ಮತ"(ಉಲ್ಲೇಖ, ಮೃತ್ಯುಂಜಯಸ್ವಾಮಿ ಪುರಾಣಿಕಮಠ, ಹಿಂದೂಸ್ತಾನಿ ಸಂಗೀತ, ಪುಟ ೦೩).

ದೃಪದ ಎಂದರೆ ದೃವಪದ ಎಂದಾಗಿದ್ದು, ಪದಗಳನ್ನು ಛೇದಿಸಿ ಲಯವನ್ನು ದುಗುನ್, ತಿಗುನ್, ಚೌಗುನ್(ದುಪ್ಪಟ್ಟು, ಮೂರುಪಟ್ಟು, ನಾಲ್ಕು ಪಟ್ಟು) ಮಾಡಿ ಹಾಡುವುದು. ಈ ಪದ್ಧತಿಯ ಗಾಯನದಲ್ಲಿ ಲಯದ ಲೆಕ್ಕಾಚಾರವೇ ಹೆಚ್ಚಾಗಿದ್ದು, ರಂಜಕತೆಯ ಪ್ರಮಾಣವು ಕಡಿಮೆಯಾಗಿರುತ್ತದೆ. ದೃಪದ್ ಗಾಯನದಲ್ಲಿ ಸ್ಥಾಯಿ, ಅಂತರಾ, ಸಂಚಾರಿ ಮತ್ತು ಅಭೋಗಿ ಎಂಬ ನಾಲ್ಕು ವಿಭಾಗಗಳಿವೆ. ಈ ಗಾಯನ ಶೈಲಿಯನ್ನು ವಿಶೇಷವಾಗಿ ಚೌತಾಲದಲ್ಲಿ ಹಾಡುತ್ತಾರೆ. ಹಾಗೆಯೇ ಪಖವಾಜ್ ವಾದ್ಯವನ್ನು ಸಾಥಿಗಾಗಿ ಬಳಸುತ್ತಾರೆ. ಈ ಗಾಯನದಲ್ಲಿ ವೀರ, ಶೃಂಗಾರ, ಶಾಂತ ಮತ್ತು ಭಕ್ತಿರಸಗಳು ಪ್ರಧಾನವಾಗಿರುತ್ತವೆ.

ದೃಪದ ಗಾಯನ ಪದ್ಧತಿಯು 'ನೋಂ ತೋಂ' ಆಲಾಪದಿಂದ ಪ್ರಾರಂಭಗೊಳ್ಳುತ್ತವೆ. ನೋಂ ತೋಂ ಆಲಾಪವು ಪ್ರಾರಂಭದಲ್ಲಿ ಲಯರಹಿತವಾಗಿ ಹಾಗು ವಿಲಂಬಿತ ಗತಿಯಲ್ಲಿರುತ್ತದೆ. ಇಲ್ಲಿ ನೋಂ ತೋಂ ಆಲಾಪಗಳು ಮೀಂಡ್ ರೂಪದಲ್ಲಿರುತ್ತವೆ. ನಿಧಾನವಾಗಿ ಲಯವು ಬೆಳೆದಂತೆ ಲಯಬದ್ಧವಾಗಿ ಕೊನೆಯಲ್ಲಿ ಗಮಕಯುಕ್ತ ದ್ರುತ್ ತಾನಗಳ ರೂಪ ಪಡೆಯುತ್ತದೆ. ನಂತರದಲ್ಲಿ ದ್ರುಪದದ ಸಾಹಿತ್ಯಗಳನ್ನು ವಿಲಂಬಿತ ಲಯದಲ್ಲಿ ಹಾಡಲಾಗುತ್ತದೆ. ಇಲ್ಲಿ ಲಯಕಾರಿಗೆ ವಿಶೇಷ ಮಹತ್ವವಿದ್ದು, ದುಗುನ್, ತಿಗುನ್, ಚೌಗುನ್ ಲಯದಲ್ಲಿ ಸಾಹಿತ್ಯವನ್ನು ಚೌತಾಲ ತಾಳದಲ್ಲಿ ಹಾಡಲಾಗುತ್ತದೆ.

ದೃಪದ್ ಗಾಯನದ ಸಾಹಿತ್ಯವು ದೇವಾನು ದೇವತೆಗಳ ಪರಾಕ್ರಮದ ವರ್ಣನೆಗಳಿಂದ ಕೂಡಿರುತ್ತದೆ. ಪ್ರಸ್ತುತ ಕಾಲಮಾನದಲ್ಲಿ ದೃಪದ ಗಾಯನವು ಕಡಿಮೆಯಾಗಿದ್ದು, ಕೆಲವೇ ಕೆಲವು ಗಾಯಕರು ಈ ಶೈಲಿಯನ್ನು ಜೀವಂತವಾಗಿರಿಸಿ ಬೆಳೆಸಿಕೊಂಡು ಹೋಗುತ್ತಿದ್ದಾರೆ.

ದಮಾರ್ ಗಾಯನ ಶೈಲಿಯೂ ಕೂಡಾ ಧೃಪದ್‌ನಂತೆಯೇ ಇರುತ್ತದೆ. ಈ ಗಾಯನ ಶೈಲಿಯಲ್ಲಿ ಗಮಕ ಪ್ರಯೋಗಕ್ಕೆ ವಿಶೇಷ ಸ್ಥಾನವಿದೆ. ಇಲ್ಲಿಯೂ ದುಗುನ್, ತಿಗುನ್, ಚೌಗುನ್‌ಗಳಿದ್ದು, ದಮಾರ್ ತಾಳದಲ್ಲಿ ಇದನ್ನು ಹಾಡಲಾಗುತ್ತದೆ. ಧೃಪದ್ ಗಾಯನದ ಸಾಹಿತ್ಯವು ಶ್ರೀ ಕೃಷ್ಣನು ಹೋಳಿ ಹಬ್ಬದ ಸಮಯಲ್ಲಿ ಗೋಪಿಕಾ ಸ್ತ್ರೀಯರೊಂದಿಗೆ ನಡೆಸುವಂತಹಾ ಬಣ್ಣಗಳ ರಾಸಲೀಲೆಗಳ ವರ್ಣನೆಯಿಂದ ಕೂಡಿರುತ್ತವೆ.

ಪ್ರಾಚೀನ ಕಾಲದಲ್ಲಿ ಧೃಪದ ಗಾಯಕನಿಗೆ 'ಕಲಾವಂತ' ಎಂದು ಕರೆಯುತ್ತಿದ್ದರು. ಧೃಪದ ಗಾಯಕರು ದೇಶದ ವಿವಿಧ ಭಾಗಗಳಲ್ಲಿ ವಾಸವಾಗಿದ್ದರು. ಆಯಾ ಪ್ರದೇಶದ ಭಾಷೆಯ ಆಧಾರದ ಮೇಲೆ ಧೃಪದ ಗಾಯನದಲ್ಲಿ ನಾಲ್ಕು ವಾಣಿಗಳು ಹುಟ್ಟಿಕೊಂಡು ಪ್ರಚಾರ ಪಡೆದವು. ಅವುಗಳೆಂದರೆ–

೧. ಗೋಬರ್ ಹರಿವಾಣಿ

೨. ಖಂಡಾರ ವಾಣಿ

೩. ಡಾಗೂರ ವಾಣಿ

೪. ನೋಹರ ವಾಣಿ.

ಅಕ್ಬರ ಬಾದಶಹನ ಆಸ್ತಾನದಲ್ಲಿದ್ದ ತಾನಸೇನ, ಬೃಜ ಚಂದ್ರ ಬ್ರಾಹ್ಮಣ, ಸಂಮೋಖನ ಸಿಂಹ ವೀಣಾಕಾರ, ಶ್ರೀ ಚಂದ ರಾಜಪೂತ ಇವರುಗಳು ಈ ನಾಲ್ಕು ವಾಣಿಗಳನ್ನು ಆವಿಷ್ಕರಿಸಿದರು ಎನ್ನಲಾಗಿದೆ(ಉಲ್ಲೇಖ: ಮೃತ್ಯುಂಜಯಸ್ವಾಮಿ ಪುರಾಣಿಕಮಠ ಹಿಂದೂಸ್ತಾನಿ ಸಂಗೀತ, ಪುಟ ಸಂಖ್ಯೆ ೪, ೫) ಹಾಗೆಯೇ 'ಹಕಿಂ ಮಹಮ್ಮದ ಕರಮ ಇಮಾಮ' ಇವರು ತಮ್ಮ "ಮಾದಮಲ್ ಮೌಸೀಕ" ಎಂಬ ಗ್ರಂಥದಲ್ಲಿ ಈ ನಾಲ್ಕು ವಾಣಿಗಳನ್ನು ವಿಸ್ತಾರವಾಗಿ ವಿವರಿಸಿದ್ದಾರೆ.
ಶಾರ್ಙ್ಗದೇವನ ಸಂಗೀತರತ್ನಾಕರದ ಪ್ರಕಾರ ಶುದ್ಧಾ, ಭಿನ್ನಾ, ವೇಸರಾ, ಗೌಡಿ ಮತ್ತು ಸಾಧಾರಣೀ ಎಂಬ ಐದು ಪ್ರಕಾರದ ಗೀತ ರೂಪಕಗಳ ವರ್ಣನೆಯಿದೆ. ಈ ರೂಪಕಗಳ ಆಧಾರದ ಮೇಲೆಯೇ ಮುಂದೆ ಈ ನಾಲ್ಕು ವಾಣಿಗಳು ಹುಟ್ಟಿಕೊಂಡವು ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯ.

### ೧. ಗೋಬರ ಹಾರವಾಣಿ

ಇದು ಶಾಂತ ರಸೋತ್ಪಾದಕ ಸ್ವರ ಗೀತೆಗಳ ಸಮ್ಮಿಶ್ರಣದಿಂದ ವಿಲಂಬಿತ ಗತಿಯಲ್ಲಿ ಸಾಗಿ ಮನಸ್ಸನ್ನು ಉದ್ಧೀಪನಗೊಳಿಸುತ್ತದೆ. ಈ ಎಲ್ಲ ದೃಷ್ಟಿಯಿಂದ ಈ ಗೀತ ಪದ್ಧತಿಯು ಶಾಸ್ತ್ರೀಯ ದೃಷ್ಟಿಯಿಂದ ಉಚ್ಚ ತರಗತಿಯದೆಂದು ಹೇಳಲಾಗಿದೆ. ಶಾಂತರಸ, ಪ್ರಸಾದಗುಣ, ಭಾವಾಭಿವ್ಯಕ್ತಿ, ಧೀರಗತಿ ಮತ್ತು ಸ್ವರಗಳ ಸ್ಪಷ್ಟತೆ ಈ ವಾಣಿಯ ವಿಶೇಷತೆಯಾಗಿರುವ್ಯದರಿಂದ ಇದನ್ನು "ಶುದ್ಧವಾಣಿ" ಎಂದು ಕರೆಯಲಾಗಿದೆ.

## ೨. ಖಂಡಾರವಾಣಿ

ಈ ಪದ್ಧತಿಯಲ್ಲಿ ಲಯವು ಅತಿ ವಿಲಂಬಿತ ಗತಿ ಅಥವಾ ಮಧ್ಯ ಗತಿಯಲ್ಲಿ ಸಾಗಿ, ಶೀಘ್ರ ಭಾವೋದ್ವೇಗ ಹಾಗು ವಿಚಿತ್ರ ಖಂಡ ಸ್ವರಯುಕ್ತ ರೂಪದಲ್ಲಿ ರಂಜಿಸುತ್ತದೆ. ಈ ವಾಣಿಯಲ್ಲಿ ಭಿನ್ನ ಭಿನ್ನ ಸ್ವರಾಲಂಕಾರವನ್ನು ಉಪಯೋಗಿಸುವುದರಿಂದ ಸಂಸ್ಕೃತ ಗ್ರಂಥಕಾರರು ಇದನ್ನು "ಭಿನ್ನಾಗೀತಿ" ಎಂದು ಕರೆದಿದ್ದಾರೆ. ಸೇನಿ ಪಂಗಡದ ಕಲಾವಿದರು ವೀಣಾವಾದನದಲ್ಲಿ ಮಧ್ಯ ಮತ್ತು ಧೃತ್ ಲಯಗಳಲ್ಲಿ ಖಂಡಾರವಾಣಿಯನ್ನು ನುಡಿಸುತ್ತಾ ವೈವಿಧ್ಯಪೂರ್ಣ ಗಮಕಯುಕ್ತ ಅಲಂಕಾರಗಳನ್ನು ಪ್ರದರ್ಶಿಸುತ್ತಾರೆ.

## ೩. ಡಾಗೂರವಾಣಿ

ಇದರಲ್ಲಿ ಸ್ವರಗಳ ಜೋಡಣೆಯು ಸರಳತೆ, ಅವುಗಳ ಲಾಲಿತ್ಯಭಾವ ಹಾಗು ಲಯದಲ್ಲಿ ವಿಚಿತ್ರತೆಯ ಪ್ರದರ್ಶನದೊಂದಿಗೆ ಕೇಳುವವರ ಸಹನೆಗೆ ಒಪ್ಪುವ ತಾಳದ ಗತಿಯ ಸುಲಭ ಚಲನೆ ಇವುಗಳಿಂದ ಸೊಗಸಾಗಿ ಒಪುತ್ತದೆ. ಈ ವಾಣಿಯನ್ನು ಡಾಗರ್ ಮನೆತನದವರು ಆವಿಷ್ಕರಿಸಿದರು. ಇದು ಧೃಪದ ವಾಣಿಗಳಲ್ಲಿ ಪ್ರಚಲಿತವಾದ ವಾಣಿಯಾಗಿದೆ. ಡಾಗರ್ ಮನೆತನದವರು ಮುಸ್ಲಿಂ ಧರ್ಮದವರಾಗಿದ್ದರೂ ಹಿಂಧೂ ಧರ್ಮದ ದೇವಾನುದೇವತೆಗಳ ವರ್ಣನೆಗಳ ಸಾಹಿತ್ಯವನ್ನು ಹಾಡುತ್ತಾ, ಸಂಗೀತಕ್ಕೆ ಯಾವುದೇ ರೀತಿಯ ಜಾತಿ, ಧರ್ಮಗಳಿಲ್ಲ ಎಂಬುದನ್ನು ಶತಶತಮಾನಗಳಿಂದ ಸಾರುತ್ತದ್ದಾರೆ. ಸರಳತೆ, ಸೌಂದರ್ಯತೆ, ಸಹಜತೆ ಮತ್ತು ವಕ್ರ ಸ್ವರಗಳ ಉಪಯೋಗ ಈ ವಾಣಿಯ ಗಾಯಕರಲ್ಲಿ ಕಾಣಬಹುದಾಗಿದೆ. ಬೃಜ ಚಂದ್ರ ಬ್ರಾಹ್ಮಣನ ವಾಣಿಯನ್ನು ಆತನ ಊರಿನ ಹೆಸರಿನಿಂದ 'ಡಾಗರ್‌ವಾಣಿ' ಎಂದು ಕರೆಯಲಾಗಿದೆ.

ಉದಯ ಭಾವಲ್‌ಖರ್, ಋತ್ವಿಕ್ ಸನ್ಯಾಲ್, ನಿರ್ಮಲ್ಯ ದೇವ್ ಹಾಗು ಗುಂಡೇಚ ಸಹೋದರರು ಡಾಗೂರವಾಣಿಯ ಪ್ರಮುಖ ಕಲಾವಿದರು.

## ೪. ನೋಹಾರವಾಣಿ

ಇದರಲ್ಲಿ ಭಾವಪುಷ್ಟಿ, ರಸಪುಷ್ಟಿಯಲ್ಲಿ ಅಷ್ಟು ಪರಿಣಾಮಕಾರಿಯಲ್ಲದಿದ್ದರೂ ಸ್ವರಾಂತರಗಳ ಚಮತ್ಕಾರ, ಒಮ್ಮೆಲೇ ಪುಟಿದೆದ್ದು ಬರುವ ಸ್ವರಯುಕ್ತ ಧ್ವನಿಗಳ ಠೇಂಕಾರಗಳು ಆಶ್ಚರ್ಯಕರ ರೀತಿಯಲ್ಲಿ ಶೋತೃಗಳನ್ನು ಕೌತುಕಗೊಳಿಸುತ್ತವೆ. ಶ್ರೀ ಚಂದ ರಾಜಪೂತನ ವಾಣಿಯನ್ನು ಆತನ ಊರಿನ ಹೆಸರಿನಿಂದ 'ನೋಹರ ವಾಣಿ' ಎಂದು ಪ್ರಸಿದ್ಧಿ ಪಡೆಯಿತು. ಒಂದು ಸ್ವರದಿಂದ ಮತ್ತೊಂದು ಸ್ವರಕ್ಕೆ ಲೀಲಾಜಾಲವಾಗಿ ಬಂದು ಸ್ವರಾಂತರಗಳನ್ನು ಹಾಡುವುದು ಈ ವಾಣಿಯ ವಿಶೇಷತೆಯಾಗಿದೆ.

"ಸಂಗೀತ ರಸಿಕರು ಗೋಬರವಾಣಿಯನ್ನು ರಾಜನೆಂದು, ಡಾಗೂರ ವಾಣಿಯನ್ನು ಮಂತ್ರಿಯೆಂದು, ಖಂಡಾರವಾಣಿಯನ್ನು ಸೇನಾಧಿಪತಿಯೆಂದು ಮತ್ತು ನೋಹಾರವಾಣಿಯನ್ನು ಭೃತನೆಂದು ಈ ನಾಲ್ಕು ವಾಣಿಗಳ ಗತ್ತು ಗಮ್ಮತ್ತುಗಳು, ಸ್ವಭಾವ ವೈಶಿಷ್ಟ್ಯತೆಗಳ ಮೇಲಿಂದ ಅರ್ಥಪೂರ್ಣವಾಗಿ ಉಪಮಿಸಿದ್ದಾರೆ"(ಕೆ.ಫ಼ಿ.ಮಠ, ಸಿದ್ಧರಾಮಯ್ಯ ಮಠಪತಿ ಗೋರಟಾ(ಸಂ), ನಾದ ಲಹರಿ, ಪು ೧೯೬)

೨೦ನೇ ಶತಮಾನದಲ್ಲಿ ದಿ॥ ರಾಧಿಕಾ ಮೋಹನ ಗೋಸ್ವಾಮಿ(ಕಲ್ಕತ್ತಾ), ಉಸ್ತಾದ ಕಾಲೇಖಾನ (ಬೆತಿಯಾ), ದಿ॥ ನಾರಾಯಣ ಮುಖ್ಯೋಪಾಧ್ಯಾಯ(ವಾರಣಾಸಿ), ದಿ॥ ಚಂದನ ಚೌಬೆ(ಮಥುರಾ), ಉಸ್ತಾದ ನಸುರುದ್ದೀನ್ ಖಾನ(ಇಂದೋರ), ಉಸ್ತಾದ ಖುರ್ಷಿದ್ ಅಲಿಖಾನ(ಲಖನೌ)ರವರು ಈ ಗಾಯನ ಶೈಲಿಯನ್ನು ಪ್ರಚಾರ ಮಾಡಿದರು. ಪ್ರಸ್ತುತದಲ್ಲಿ ಪಾಠಕ ಬಂಧುಗಳು ಮತ್ತು ಡಾಗೂರ ಬಂಧುಗಳು ಇಂದಿಗೂ ಈ ಧೃಪದ-ದಮಾರ ಗಾಯನವನ್ನು ಉಳಿಸಿ, ಬೆಳೆಸುತ್ತಿದ್ದಾರೆ.

**ಠುಮರಿ– ಗಾಯನ ಘರಾಣೆಗಳು**

ಲಘು ಶಾಸ್ತ್ರೀಯ ಸಂಗೀತದ ಮುಖ್ಯ ಪ್ರಕಾರವಾದ ಠುಮರಿ ಗಾಯನ ಪದ್ಧತಿಯು ಲಖನೌ ದರಬಾರದ ಗಾಯಕರಾದ ಉಸ್ತಾದ್ ಸಾದಿಕ್ ಅಲಿ ಅವರಿಂದ ಪ್ರಾರಂಭವಾಯಿತು ಹಾಗು ಇವರೇ ಠುಮರಿ ಗಾಯನ ಪದ್ಧತಿಯ ಪ್ರವರ್ತಕರು ಎನ್ನಲಾಗಿದೆ. ಠುಮರಿ ಗಾಯನವು ಭಾವ ಪ್ರಧಾನವಾಗಿದ್ದು ಶೃಂಗಾರ ರಸ ಪ್ರಧಾನವಾಗಿದೆ. ಲಖನೌ ಸಂಸ್ಥಾನದ ನವಾಬರಾದ ವಾಜಿದಲಿ ಶಹಾ ಅವರ ದರ್ಬಾರಿನಲ್ಲಿ ಠುಮರಿ ಗಾಯನ ಪದ್ಧತಿಯು ಜನ್ಮತಾಳಿ ಪ್ರಚಾರ ಹಾಗು ಪ್ರಸಿದ್ಧಿಯನ್ನು ಪಡೆಯಿತು. ಆದುದರಿಂದಲೇ ಲಖನೌ ನಗರವನ್ನು ಠುಮರಿಯ ಜನ್ಮಸ್ಥಳ ಎಂದು ಕರೆಯುತ್ತಾರೆ. ೧೭ನೇ ಶತಮಾನದ 'ರಾಗದರ್ಪಣ' ಗ್ರಂಥದಲ್ಲಿ ಠುಮರಿ ಗಾಯನವು ಆ ಕಾಲದಲ್ಲಿ ಇತ್ತು ಎಂಬ ಉಲ್ಲೇಖವಿದೆ.

'ಠುಮರಿ' ಎಂಬ ಪದವು ಮೂಲತಃ ಹಿಂದಿ ಭಾಷೆಯ ಪದವಾಗಿದ್ದು, ಈ ಪದದ ಉತ್ಪತ್ತಿಯು ಸುಂದರ ಸ್ತ್ರೀಯ ವಿಶಿಷ್ಟ ನಡಿಗೆಯ ಸೂಚಕವಾಗಿದೆ ಎನ್ನಲಾಗಿದೆ. ಕೆಲವು ಗ್ರಂಥಗಳಲ್ಲಿ ಠುಮರಿ ಪದದ ಅರ್ಥವನ್ನು ಠುಮ ಮತ್ತು ರೀ ಎಂದು ಬೇರ್ಪಡಿಸಿ, ಠುಮ್ ಎಂದರೆ ಠುಮಕ ಚಾಲ (ನಡಿಗೆಯ ಭಂಗಿ) ಎಂಬುದಾಗಿ ಹಾಗು ರೀ ಎಂದರೆ ನಾಯಕಿಯು ತನ್ನ ಅಂತರಂಗದ ಭಾವನೆಗಳನ್ನು ರೀ, ಅರೀ, ಏರೀ ಮುಂತಾದ ಆಡು ಭಾಷೆಗಳನ್ನು ಉಪಯೋಗಿಸಿ ಹೇಳುವುದು ಎಂದು ವಿವರಿಸಲಾಗಿದೆ.

ಠುಮರಿ ಗಾಯನವನ್ನು ದೇಸ, ಕಾಫಿ, ಖಮಾಜ, ಪೀಲೂ, ಪಹಾಡಿ, ಸಿಂಧೂರ, ಮಾಂಡ, ಝಿಂಜೋಟಿ, ತಿಲಂಗ್ ಮತ್ತು ಭೈರವಿಗಳಂತಹಾ ಭಾವಪ್ರಧಾನವಾದ ರಾಗಗಳಲ್ಲಿ ಹಾಡಲಾಗುತ್ತದೆ. ಹಾಗೆಯೇ ದೀಪಚಂದಿ, ಆದಾ ಮತ್ತು ಪಂಜಾಬಿ ತಾಳಗಳಲ್ಲಿ ವಿಲಂಬಿತ ಲಯದಲ್ಲಿ ಗಾಯನವು ಪ್ರಾರಂಭವಾಗಿ ಕೆಹರವಾ ಮತ್ತು ದಾದರಾ ತಾಳದಲ್ಲಿ ಲಗ್ಗಿ(ಧೃತ್) ಲಯದಲ್ಲಿ ಮುಕ್ತಾಯವಾಗುತ್ತದೆ.

ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತದ ಖಯಾಲ ಗಾಯನ ಪದ್ಧತಿಯಲ್ಲಿರುವಂತಹಾ ಘರಾಣಾ ಪದ್ಧತಿಯು ಠುಮರಿ ಗಾಯನ ಪದ್ಧತಿಯಲ್ಲಿ ಕಂಡುಬರುವುದಿಲ್ಲ. ಆದರೆ ಅದಕ್ಕೆ ವ್ಯತಿರಿಕ್ತವಾಗಿ ಪೂರಬ ಅಂಗ ಮತ್ತು ಪಂಜಾಬ ಅಂಗ ಎಂಬ ಎರಡು ಪ್ರಕಾರಗಳಲ್ಲಿ ಠುಮರಿಯನ್ನು ಹಾಡಲಾಗುತ್ತದೆ. ಪೂರಬ ಅಂಗದ ಹಾಡುಗಾರಿಕೆಯು ಲಖನೌ ಹಾಗು ಸುತ್ತಮುತ್ತಲಿನ ಪ್ರದೇಶದಲ್ಲಿ ಬೆಳೆದುಬಂದ ಕಾರಣ ಇದಕ್ಕೆ ಲಖನೌವಿ ಶೈಲಿಯ ಠುಮರಿ ಎಂದು ಹಾಗೆಯೇ ಪಂಜಾಬ ಅಂಗವು ಬನಾರಸ ಹಾಗು ಸುತ್ತಮುತ್ತಲಿನ ಪ್ರದೇಶದಲ್ಲಿ ಬೆಳೆದುಬಂದ ಕಾರಣ ಇದಕ್ಕೆ ಬನಾರಸೀ ಶೈಲಿಯ ಠುಮರಿ ಎಂದು ಕರೆಯಲಾಗುತ್ತದೆ. ಠುಮರಿ ಗಾಯನ ಪ್ರಪಂಚದ ಮೇರು ಗಾಯಕಿಯಾದ ಬೇಗಂ ಅಕ್ತರ್ ಅವರು ಈ ಎರಡೂ ಅಂಗಗಳ ಮಿಶ್ರಣ ಮಾಡಿ ಆಕರ್ಷಕವಾಗಿ ಹಾಡುತ್ತಿದ್ದರು.

**ಪಂಜಾಬ(ಬನಾರಸ) ಅಂಗ**

ಈ ಅಂಗದ ಗಾಯನ ಶೈಲಿಯಲ್ಲಿ ಬನಾರಸ ಪ್ರದೇಶದ ಲೋಕ ಗೀತೆಗಳ ಪ್ರಭಾವವಿದೆ. ಹಾಗೆಯೇ ಚೈತಿ, ಕಜರಿ ಗೀತೆಗಳ ಪ್ರಭಾವವು ಇಲ್ಲಿದೆ. ಖಟ್ಕಾ ಮುರ್ಕಿಗಳಿಗೆ ಇಲ್ಲಿ ಹೆಚ್ಚು ಮಹತ್ವ ನೀಡಲಾಗುತ್ತದೆ. ಉಸ್ತಾದ್ ಬಡೇ ಗುಲಾಮ್ ಅಲಿಖಾನ್‌ರವರು ಈ ಅಂಗದ ಪ್ರಸಿದ್ಧ ಗಾಯಕರು.

**ಪೂರಬ(ಲಖನೌ) ಅಂಗ**

ಈ ಘರಾಣೆಯ ಗಾಯನ ಶೈಲಿಯಲ್ಲಿ ನಯವಾದ ಗಮಕಯುಕ್ತ ವಿಸ್ತಾರವನ್ನು ಕಾಣಬಹುದು. ಇದರಲ್ಲಿ ಭಾವಪ್ರಾಧಾನ್ಯತೆ ಹೆಚ್ಚಾಗಿರುತ್ತದೆ. ಹಾಗೆಯೇ ತಾನ್, ಖಟ್ಕಾ ಮುರ್ಕಿಗಳ ಬಳಕೆ ಕಡಿಮೆ ಇದ್ದು ಸಾಹಿತ್ಯದ ಪದಗಳಿಗೆ ಹೆಚ್ಚಿನ ಮಹತ್ವವಿರುತ್ತದೆ. ಈ ಅಂಗದ ಪ್ರಸಿದ್ಧ ಗಾಯಕರು ಶ್ರೀಮತಿ ಸಿದ್ದೇಶ್ವರಿ ದೇವಿ, ಶ್ರೀಮತಿ ರಸೂಲಾನ್‌ಬಾಯಿ, ಶ್ರೀಮತಿ ಗಿರಿಜಾದೇವಿ ಹಾಗೂ ಪಂ. ಮಹದೇವ ಮಿಶ್ರರವರು.

## ೨. ವಾದನ ಘರಾಣೆಗಳು

ಭಾರತೀಯ ಸಂಗೀತ ಶಾಸ್ತ್ರದ ಪ್ರಕಾರ ವಾದನ ವಿಭಾಗದ ವಾದ್ಯಗಳನ್ನು ತಂತುವಾದ್ಯ (ತಂತಿಯಿಂದ ಸ್ವರಗಳನ್ನು ನುಡಿಸುವ ವಾದ್ಯ), ಸುಷಿರವಾದ್ಯ(ಗಾಳಿಯಿಂದ ಸ್ವರಗಳನ್ನು ನುಡಿಸುವ ವಾದ್ಯ), ಅವನದ್ಧವಾದ್ಯ(ಚರ್ಮದ ಮೇಲೆ ಸ್ವರಗಳನ್ನು ನುಡಿಸುವ ವಾದ್ಯ) ಮತ್ತು ಘನವಾದ್ಯ (ಲೋಹದ ಧಾತುವಿನ ಘರ್ಷಣೆಯಿಂದ ಸ್ವರಗಳನ್ನು ನುಡಿಸುವ ವಾದ್ಯ)ಗಳೆಂಬ ನಾಲ್ಕು ವಿಧಗಳನ್ನು ಮಾಡಲಾಗಿದೆ. ಗಾಯನದಂತೆಯೇ ವಾದನ ವಿಭಾಗದಲ್ಲೂ ಘರಾಣೆಗಳಿದ್ದು ಕಾಲಕಾಲಕ್ಕೆ ಇವೂ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಕ್ಷೇತ್ರದಲ್ಲಿ ತನ್ನ ಇರುವಿಕೆಯನ್ನು ಸಾಬೀತುಪಡಿಸುತ್ತಾ ಬಂದಿದೆ.

ವಾದನ ಘರಾಣೆಗಳಲ್ಲಿ ಎರಡು ವಿಧಗಳಿವೆ. ಅವುಗಳೆಂದರೆ–

ತಬಲಾ ಘರಾಣೆಗಳು

ಸಿತಾರ ಘರಾಣೆಗಳು.

### ತಬಲಾ ಘರಾಣೆಗಳು

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಗಾಯನಕ್ಕೆ ಸಾಥಿ ವಾದ್ಯವಾಗಿ ಬಳಸುವಂತಹಾ ಪ್ರಮುಖವಾದ ವಾದ್ಯ 'ತಬಲಾ' ವಾದ್ಯವಾಗಿದೆ. ಈ ತಬಲಾ ವಾದ್ಯದ ಹುಟ್ಟು ಹಾಗು ಇದರ ಇತಿಹಾಸದ ಬಗೆಗೆ ನಮ್ಮ ಸಂಗೀತಜ್ಞರಲ್ಲಿ ಭಿನ್ನಾಭಿಪ್ರಾಯಗಳಿವೆ. ಈ ವಾದ್ಯವು ಯಾರಿಂದ, ಯಾವಾಗ, ಹೇಗೆ ಆವಿಷ್ಕಾರವಾಯಿತು ಎಂಬುದು ಸಮರ್ಪಕ ಉತ್ತರ ಸಿಗದ ಪ್ರಶ್ನೆಯಾಗಿಯೇ ಉಳಿದಿದೆ. ತಬಲಾ ವಾದ್ಯವು ಚರ್ಮ ವಾದ್ಯವಾಗಿರುವುದರಿಂದ ಇದನ್ನು ಅವನದ್ಧ ವಾದ್ಯಗಳ ಗುಂಪಿಗೆ ಸೇರಿಸಲಾಗಿದೆ.

ತಬಲಾ ವಾದ್ಯದ ಇತಿಹಾಸವನ್ನು ಗಮನಿಸಿದಾಗ ಈ ವಾದ್ಯದ ಆವಿಷ್ಕಾರದ ಹಲವು ದಂತಕಥೆಗಳು ಸಿಗುತ್ತವೆ. ಸಾಕಷ್ಟು ಭಿನ್ನಾಭಿಪ್ರಾಯಗಳ ಮಧ್ಯೆಯೇ ಪಖವಾಜ ಎಂಬ ವಾದ್ಯವನ್ನು ಇಬ್ಭಾಗಿಸಿದಾಗ ತಬಲಾ ವಾದ್ಯ ಸೃಷ್ಟಿಯಾಯಿತು ಎಂಬ ಊಹೆ ಇಂದಿಗೂ ಇದೆ. ದಿಲ್ಲಿಯ ಸುಲ್ತಾನ ಅಲ್ಲಾವುದ್ದೀನ ಖಿಲ್‌ಜಿಯ ಆಸ್ಥಾನದ ತುರ್ಕಿ ಕಲಾವಿದನಾದ ಅಮೀರ ಖುಸ್ರೊ ಎಂಬುವವನು ತಬಲಾ ವಾದ್ಯದ ಜನಕ ಎಂಬುದು ಹಲವು ಸಂಗೀತಜ್ಞರ ಅಭಿಪ್ರಾಯ. ಅಮೀರ ಖುಸ್ರೊ ಇರಾನಿ, ತುರ್ಕಿ ಸಂಸ್ಕೃತಿಗಳನ್ನು ಮಿಶ್ರಣಮಾಡಿ ತಬಲಾ ವಾದ್ಯವನ್ನು ಪ್ರಚಾರಮಾಡಿದನು ಎನ್ನಲಾಗಿದೆ. 'ತಬ್ಲಾ' ಎಂಬ ಪಾರಸಿ ಶಬ್ಧದಿಂದ ತಬಲಾ ಎಂಬ ಹೆಸರು ಬಂದಿದೆ ಎನ್ನಲಾಗಿದೆ.

ಕೆಲವರು ಮೃದಂಗ ವಾದ್ಯವು ತಬಲ ವಾದ್ಯದ ಮೂಲವಾದ್ಯವೆಂದು ಹೇಳುವರು. ಹುಸೇನ್ ಡೊಲಕ್ ಎಂಬುವವನು ಮೃದಂಗ ವಾದ್ಯವನ್ನು ಖಡ್ಗದಿಂದ ಇಬ್ಭಾಗಿಸಿದಾಗ ಆ ಎರಡು ವಾದ್ಯಗಳ ಭಾಗಗಳನ್ನು ನುಡಿಸಿದಾಗ ತಬ್ ಬೀ ಬೋಲಾ(ಆಗಲೂ ನುಡಿಯಿತು) ಎನ್ನುವುದೇ 'ತಬಲಾ'

ಎಂದು ಆವಿಷ್ಕಾರವಾಯಿತು. ಇದಲ್ಲದೇ ೧೫ ನೇ ಶತಮಾನದ ಹುಮಾಯೂನನ ಕಾಲದಲ್ಲಿ ತಬಲೆ-ಅದಲ್ ಎಂಬ ಒಂದು ವಾದ್ಯವಿತ್ತು ಇದರಿಂದಲೇ 'ತಬಲಾ' ಎಂಬ ಶಬ್ದವು ಬಂದಿರ ಬಹುದು ಎಂಬ ಊಹೆಯೂ ಇದೆ. ಹಾಗೆಯೆ ೧೫ನೇ ಶತಮಾನಕ್ಕಿಂತ ಪೂರ್ವದಲ್ಲಿ ತಬಲೆ-ಅದಲ್ ವಾದ್ಯವು 'ನಗಾರಿ' ವಾದ್ಯದ ರೂಪದಲ್ಲಿತ್ತು ಎಂಬುದು ವಾದ್ಯಗಳ ಇತಿಹಾಸದಿಂದ ತಿಳಿದುಬರುತ್ತದೆ.

ತಬಲಾ ವಾದನದ ಕಲಾವಿದರು ಸ್ವತಂತ್ರಶೈಲಿಯಲ್ಲಿ ತಮ್ಮ ತಬಲಾ ಬೋಲ್‌ಗಳನ್ನು ಸೃಷ್ಟಿಸಿದರು. ಈ ಬೋಲ್‌ಗಳನ್ನು ನುಡಿಸುವ ಆಧಾರದ ಮೇಲೆಯೇ ತಬಲ ಘರಾಣೆಗಳು ಆವಿಷ್ಕಾರವಾದವು ತಬಲಾ ಬೋಲ್‌ಗಳನ್ನು ನುಡಿಸುವ ಶೈಲಿಗೆ ಅಥವಾ ಪದ್ಧತಿಗೆ 'ಬಾಜ್' ಎನ್ನುವರು. ಬಾಜ್ ಗಳಲ್ಲಿ ಎರಡು ಪ್ರಕಾರಗಳು ೧. ಬಂದ್ ಬಾಜ್ ೨. ಖುಲ್ಲಾ ಬಾಜ್.

ತಬಲಾ ವಾದನದಲ್ಲಿ ಮುಖ್ಯವಾಗಿ ಆರು ಘರಾಣೆಗಳು ಪ್ರಚಾರದಲ್ಲಿದೆ ಅವುಗಳೆಂದರೆ-

೧. ಡೆಲ್ಲಿ ಘರಾಣೆ

೨. ಅಜರಾಡಾ ಘರಾಣೆ

೩. ಲಖನೌ ಅಥವಾ ಪೂರಬ್ ಘರಾಣೆ

೪. ಬನಾರಸ ಘರಾಣೆ

೫. ಪಂಜಾಬ ಘರಾಣೆ

೬. ಫರೂಕಾಬಾದ ಘರಾಣೆ.

**೧. ಡೆಲ್ಲಿ ಘರಾಣೆ**

ತಬಲಾ ಘರಾಣೆಗಳಲ್ಲಿ ಇದು ಪುರಾತನ ಘರಾಣೆ ಎಂದೇ ಖ್ಯಾತಿ ಪಡೆದಿದೆ. ಉಸ್ತಾದ್ ಸುಧಾರಖಾನ್ ಈ ಘರಾಣೆಯ ಸಂಸ್ಥಾಪಕ. ಈ ಘರಾಣೆಯ ಶೈಲಿಯಲ್ಲಿ ಹೆಚ್ಚಾಗಿ ತಿಟ, ತಿರಕಿಟ, ಧಿನಗಿನ, ಧಿಂಗನಗ, ಫಿಡನಗ, ಬೋಲ್‌ಗಳನ್ನು ಬಳಸಲಾಗುತ್ತದೆ. ತಿಟ, ತಿರಕಿಟ ಈ ಬೋಲ್‌ಗಳನ್ನು ತೋರುಬೆರಳು ಮತ್ತು ಮಧ್ಯ ಬೆರಳುಗಳಿಂದ ಬಾರಿಸಲಾಗುತ್ತದೆ. ತಬಲಾದಲ್ಲಿ ಚಾಟಿಯ ಹಾಗೂ ಶ್ಯಾಹಿ ಮೇಲಿನ ಕೆಲಸವೇ ಬಹಳವಿರುತ್ತವೆ. ಈ ಘರಾಣೆಯಲ್ಲಿ ತಬಲಾದ ಕಿನಾರೆ ಮೇಲೆ ಬೋಲುಗಳನ್ನು ವಿಶೇಷವಾಗಿ ನುಡಿಸುವುದರಿಂದ "ಕಿನಾರೆ ಬಾಜ" ಎಂದು ಹಾಗು ಸೂಕ್ಷ್ಮವಾಗಿ ನುಡಿಸುವುದರಿಂದ "ಮುಲಾಯಮ್ ಬಾಜ್" ಎಂದೂ ಕರೆಯುತ್ತಾರೆ. ಈ ಘರಾಣೆಯಲ್ಲಿ ಚತುಷ್ಟ ಜಾತಿಯ ಬೋಲುಗಳು ಹೆಚ್ಚಾಗಿ ಉಪಯೋಗಿಸುತ್ತಾ, ಪೇಶಕಾರ, ಕಾಯ್ದಾ, ರೇಲಾ, ಮುಕಡಾ, ತುಕಡಾಗಳ ಪ್ರಯೋಗ ಮಾಡುತ್ತಾರೆ. ಹಾಗೆಯೇ ಸಾಥ ಸಂಗತಕ್ಕಿಂತ ಸ್ವತಂತ್ರ ವಾದನಕ್ಕೆ ಇಲ್ಲಿ ಹೆಚ್ಚು ಮಹತ್ವ ನೀಡುತ್ತಾರೆ.

ಡಗ್ಗಾ ವಾದನದ ಸೂಕ್ಷ್ಮತೆಯು ಈ ಘರಾಣೆಯ ಪ್ರಮುಖವಾದ ಲಕ್ಷಣವಾಗಿದೆ. ಧಿನಗಿನ, ಧಾತಿಟ, ತಿರಕಿಟ, ಧಾತಿ, ಕಿಟತಕ, ಗಿನತಿಟ, ಧಾತಿ, ಧಾಗೆ ಮುಂತಾದ ಬೋಲುಗಳ ಪ್ರಯೋಗ ಈ ಘರಾಣೆಯಲ್ಲಿ ವಿಶೇಷವಾಗಿದೆ.

**ಡೆಲ್ಲಿ ಘರಾಣೆಯ ಪ್ರಮುಖ ವಾದಕರು**

ಉಸ್ತಾದ್ ಮುನೀರ ಖಾನ್

ಉಸ್ತಾದ್ ಶಮ್‌ಸುದ್ದೀನ್ ಖಾನ್

ಉಸ್ತಾದ್ ನಡ್ಡುಖಾನ್

ಬೋಲಿಭಕ್ಷ

ಬಲಿಭಕ್ಷ

ಉಸ್ತಾದ್ ಅಹಮ್ಮದ್ ಜಾನ್ ಥಿರಕುವಾರ

**೨. ಅಜ್ರರಾ(ಅಜರಡಾ) ಘರಾಣೆ**

ಉಸ್ತಾದ್ ಕಲ್ಲೂಖಾನ್ ಹಾಗೂ ಉಸ್ತಾದ್ ಮೀರಾಖಾನ್ ಈ ಘರಾಣೆಯ ಮೂಲ ಪುರುಷರು. ಇವರು ತಮ್ಮ ಪ್ರಾರಂಭಿಕ ತಬಲಾ ಶಿಕ್ಷಣವನ್ನು ಡೆಲ್ಲಿ ಘರಾಣೆಯವರಲ್ಲಿ ಕಲಿತು, ನಂತರ 'ಅಜರಡಾ' ಎಂಬ ಹಳ್ಳಿಯಲ್ಲಿ ವಾಸಿಸಿದರು. ಆದ್ದರಿಂದಲೇ ಈ ಘರಾಣೆಗೆ 'ಅಜರಡಾ'ಎಂಬ ಹೆಸರು ಬಂದಿತು. ಡೆಲ್ಲಿ ಘರಾಣೆಯ ಕೆಲವು ಅಂಶಗಳು ಹಾಗೂ ತನ್ನದೇ ಆದ ಕೆಲವು ಖಾಂದಾನಿ ಠೇಖಾಗಳಿಂದ ಈ ಘರಾಣೆ ಪ್ರಸಿದ್ಧಿ ಪಡೆದಿದೆ. ಈ ಘರಾಣೆಯಲ್ಲಿ ಪೇಶಕಾರ, ಕಾಯದಾ, ರೇಲಾ ಹಾಗೂ ಧತಕ್, ದಾ, ಫಿಡನಗ, ಧಿಂಗ, ದಿನಗಿನ, ಧೆನಕ ಅಕ್ಷರಗಳ ಉಪಯೋಗ ಮುಖ್ಯವಾಗಿದೆ.

ಈ ಘರಾಣೆಯ ಲಯಗಳಲ್ಲಿ "ಆಡಿಲಯ" ಬೋಲಗಳನ್ನು ವಿಶೇಷವಾಗಿ ನುಡಿಸುವುದರಿಂದ ಆಡಿಲಯದ ಕಾಯ್ದಾಗಳಿಗೆ ಅಜರಡಾ ಕಾಯ್ದಾ ಎಂದು ಕರೆದರು ಎನ್ನಲಾಗಿದೆ. ಉಸ್ತಾದ್ ಶಮ್ಮುಖಾನ್, ಉಸ್ತಾದ್ ಹಬೀಬುದ್ದೀನ್‌ಖಾನ್, ರಮ್‌ಜಾನ್‌ಖಾನ್ ಮುಂತಾದವರು ಈ ಘರಾಣೆಯ ಪ್ರಮುಖ ತಬಲಾ ವಾದಕರಾಗಿದ್ದಾರೆ.

**೩. ಲಖನೌ ಅಥವಾ ಪೂರಬ್ ಘರಾಣೆ**

ಈ ಘರಾಣವು ಉಸ್ತಾದ್ ಮೋದುಖಾನ್ ಹಾಗೂ ಉಸ್ತಾದ್ ಭೀಕೂಖಾನ್‌ರವರಿಂದ ಪ್ರಚಾರಕ್ಕೆ ಬಂದಿತು. ಪ್ರಸಿದ್ಧ ತಬಲಾ ವಾದಕರಾದ ಪಂಡಿತ ಬಸವರಾಜ ಬೆಂಡಿಗೇರಿಯವರು ಇದೇ ಘರಾಣೆಯವರು. ಪರನ್, ಚಕ್ರಧಾರ್, ಟುತಡೆ ಈ ಘರಾಣೆಯ ಲಕ್ಷಣಗಳು. ಧಾಗೆತಿಟ,

ಧಿರಧಿರ, ಫಿಡನಗ, ಕ್ಡದಾ ಮುಂತಾದ ಬೋಲುಗಳು ಈ ಘರಾಣೆಯಲ್ಲಿ ಹೆಚ್ಚಾಗಿ ಉಪಯೋಗಿಸಲಾಗುತ್ತದೆ. ಕತಕ್ ನೃತ್ಯಕ್ಕೆ ಈ ಘರಾಣೆಯ ಠೇಖಾಗಳನ್ನೇ ಬಳಸಲಾಗುತ್ತದೆ.

**೪. ಬನಾರಸ್ ಘರಾಣೆ**

ಪಂ. ರಾಮಸಹಾಯರವರು ಬನಾರಸ ಘರಾಣೆಯ ಮೂಲಪುರುಷರು. ಇವರು ಲಖನೋ ಘರಾಣದ ಉಸ್ತಾದ್ ಮೇರುಖಾನ್‌ರವರ ಶಿಷ್ಯರು. ಪರನ್, ಲಗ್ಗಿ, ಲಡಿ, ಛಂದ ಈ ಘರಾಣೆಯ ವಿಶೇಷತೆಗಳು. ಶುದ್ಧ ಹಾಗೂ ಗಮಕ ಮಿಶ್ರಿತ ಠೇಖಾಗಳಿಗೆ ಈ ಘರಾಣೆ ಪ್ರಸಿದ್ಧಿ ಪಡೆದಿದೆ. ಈ ಘರಾಣೆಯಲ್ಲಿ ಮೃದಂಗ ಬಾಜಿನ ಜೊತೆ ನೃತ್ಯದ ಬೋಲುಗಳ ಸೆಳಕು ಎದ್ದು ಕಾಣುತ್ತದೆ. ಇಲ್ಲಿ ದೆಟೆ, ಕೃಧಾನ್, ತತ್, ಘಡಾನ್, ಧಿಡನ್, ಗದುಗಿನ, ದಿತ್ತಾ ಬೋಲಗಳು ವಿಶೇಷವಾಗಿ ಬಳಕೆಯಾಗುತ್ತವೆ.

**೫. ಪಂಜಾಬ್ ಘರಾಣೆ**

ಪಖವಾಜ ವಾದ್ಯದ ಠೇಖಾಗಳ ಅಂಶಗಳನ್ನು ಇಲ್ಲಿ ಕಾಣಬಹುದಾಗಿದೆ. ವಿಶ್ವ ಪ್ರಸಿದ್ಧ ಉಸ್ತಾದ್ ಅಲ್ಲಾ ರಖ ಹಾಗೂ ಉಸ್ತಾದ್ ಜಾಕೀರ್ ಹುಸ್ಸೇನರು ಈ ಘರಾಣೆಯ ರುವಾರಿಗಳು.

**೬. ಫರೂಖಾ ಬಾದ್ ಘರಾಣೆ**

ತಬಲಾ ಕ್ಷೇತ್ರದಲ್ಲಿ ಹೊಸದಾದ ಘರಾಣೆ ಇದಾಗಿದ್ದು, ಮೇಲೆ ಕಾಣಿಸಿದ ಎಲ್ಲಾ ಘರಾಣೆಗಳ ಅಂಶಗಳನ್ನು ಈ ಘರಾಣೆಯಲ್ಲಿ ಕಾಣಬಹುದಾಗಿದೆ.

**ಸಿತಾರ್ ಘರಾಣೆಗಳು**

ತಬಲಾ ಘರಾಣೆಗಳಂತೆ ಸಿತಾರ ಘರಾಣೆಗಳನ್ನು 'ಬಾಜ್'ಗಳೆಂದು ಕರೆಯುವರು. "ಸಿತಾರ" ವಾದ್ಯವು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ತಂತಿ ವಾದ್ಯಗಳಲ್ಲಿ ಪ್ರಮುಖವಾದ ವಾದ್ಯವಾಗಿದೆ. ಸಂಗೀತಜ್ಞರು ಈ ವಾದ್ಯವನ್ನು 'ತತ್‌ವಾದ್ಯ' ಪ್ರಕಾರಕ್ಕೆ ಸೇರಿಸಿದ್ದಾರೆ. ಸಿತಾರ ವಾದ್ಯವನ್ನು ವಿದ್ವಾಂಸರು "ಸಭೀ ವಾದ್ಯೋಂಕಾ ಸರ್ದಾರ"(ಎಲ್ಲಾ ವಾದ್ಯಗಳ ಒಡೆಯ) ಎಂದೂ ಕರೆದಿದ್ದಾರೆ.

ಸಿತಾರ ವಾದನದ ಆವಿಷ್ಕಾರದ ಬಗೆಗೆ ನಮ್ಮ ಸಂಗೀತಜ್ಞರಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವರು ಅಮೀರ ಖುಸ್ರೊ ಮೂರು ತಂತಿಗಳನ್ನು ಕಟ್ಟಿಗೆಯ ಮೇಲೆ ಜೋಡಿಸಿ 'ಸೆಹ್‌ತಾರ್'(ಸೆಹ್ ಎಂದರೆ ಮೂರು, ತಾರ್ ಎಂದರೆ ತಂತಿ) ವಾದ್ಯವನು ಸೃಷ್ಟಿಸಿದ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಕಲಾನಂತರ ಸೆಹ್‌ತಾರ್ ಶಬ್ದವು ಅಪಭ್ರಂಶವಾಗಿ ಸಿತಾರವಂದು ಕರೆಯಲಾಯಿತು ಎಂದಿದ್ದಾರೆ. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಕೆಲವು ಸಂಗೀತಜ್ಞರು ತ್ರಿತಂತಿ(ಮೂರು ತಂತಿಗಳ ವಾದ್ಯ) ಹಾಗೆಯೇ ಸಪ್ತತಂತಿ(ಏಳು ತಂತಿಗಳ ವಾದ್ಯ)ಗಳು ಅಮೀರ ಖುಸ್ರೊಗಿಂತ ಮೊದಲೇ ಸೆಹ್‌ತಾರ ಎಂಬ ವಾದ್ಯವು ಅಸ್ತಿತ್ವದಲ್ಲಿ ಇತ್ತು ಎಂದಿದ್ದಾರೆ. ಈ ಮೇಲಿನ ಹೇಳಿಕೆಗಳಿಗೆ ಸರಿಯಾದ ಪುರಾವೆಗಳು ಇಲ್ಲವೆಂಬುದು ಕಂಡುಬಂದರೂ ಅಮೀರ ಖುಸ್ರೊ ಸಿತಾರ ವಾದ್ಯವನ್ನು ಜನಪ್ರಿಯಗೊಳಿಸಿದನು ಎಂದು ಒಮ್ಮತವಾಗಿ ಎಲ್ಲ ಸಂಗೀತಜ್ಞರು ಅಭಿಪ್ರಾಯ ಪಟ್ಟಿರುತ್ತಾರೆ.

ಸಿತಾರ ವಾದನದಲ್ಲಿ ಮುಖ್ಯವಾಗಿ ಹನ್ನೆರಡು ಘರಾಣೆಗಳು ಪ್ರಚಾರದಲ್ಲಿದೆ ಅವುಗಳೆಂದರೆ–

**೧. ಇಮಾದ್ ಖಾನಿ(ಇತವಾ, ಇಟಾವಾ) ಘರಾಣೆ**

ಇಮಾದ್ ಖಾನಿ ಘರಾಣೆಯನ್ನು ಸ್ಥಾಪಿಸಿ, ಸಿತಾರ ವಾದನದ ಶೈಲಿಯನ್ನು ಪರಿಷ್ಕರಿಸಿ, ಭಾರತೀಯ ವಾದ್ಯ ಸಂಗೀತದಲ್ಲಿ ಈ ವಾದ್ಯಕ್ಕೆ ಉನ್ನತ ಹಾಗು ಉಚ್ಚ ಸ್ಥಾನ ತಂದಕೊಟ್ಟವರು ಉಸ್ತಾದ್ ಇಮಾದ್ ಖಾನ್‌ರವರು.

ಇಮಾದ್ ಖಾನ್‌ರವರ ಮಗ ಇನಾಯತ್ ಖಾನ್ ಸಿತಾರ ವಾದನದ ಗತ್ ಹಾಗು ಝಾಲಾದಲ್ಲಿ ವಿಶೇಷ ಪರಿಣಿತಿ ಪಡೆದು ಇಮಾದ್ ಖಾನಿ ಘರಾಣೆಯನ್ನು ಪ್ರಸಿದ್ಧಿಗೊಳಿಸಿದರು. ಇವರೊಂದಿಗೆ ಉಸ್ತಾದ್ ವಿಲಾಯತ್ ಖಾನ್‌ರವರು ಈ ಘರಾಣೆಯ ಶ್ರೇಷ್ಟ ಕಲಾವಿದರಾಗಿ ಈ ಘರಾಣೆಯನ್ನು ಬೆಳೆಸಿದರು.

**ಇಮಾದ್ ಖಾನಿ(ಇತವಾ, ಇಟಾವಾ) ಘರಾಣೆಯ ಪ್ರಮುಖ ವಾದಕರು**

ಅಮಿಯಾಕಾಂತ ಭಟ್ಟಾಚಾರ್ಯ

ರಯೀಸ್ ಖಾನ್

ಸುಜಾತ ಖಾನ್

ಅರವಿಂದ ಫಾರೀಖ

ಕಾಶಿನಾಥ ಮುಖರ್ಜಿ

ಕಲ್ಯಾಣಿರಾಯ

೨. ಮೈಹರ್ ಘರಾಣೆ

ಈ ಘರಾಣೆಯ ಸ್ಥಾಪಕರು ಉಸ್ತಾದ್ ಮೈಹಾರ್ ಖಾನ್‌ರವರು ಎಂಬುದು ಕೆಲವು ಸಂಗೀತಜ್ಞರ ಅಭಿಪ್ರಾಯ. ಆದರೆ ಮೈಹರ ಸಂಸ್ಥಾನದಲ್ಲಿದ್ದ ಶ್ರೇಷ್ಠ ಸಿತಾರ ಕಲಾವಿದರಾದ ಉಸ್ತಾದ್ ಅಲ್ಲಾವುದ್ದೀನ್ ಖಾನ್‌ರವರು ನುಡಿಸುವ ಸಿತಾರ ವಾದನ ಪದ್ಧತಿಯೇ 'ಮೈಹರ್ ಘರಾಣೆ' ಎಂದು ಹೆಸರು ಪಡೆಯಿತು ಎಂಬುದು ಕೆಲವು ಸಂಗೀತಜ್ಞರ ಅಭಿಪ್ರಾಯವಾಗಿದೆ. ಉಸ್ತಾದ್ ಅಲ್ಲಾವುದ್ದೀನ್ ಖಾನ್‌ರವರಲ್ಲಿ ಅನೇಕರು ಸಿತಾರ ವಾದನವನ್ನು ಕಲಿತು ದೇಶ ವಿದೇಶಗಳಲ್ಲಿ ಪ್ರಸಿದ್ಧರಾಗಿದ್ದಾರೆ.

ಮೈಹರ್ ಘರಾಣೆಯ ಪ್ರಮುಖ ವಾದಕರು

ಶ್ರೀಮತಿ ಅನ್ನಪೂರ್ಣದೇವಿ

ಪಂ. ರವಿಶಂಕರ(ಸಿತಾರ ಮಾಂತ್ರಿಕ)

ಉಸ್ತಾದ್ ಅಲಿ ಅಕ್ಬರ್ ಖಾನ್

ಅನುಷ್ಕಾ ರವಿಶಂಕರ

ಪಂ. ನಿಖಿಲ್ ಬ್ಯಾನರ್ಜಿ

ದಾಮೋದರ ಲಾಲ ಕಾಬರಾ

ಶರನ್ ರಾನಿ

ಕಾರ್ತಿಕ್ ಕುಮಾರ್

ದೀಪಕ್ ಚೌಧರಿ

ಇಂದ್ರನೀಲ ಭಟ್ಟಾಚಾರ್ಯ

ಜಯಾಬಸು

ಉಮಾಶಂಕರ ಮಿಶ್ರ

೩. ಸೇನಿಯಾ ಘರಾಣೆ

ಪ್ರಸಿದ್ಧ ಗಾಯಕ ತಾನಸೇನನ ವಂಶಸ್ಥರು ಈ ಘರಾಣೆಯ ಸ್ಥಾಪಕರು ಎಂದು ಊಹಿಸಲಾಗಿದೆ. ಇದು ಸಿತಾರ ಘರಾಣೆಗಳಲ್ಲಿ ಮೊದಲನೇ ಘರಾಣೆಯಾಗಿದ್ದು, ಸಿತಾರ ಘರಾಣೆಗಳಿಗೆ ಭದ್ರಬುನಾದಿ ಹಾಕಿದ ಮಹತ್ವದ ಘರಾಣೆ ಇದಾಗಿದೆ. ಸೇನಿಯಾ ಘರಾಣೆಯಲ್ಲಿ ಪೂರ್ವ ಸೇನಿಯಾ ಮತ್ತು ಪಶ್ಚಿಮ ಸೇನಿಯಾ ಎಂಬ ಎರಡು ಕವಲುಗಳಿವೆ.

ಭಾರತ ದೇಶದ ಪೂರ್ವ ಭಾಗದ ಲಖನೌ ಮತ್ತು ಬನಾರಸ ಪ್ರದೇಶದಲ್ಲಿ ಪ್ರಚಾರ ಪಡೆದ ಸಿತಾರ ಘರಾಣೆಗೆ ಪೂರ್ವ ಸೇನಿಯಾ ಘರಾಣೆ ಎಂದು ಕರೆಯಲಾಗಿದೆ.

ಭಾರತ ದೇಶದ ಪಶ್ಚಿಮ ಭಾಗದಲ್ಲಿರುವ ಜೈಪುರ ಹಾಗು ಸುತ್ತಮುತ್ತಲಿನ ಪ್ರದೇಶದಲ್ಲಿ ಪ್ರಚಾರ ಪಡೆದ ಸಿತಾರ ಘರಾಣೆಗೆ ಪಶ್ಚಿಮ ಸೇನಿಯಾ ಘರಾಣೆ ಎಂದು ಕರೆಯಲಾಗಿದೆ. ಪ್ರಸಿದ್ಧ ಗಾಯಕ ತಾನಸೇನನ ವಂಶಸ್ಥರಾದ ಸೂತರಸೇನ, ರಹೀಮಸೇನ, ಅಮೃತಸೇನ ಮತ್ತು ನಿಹಾಲಸೇನರು ಈ ಪದ್ಧತಿಯ ಸೇನಿಯಾ ಘರಾಣೆಯನ್ನು ಪ್ರಚಾರ ಪಡಿಸಿದರು. ರಹೀಮಸೇನ ಮತ್ತು ಅಮೃತಸೇನರವರ 'ಮಸೀತ್ ಖಾನಿ ಗತ್' ಶೈಲಿ ಇಂದು ಸಿತಾರ ವಾದನದಲ್ಲಿ ಅತ್ಯಂತ ಜನಪ್ರಿಯತೆ ಪಡೆದಿದೆ.

**ಸೇನಿಯಾ ಘರಾಣೆಯ ಪ್ರಮುಖ ವಾದಕರು**

ಬಾಸತ್ ಖಾನ್

ಪ್ಯಾರಖಾನ್

ಜಾಫರ್ ಖಾನ್

### ೪. ಇಂದೋರ್ ಘರಾಣೆ(ಬೀನಕರ ಘರಾಣೆ)

ಪ್ರಸಿದ್ಧ ಬೀನ ವಾದಕರಾದ ಹಸನ ಖಾನ್‌ರವರ ಪುತ್ರರಾದ ಬಾಬುಖಾನ್‌ರವರು ಬೀನ ವಾದನದ ಜೊತೆಜೊತೆಗೆ ಸಿತಾರ, ಸರೋದ ಮತ್ತು ರಬಾಬ್ ವಾದನ ನುಡಿಸುತ್ತಿದ್ದರು. ಬಾಬುಖಾನ್‌ರವರು ಇಂದೋರದಲ್ಲಿ ನೆಲೆಸಿದ್ದ ಕಾರಣ ಇವರು ಹಾಗು ಇವರ ಅಪಾರ ಶಿಷ್ಯ ವೃಂದದವರು ನುಡಿಸುವಂತಹಾ ಸಿತಾರ ಪದ್ಧತಿಗೆ ಇಂದೋರ ಘರಾಣೆ ಎಂದೂ, ಹಾಗು ಇವರ ಸಿತಾರ ವಾದನ ಪದ್ಧತಿಯಲ್ಲಿ ಬೀನ ವಾದನ ಶೈಲಿ ಹೆಚ್ಚಾಗಿರುವ ಕಾರಣ ಬೀನಕರ ಘರಾಣೆ ಎಂದೂ ಕರೆಯಲಾಗಿದೆ.

**ಇಂದೋರ್ ಘರಾಣೆಯ ಪ್ರಮುಖ ವಾದಕರು**

ಮುಂಬೈನ ಉಸ್ತಾದ್ ಅಬ್ದುಲ್

ಹಲೀಮ್ ಖಾನ್‌ರವರು

### ೫. ಜೈಪುರ ಘರಾಣೆ

ಗಾಯನ ಘರಾಣೆಯಂತೆ ಸಿತಾರ ವಾದನ ಘರಾಣೆಯಲ್ಲೂ ಜೈಪುರ ಘರಾಣೆಯು ಪ್ರಸಿದ್ಧಿಯನ್ನು ಪಡೆದಿದೆ. ಅಂದಿನ ಕಾಲದಲ್ಲಿ ಜೈಪುರ ಸಂಸ್ಥಾನವು ಗಾಯನ ಹಾಗು ವಾದನ ಕಲಾವಿದರಿಗೆ ಆಶ್ರಯ ನೀಡಿ ಅವರಿಗೆ ಪ್ರೋತ್ಸಾಹ ನೀಡಿರುವುದೇ ಇದಕ್ಕೆ ಕಾರಣವಾಗಿದೆ ಎಂದರೆ ತಪ್ಪಾಗಲಾರದು. ಸೇನಿಯಾ ಘರಾಣೆಯ ಅಂಗವಾದ ಪಶ್ಚಿಮ ಸೇನಿಯಾ ಘರಾಣೆ ಎಂದೂ ಘರಾಣೆಯನ್ನು

ಕರೆಯಲಾಗಿದೆ. ಈ ಘರಾಣೆಯ ಪ್ರಸಿದ್ಧ ಸಿತಾರ ವಾದಕರಾದ ಉಸ್ತಾದ್ ಬರ್ಕತುಲ್ಲಾ ಖಾನ್‌ರವರು ಮೈಸೂರು ಸಂಸ್ಥಾನದಲ್ಲಿ ಆಸ್ಥಾನ ಕಲಾವಿದರಾಗಿದ್ದರು. ಇದರಿಂದಾಗಿ ಇವರು ಕರ್ನಾಟಕದಲ್ಲಿ ಸಿತಾರ ವಾದ್ಯ ಬೆಳೆಯಲೂ ಕಾರಣರಾದರು.

**೬. ಅಮೀರ್ ಖುಸ್ರೋ ಘರಾಣೆ**

ಅಮೀರ್ ಖುಸ್ರೋನ ವಂಶಸ್ಥರು ಈ ಘರಾಣೆಯ ಸ್ಥಾಪಕರಾಗಿದ್ದು, ಉಸ್ತಾದ್ ಫಿರೋಜ ಖಾನ್ ಈ ಘರಾಣೆಯ ಪ್ರಸಿದ್ಧ ಸಿತಾರ್ ವಾದಕ. ಇವನ ಮಗ ಮಸೀತ್ ಖಾನ್ ಮಸೀತ್ ಖಾನಿಗತ್ ಅವಿಷ್ಕರಿಸಿ, ಪ್ರಚಾರ ಮಾಡಿದನು. ಇವನ ನಂತರ ಬಹದ್ದೂರ ಹುಸೇನ್ ಹಾಗು ಬೀಬಿಖಾನ್ ಈ ಘರಾಣೆಯನ್ನು ಮುಂದುವರಿಸಿದರು.

**೭. ಜಾಫರ್‌ಖಾನಿ ಬಾಜ ಘರಾಣೆ**

ಪ್ರಸಿದ್ಧ ಸಿತಾರ ವಾದಕರಾದ ಉಸ್ತಾದ ಅಬ್ದುಲ ಹಲೀಮ ಜಾಫರ್‌ಖಾನ್ ಈ ಘರಾಣೆಯ ಸಂಸ್ಥಾಪಕರು. ಖಟ್ಕಾ, ಮುರ್ಕಿ, ಮೀಂಡ, ಜಮಜಮಾ, ಸಪಾಟ ತಾನ್ ಇತ್ಯಾದಿಗಳು ಈ ಘರಾಣೆಯ ವಿಶೇಷತೆಗಳು.

**೮. ಬಿಲಾಸಖಾನ್ ಘರಾಣೆ**

ತಾನಸೇನರ ಪುತ್ರರಾದ ಬಿಲಾಸಖಾನ್ ಈ ಘರಾಣೆ ಮೂಲಪುರುಷರು. ಹಾಗೆಯೇ ತಾನಸೇನರ ವಂಶದವರಾದ ಉಸ್ತಾದ ಛಜ್ಜುಖಾನ್, ಜ್ಞಾನಖಾನ್, ಜೀವನ್‌ಖಾನ್, ಜಾಫರ್‌ಖಾನ್, ಪ್ಯಾರಖಾನ್, ಬಸತಖಾನ್‌ರವರು ಮತ್ತು ಶಿಷ್ಯರಾದ ಪನ್ನಾಲಾಲ್ ವಾಜಪೇಯಿ, ವೈದ್ಯ ಅರ್ಜುನದಾಸ, ರಾಮಸೇವಕ ಮಿಶ್ರ ಮತ್ತು ಪ್ಯಾರೆಖಾನ್ ಮುಂತಾದವರು ಪ್ರಮುಖರು.

**೯. ದರಭಾಂಗ ಘರಾಣೆ**

ಖ್ಯಾತ ಸಿತಾರ ವಾದಕರಾದ ಪಂ. ರಾಜಕುಮಾರ ಪಾಠಕ ಹಾಗು ಅವರ ವಂಶದವರು, ಶಿಷ್ಯವೃಂದದವರು ನುಡಿಸುವಂತಹಾ ಸಿತಾರ ವಾದನ ಶೈಲಿಗೆ ದರಭಾಂಗ ಘರಾಣೆ ಎನ್ನಲಾಗಿದೆ.

**ದರಭಾಂಗ ಘರಾಣೆಯ ಪ್ರಮುಖ ವಾದಕರು**

ಅಪೂಧ ಪಾಠಕ

ರಾಮೇಶ್ವರ ಪಾಠಕ

ರಾಮಗೋವಿಂದ ಪಾಠಕ

ಗಣೇಶ ಪಾಠಕ

ಬಲರಾಮ ಪಾಠಕ

### ೧೦. ಲಖನೌ ಘರಾಣೆ

ಪೂರ್ವಿಬಾಜ ಶೈಲಿಯಿಂದ ಪ್ರಸಿದ್ಧಿಯನ್ನು ಪಡೆದ ಲಖನೌ ಘರಾಣೆ ಸಿತಾರ ಪ್ರಪಂಚದಲ್ಲಿ ವಿಶೇಷ ಮಹತ್ವವನ್ನು ಪಡೆದುಕೊಂಡಿದೆ.

**ಲಖನೌ ಘರಾಣೆಯ ಪ್ರಮುಖ ವಾದಕರು**

ಮಹಮ್ಮದ ಹುಸ್ಸೇನ ಖಾನ್

ರಾಜ ಹುಸ್ಸೇನ ಖಾನ್

ರಹಮತ್ ಹುಸ್ಸೇನ ಖಾನ್

ಬಶರತ ಹುಸ್ಸೇನ ಖಾನ್

ತಜಮುಲ್ಲಾ ಖಾನ್

ನವಾಬ ಹಶಮತ ಜಂಗ

ಕುತುಬ ಅಲಿ

ನವಾಬ ಅಲಿ

ನಕಿಖಾ

ಅಬ್ದುಲ್ ಗನಿಖಾನ್

ಯೂಸೂಫ್ ಅಲಿಖಾನ್

ಇಸ್ಮಾಯಿಲ್ ಖಾನ್

ಪನ್ನಾಲಾಲ ಬಾಜಪೇಯಿ

ಗೋಸ್ವಾಮಿ ಪನ್ನಾಲಾಲ್

ವೈದ್ಯ ಅರ್ಜುನದಾಸ ಖನ್ನಾ

### ೧೧. ಕಿರಾಣಾ ಘರಾಣೆ

ಖ್ಯಾಲ ಗಾಯನದ ಘರಾಣೆಗಳಲ್ಲಿ ಕಿರಾಣಾ ಘರಾಣೆ ಪ್ರಸಿದ್ಧಿ ಪಡೆದಂತೆ, ಸಿತಾರ ವಾದನದ ಘರಾಣೆಗಳಲ್ಲೂ ಕಿರಾಣಾ ಘರಾಣೆ ತನ್ನ ಛಾಪನ್ನು ನಮೂದಿಸಿದೆ. ಕಿರಾಣಾ ಘರಾಣೆಯ ಕೆಲವು ಗಾಯಕರು ಸಿತಾರ ವಾದನ ನುಡಿಸುವುದರಲ್ಲಿ ಪರಿಣಿತಿ ಪಡೆದು, ಸಿತಾರ ವಾದನದ ಕಿರಾಣಾ ಘರಾಣೆಯನ್ನು ಆವಿಷ್ಕರಿಸಿದರು.

**ಕಿರಾಣಾ ಘರಾಣೆಯ ಪ್ರಮುಖ ವಾದಕರು**

ಗುಲಾಮ ಮಹಮ್ಮದ ಖಾನ್

ಸಜ್ಜಾದ ಮಹಮ್ಮದ ಖಾನ್

ಬೋಲಾನಾಥ ಚರ್ಕವರ್ತಿ

ಯೋಗೇಶ ಚರ್ಕವರ್ತಿ

ಶಂಭು ಗೋಸ್ವಾಮಿ

ಅಶೋಕ ಗೋಸ್ವಾಮಿ

ಪನ್ನಾಲಾಲ ಭಟ್ಟಾಚಾರ್ಯ

೧೨. **ಮಥುರಾ ಘರಾಣೆ**

ಸಿತಾರ ಘರಾಣೆಗಳಲ್ಲಿ ಮಥುರಾ ಘರಾಣೆಯ ವಾದಕರ ಕೊಡುಗೆ ಅಪಾರವಾಗಿದೆ.

**ಮಥುರಾ ಘರಾಣೆಯ ಪ್ರಮುಖ ಕಲಾವಿದರು**

ಬುಲಾಕಿ ಖಾನ್

ಮೀರಬಕ್ಷ ಖಾನ್

ನಜೀರ ಖಾನ್

ಕಾಲೇ ಖಾನ್

ಫೈಯಾಜ್ ಖಾನ್

ಮುನ್ನಾ ಖಾನ್

## ೪.೩ ಪ್ರಸ್ತುತ ಕಾಲಮಾನದಲ್ಲಿ ಘರಾಣೆಗಳ ಸ್ಥಾನ–ಮಾನ

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದಲ್ಲಿ ಘರಾಣೆಗಳ ಉದಯ ಹಾಗೂ ವಿಕಾಸವು ಗುರುಶಿಷ್ಯ ಪರಂಪರೆ ಎಂಬ ಶಿಕ್ಷಣ ಪದ್ಧತಿಯಲ್ಲಿ ಮುಂದುವರಿಯಿತು. ಶಾಸ್ತ್ರೀಯ ಸಂಗೀತವು ಪ್ರಾತ್ಯಕ್ಷಿಕೆ ಹಾಗೂ ಪ್ರಯೋಗಾತ್ಮಕ ಕಲೆಯಾಗಿದ್ದು, ಇದರಲ್ಲಿನ ಪ್ರತಿಯೊಂದು ಅಂಶಗಳನ್ನು ಗುರುಮುಖವಾಗಿಯೇ ಕಲಿಯಬೇಕಾಗುತ್ತದೆ. ಆದ್ದರಿಂದಲೆ ಗುರುಶಿಷ್ಯ ಪರಂಪರೆ ಇಲ್ಲಿ ವಿಶೇಷ ಸ್ಥಾನವನ್ನು ಹೊಂದಿದೆ. ಗುರುವಿನ ತಾಲೀಮಿನಲ್ಲೇ ಸ್ವರಗಳನ್ನು ಹಚ್ಚುವ ಪದ್ಧತಿ ಚೀಜ್‌ಗಳನ್ನು ಹಾಡುವ ವಿಧಾನವನ್ನು ಕಲಿಯಬೇಕಾಗುತ್ತದೆ. ರಾಗಗಳ ಶುದ್ಧತೆ ಹಾಗೂ ಅವುಗಳ ವ್ಯಾಕರಣ, ಕಲಾತ್ಮಕ ಪ್ರಸ್ತುತಿಗಳನ್ನು ಗುರುಗಳ ನೇರ ಸಂಪರ್ಕದಲ್ಲಿ ಕಲಿಯಬೇಕಾಗುತ್ತದೆ.

ಪ್ರಸ್ತುತ ಕಾಲದಲ್ಲಿ ಈ ಗುರುಶಿಷ್ಯ ಪರಂಪರೆಯು ಒಂದು ಚೌಕಟ್ಟಿಗೆ ಒಳಪಟ್ಟಿದೆ. ಶಾಲಾ ಕಾಲೇಜು ಹಾಗೂ ವಿಶ್ವವಿದ್ಯಾಲಯಗಳ ಶಿಕ್ಷಣ ಪದ್ಧತಿಯಲ್ಲಿ ನಿರ್ದಿಷ್ಟ ಒಂದೇ ಘರಾಣೆಯ ಸಂಗೀತ ಪಾಠ ವಿದ್ಯಾರ್ಥಿಗಳಿಗೆ ಸಿಗುತ್ತಿಲ್ಲ. ತರಗತಿಗಳಿಗೆ ಆಗಮಿಸುವ ಎಲ್ಲಾ ವಿದ್ಯಾರ್ಥಿಗಳಿಗೂ ಏಕಕಾಲದಲ್ಲೇ ನಿರ್ದಿಷ್ಟ ಸಮಯದ ಪರಿದಿಯಲ್ಲಿ ಸಂಗೀತಪಾಠ ಬೋಧಿಸಲಾಗುತ್ತದೆ. ಬೇರೆ ಬೇರೆ ಘರಾಣೆಯ ಶೈಲಿಯನ್ನು ಅನುಕರಣೆ ಮಾಡುವ ಸಂಗೀತ ಅಧ್ಯಾಪಕರಿಂದ ಇಂದಿನ ಯುವಪೀಳಿಗೆಯ ವಿದ್ಯಾರ್ಥಿಗಳು ಶಾಸ್ತ್ರೀಯ ಸಂಗೀತದ ತಾಲೀಮನ್ನು ಪಡೆದು ಒಂದು ನಿರ್ದಿಷ್ಟ ಘರಾಣೆಯ ಪದ್ಧತಿಯನ್ನು ಅನುಸರಿಸದೇ ಸಂಮಿಶ್ರ ಘರಾಣ ಪದ್ಧತಿಯಲ್ಲಿಯೇ ಶಾಸ್ತ್ರೀಯ ಸಮಗೀತವನ್ನು ಕಲಿತು ಪದವೀದರರಾಗಿ ಹೊರ ಹೊಮ್ಮುತ್ತಿದ್ದಾರೆ.

ಆಕಾಶವಾಣಿ, ಸಾಮಾಜಿಕ ಜಾಲತಾಣ ಹಾಗೂ ಗಣಕಯಂತ್ರ, ದೂರದರ್ಶನಗಳ ಮೂಲಕ ವಿವಿಧ ಘರಾಣೆಗಳ ಗಾಯನ, ವಾದನ ಶೈಲಿಗಳನ್ನು ಇಂದಿನ ಯುವಪೀಳಿಗೆ ಕೇಳುವ ಅವಕಾಶ ಈಗ ಲಭ್ಯವಿದೆ. ಇದರಿಂದಾಗಿ ಸ್ವಾಭಾವಿಕವಾಗಿ ಸಂಗೀತದ ವಿದ್ಯಾರ್ಥಿಗಳು ಬೇರೆ ಬೇರೆ ಘರಾಣೆಗಳಲ್ಲಿರುವ ಸುಂದರ ಶೈಲಿಗಳನ್ನು ತಮ್ಮ ಶೈಲಿಗಳಲ್ಲಿ ಅಳವಡಿಸಿಕೊಂಡು ಒಂದು ಮಿಶ್ರ ಶೈಲಿಯನ್ನು ಮಂಡಿಸುತ್ತಾರೆ. ಅನೇಕ ರಾಜ್ಯ ಹಾಗೂ ರಾಷ್ಟ್ರಮಟ್ಟದ ಶ್ರೇಷ್ಠ ಸಂಗೀತ ಕಲಾವಿದರೂ ಇಂತಹ ವಿವಿಧ ಶೈಲಿಯ ಮಿಶ್ರಣವನ್ನು ತಮ್ಮ ಪ್ರಸ್ತುತಿಯಲ್ಲಿ ಅಳವಡಿಸಿಕೊಂಡಿರುವುದು ಪ್ರಸ್ತುತ ಕಾಲಮಾನದಲ್ಲಿ ಕಂಡುಬರುತ್ತದೆ. ಕೇವಲ ಒಂದೇ ಘರಾಣೆಯ ಹೆಸರಿನಲ್ಲಿ ನೀರಸವಾದ ಶೈಲಿಯನ್ನು ಪ್ರಸ್ತುತ ಪಡಿಸುವುದಕ್ಕಿಂತ ಬೇರೆ ಬೇರೆ ಘರಾಣೆಗಳಲ್ಲಿರುವ ವಿವಿಧ ರಂಜಕ ತತ್ವಗಳನ್ನು ಅಳವಡಿಸಿಕೊಂಡು ಸ್ವತಂತ್ರ ಹಾಗೂ ಸಮೃದ್ಧ ಶೈಲಿಯ ಪದ್ಧತಿಯನ್ನು ಪ್ರಸ್ತುತ ಪಡಿಸುವುದು ಇಂದು ಪ್ರಚಾರದಲ್ಲಿದೆ.

ಪ್ರಸ್ತುತ ಕಾಲಮಾನದಲ್ಲಿ ಘರಾಣೆಗಳು ಹಾಗೂ ಇದರ ಪದ್ಧತಿಗಳು ಜೀವಂತವಾಗಿದ್ದರೂ ಈ ಘರಾಣೆ ಎಂಬುದನ್ನು ಮುಂಬರುವ ದಿನಗಳಲ್ಲಿ ಕೇವಲ ಪುಸ್ತಕಗಳಲ್ಲಿ ಮಾತ್ರ ಕಾಣಬಹುದು

ಎಂದರೆ ತಪ್ಪಾಗಲಾರದು. ಏಕೆಂದರೆ ಪ್ರಸ್ತುತದಲ್ಲಿ ಪ್ರತಿಯೊಬ್ಬ ಕಲಾವಿದನು ಎಲ್ಲಾ ಘರಾಣೆಗಳ ಅಂಶಗಳನ್ನು ತನ್ನದೇ ಆದ ಸ್ವಂತ ಶೈಲಿಯಲ್ಲಿ ಬಳಸಿಕೊಂಡು ತನ್ನ ಪ್ರತಿಭೆಯನ್ನು ಪ್ರಸ್ತುತ ಪಡಿಸಿ, ಶ್ರೋತೃಗಳನ್ನು ರಂಜಿಸುತ್ತಿರುವುದು ಸರ್ವೇಸಾಮಾನ್ಯವಾಗಿದೆ. ಇಂತಹ ನವೀನ ಪದ್ಧತಿಯು ಪ್ರಸ್ತುತ ಕಾಲಮಾನದ ಗಾಯನ ಹಾಗೂ ವಾದನ ಎರಡೂ ಘರಾಣೆಯ ಕಲಾವಿದರಲ್ಲಿ ಕಾಣಬಹುದಾಗಿದೆ.

### ೪.೪ ಕರ್ನಾಟಕದಲ್ಲಿ ಘರಾಣೆಗಳ ಬೆಳವಣಿಗೆ

ಕರ್ನಾಟಕದಲ್ಲಿ ಅಧಿಕೃತವಾಗಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಪರಂಪರೆಯು ಹೆಮ್ಮರವಾಗಿ ಬೆಳೆದು ನಿಲ್ಲಲು ಹದಿನಾರನೇ ಶತಮಾನದ ಬಿಜಾಪುರದ ದೊರೆ ಎರಡನೇ ಇಬ್ರಾಹಿಂ ಆದಿಲ್‌ಶಾಹ ಹಾಗೂ ಹದಿನೆಂಟನೇ ಶತಮಾನದ ಮೈಸೂರಿನ ಅರಸರಾದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಕಾರಣೀಕರ್ತರು. ಪ್ರಸ್ತುತ ಈ ಅಧ್ಯಯನದಲ್ಲಿ ಕರ್ನಾಟಕದ ಪ್ರಮುಖ ಗಾಯನ ಘರಾಣೆಗಳಾದ ಗ್ವಾಲಿಯರ್, ಕಿರಾಣಾ, ಜೈಪುರ-ಅತ್ರೌಲಿ ಮತ್ತು ಆಗ್ರ ಘರಾಣೆಗಳನ್ನು ಹಾಗೂ ವಾದನ ಘರಾಣೆಗಳನ್ನು ಸಂಕ್ಷಿಪ್ತವಾಗಿ ಉಲ್ಲೇಖಿಸಲಾಗಿದೆ.

#### ಗಾಯನ ಘರಾಣೆಗಳು

**ಗ್ವಾಲಿಯರ್ ಘರಾಣೆ:** ಕರ್ನಾಟಕದಲ್ಲಿ ಗ್ವಾಲಿಯರ್ ಘರಾಣೆಯನ್ನು ಮೊದಲು ಪರಿಚಯಿಸಿದವರು ಈ ಘರಾಣೆಯ ಸಂಸ್ಥಾಪಕರಾದ ಹದ್ದೂಖಾನರ ಶಿಷ್ಯ ರೆಹಮತ್ ಖಾನರವರು. ವಿಷ್ಣು ಪಂತ ಛತ್ರೆರವರು ರೆಹಮತ್ ಖಾನರವರನ್ನು ಮೊದಲಿಗೆ ಹುಬ್ಬಳ್ಳಿಗೆ ಕರೆದುಕೊಂಡು ಬಂದರು. ಆದರೆ ಈ ಘರಾಣೆಯ ಪ್ರಚಾರ ಮಾಡಿದವರು ರಾಮಕೃಷ್ಣ ಬುವಾ ವಝೆರವರು. ನಂತರದಲ್ಲಿ ಗ್ವಾಲಿಯರ್ ಘರಾಣೆಯನ್ನು ಪಂ. ನೀಲಕಂಠ ಬುವಾ ಮೀರಜಕರ್‌ರವರು ಹೆಚ್ಚಿನ ಪ್ರಮಾಣದಲ್ಲಿ ಬೆಳೆಸಿದರು.

ಆಲೂರಮಠ ಎಂಬ ಅಡ್ಡ ಹೆಸರಿನವರಾದ ಪಂ. ನೀಲಕಂಠ ಬುವಾ ಮೀರಜಕರ್‌ರವರು ಮೂಲತಃ ಬಾಗಲಕೋಟೆ ಜಿಲ್ಲೆಯ ಹೊಳೆ ಆಲೂರಿನವರು. ಇವರ ಪೂರ್ವಜರು ಆಲೂರಿನಿಂದ ಮಹಾರಾಷ್ಟ್ರ ರಾಜ್ಯದ ಮೀರಜ್‌ಗೆ ಹೋಗಿ ನೆಲೆಸಿದ್ದರಿಂದ ಮೀರಜಕರ್ ಎಂಬುದು ಇವರ ಅಡ್ಡ ಹೆಸರಾಯಿತು. ನೀಲಕಂಠ ಬುವಾರವರು ೧೮೬೦ರಲ್ಲಿ ಮೀರಜ್‌ನಲ್ಲಿ ಜನಿಸಿದರು. ಅಂದಿನ ಕಾಲದಲ್ಲಿ ಮೀರಜ್ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತಗಾರರ ತವರೂರಾಗಿತ್ತು. ಅನೇಕ ಸಂಗೀತಗಾರರು ಅಲ್ಲಿ ನೆಲೆಸಿದ್ದರು. ಗ್ವಾಲಿಯರ್ ಘರಾಣೆಯ ಗಾಯಕರಾದ ಪಂ. ಬಾಲಕೃಷ್ಣ ಬುವಾ ಈಚಲಕರಂಜೀಕರ್‌ರವರ ಪುತ್ರ ಅಣ್ಣುರವರು ನೀಲಕಂಠ ಬುವಾರವರ ಬಾಲ್ಯದ ಸಹಪಾಠಿಯಾಗಿದ್ದರು. ಗೆಳೆಯನ ಸಹಾಯದಿಂದ ನೀಲಕಂಠ ಬುವಾರವರು ಪಂ. ಬಾಲಕೃಷ್ಣ ಬುವಾರವರಲ್ಲಿ ಗ್ವಾಲಿಯರ್ ಘರಾಣೆಯ ಶಾಸ್ತ್ರೀಯ ಸಂಗೀತ ಕಲಿತು ಪ್ರಬುದ್ಧರಾದರು.

ಪಂ. ನೀಲಕಂಠ ಬುವಾರವರು ಒಮ್ಮೆ ತಮ್ಮ ಸಂಗೀತ ಕಾರ್ಯಕ್ರಮದ ನಿಮಿತ್ತ ಹಾವೇರಿಗೆ ಆಗಮಿಸಿದಾಗ ಅಲ್ಲಿ ಶಿವಯೋಗಿ ಮಂದಿರದ ಶ್ರೀ ಕುಮಾರ ಸ್ವಾಮಿಗಳನ್ನು ಭೇಟಿಯಾದರು. ಆ ಸಮಯದಲ್ಲಿ ಕಾಡಶೆಟ್ಟಿ ಹಳ್ಳಿಯ ಗದಿಗಯ್ಯನೆಂಬ ಜನ್ಮಾಂದ ಶಿಷ್ಯ ಶಿವಯೋಗಿ ಮಂದಿರದಲ್ಲಿದ್ದರು. ಅದಾಗಲೇ ಕರ್ನಾಟಕ ಸಂಗೀತ ಕಲಿತಿದ್ದ ಗದಿಗಯ್ಯನವರಿಗೆ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಕಲಿಸಬೇಕೆಂಬುದು ಶ್ರೀ ಕುಮಾರ ಸ್ವಾಮಿಗಳ ಆಶಯವಾಗಿತ್ತು. ಈ ವಿಷಯವನ್ನು ಶ್ರೀ ಕುಮಾರ ಸ್ವಾಮಿಗಳು ನೀಲಕಂಠ ಬುವಾರವರಲ್ಲಿ ಚರ್ಚಿಸಿ, ಅವರನ್ನು ಗದಿಗಯ್ಯನವರಿಗೆ ಹಿಂದೂಸ್ತಾನಿ ಸಂಗೀತವನ್ನು ಕಲಿಸಲು ಒಪ್ಪಿಸಿದರು. ಅದರಂತೆಯೇ ನಾಲ್ಕಾರು ವರ್ಷ ನೀಲಕಂಠ ಬುವಾರವರು ಶಿವಯೋಗಿ ಮಂದಿರದಲ್ಲಿ ನೆಲಸಿ ಗದಿಗಯ್ಯನವರಿಗೆ ಗ್ವಾಲಿಯರ್ ಘರಾಣೆಯ ಶಾಸ್ತ್ರೀಯ ಸಂಗೀತವನ್ನು ಕಲಿಸಿದರು. ಮುಂದೆ ಗದಿಗಯ್ಯನವರೇ ಪಂ. ಪಂಚಾಕ್ಷರಿ ಗವಾಯಿಗಳೆಂದು ಪ್ರಸಿದ್ಧರಾದರು.

ಹೀಗೆ ಪಂ.ನೀಲಕಂಠ ಬುವಾರವರು ಪಂ. ಪಂಚಾಕ್ಷರಿ ಗವಾಯಿ, ಪಂ.ಮಲ್ಲಿಕಾರ್ಜುನ ಮನಸೂರ ಹಾಗೂ ಪಂ.ಬಸವರಾಜ ರಾಜಗುರುಗಳಂತಹಾ ಶಿಷ್ಯರನ್ನು ತಯಾರು ಮಾಡಿ ಕರ್ನಾಟಕದಲ್ಲಿ ಗ್ವಾಲಿಯರ್ ಘರಾಣೆಯ ಸಂಗೀತವನ್ನು ಶ್ರೀಮಂತಗೊಳಿಸಿದರು. ಕುಮಾರ ಗಂಧರ್ವರು ವಿಷ್ಣು ದಿಗಂಬರ ಪಲುಸ್ಕರರವರ ಶಿಷ್ಯರಾದ ದೇವಧರ ಅವರಲ್ಲಿ ಗ್ವಾಲಿಯರ್ ಘರಾಣೆಯ ಸಂಗೀತ ಶಿಕ್ಷಣ ಪಡೆದು, ನಂತರದಲ್ಲಿ ಮಧ್ಯಪ್ರದೇಶದ ದೇವಾಸದಲ್ಲಿ ನೆಲೆಸಿದರು.

ಗ್ವಾಲಿಯರ್ ಘರಾಣೆಯ ಮೂಲ ಪುರುಷರಾದ ನತ್ಥನ್ ಪೀರ ಭಕ್ಷರ ಮರಿಮೊಮ್ಮಗ ಅಂದರೆ ಹದ್ದೂಖಾನರ ಮಗನಾದ ರೆಹಮತ್ ಖಾನರ ಶಿಷ್ಯ ರಾಮಕೃಷ್ಣ ವಝೆ ಅವರು ಕರ್ನಾಟಕದವರಾದ ಗುರುರಾವ್ ದೇಶಪಾಂಡೆಯವರಿಗೆ ಗ್ವಾಲಿಯರ್ ಘರಾಣೆಯ ಶಾಸ್ತ್ರೀಯ ಸಂಗೀತ ಕಲಿಸಿದರು. ನಂತರದಲ್ಲಿ ದೇಶಪಾಂಡೆರವರು ಧಾರವಾಡದಲ್ಲಿ ವಿನಾಯಕ ತೊರವಿ ಹಾಗು ಇನ್ನಿತರರಿಗೆ ಸಂಗೀತಪಾಠ ಮಾಡಿದರು.

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಕರ್ನಾಟಕದಲ್ಲಿ ಬಹು ಎತ್ತರದ ಸ್ಥಾನ-ಮಾನಕ್ಕೆ ಏರಿಸಿದ ಪ್ರಮುಖ ಗಾಯಕರಲ್ಲಿ ಡಾ. ಬಸವರಾಜ ಗುರುಗಳು ಅಗ್ರಗಣ್ಯರು. ರಾಜಗುರುಗಳ ಗಾಯನ ಶೈಲಿಯು ಗ್ವಾಲಿಯರ್, ಕಿರಾಣಾ ಮತ್ತು ಪಟಿಯಾಲ ಘರಾಣೆಗಳ ತ್ರಿವೇಣಿ ಸಂಗಮವಾಗಿತ್ತು. ವಿವಿಧ ಘರಾಣೆಗಳಿಗೆ ಸೇರಿದ ಸುಮಾರು ೧೧ ಜನ ಗುರುಗಳಲ್ಲಿ ರಾಜಗುರುಗಳು ಶಾಸ್ತ್ರೀಯ ಸಂಗೀತ ಕಲಿತಿದ್ದರು. ಪ್ರಾರಂಭಿಕ ಸಂಗೀತದ ಶಿಕ್ಷಣವನ್ನು ಗ್ವಾಲಿಯರ್ ಘರಾಣೆಯ ಪಂ. ಪಂಚಾಕ್ಷರಿ ಘವಾಯಿಗಳು ಹಾಗೂ ಪಂ. ನೀಲಕಂಠ ಬುವಾ ಮೀರಜಕರ ಅವರಲ್ಲಿ ಕಲಿತು, ತದನಂತರದಲ್ಲಿ ಕಿರಾಣಘರಾಣೆಯ ಪಂ. ಸವಾಯಿಗಂಧರ್ವ, ಸುರೇಶಬಾಬು ಮಾನೆ, ಬಶೀರ

ಖಾನ್, ಮೊಬಾರಕ್ ಅಲಿ, ಅಬ್ದುಲ್ ವಹಿದ್ ಖಾನ್, ಲತೀಫ ಖಾನ, ಇನಾಯತುಲ್ಲಾ ಖಾನ್, ರೋಶನ್ ಅಲಿ ಮತ್ತು ಗೋವಿಂದರಾವ್ ಟೆಂಬೆ ಅವರಲ್ಲಿ ಸಂಗೀತ ಕಲಿಯುತ್ತಾರೆ. ಇದರಿಂದಾಗಿ ಬಸವರಾಜ ರಾಜ ಗುರುಗಳ ಗಾಯನದಲ್ಲಿ ಮೂರು ಘರಾಣೆಗಳ ಸಾರ ಸಂಗ್ರಹವಾಗಿತ್ತು.

ಕರ್ನಾಟಕದಲ್ಲಿ ಅತೀ ಹೆಚ್ಚು ಶಿಷ್ಯ ಬಳಗವನ್ನು ಹೊಂದಿದ ಖ್ಯಾತಿಯನ್ನು ಪಡೆದ ಡಾ. ಬಸವರಾಜ ರಾಜಗುರುಗಳ ಶಿಷ್ಯರಲ್ಲಿ ಸೋಮನಾಥ ಮರಡೂರ, ಗಣಪತಿ ಭಟ್ ಹಾಸಣಗಿ, ಪರಮೇಶ್ವರ ಹೆಗಡೆ, ಶ್ರೀಪಾದ ಹೆಗಡೆ, ಶಾಂತರಾಮ ಹೆಗಡೆ, ಹಾಗು ಸಂಗೀತಾ ಕಟ್ಟಿ ಕುಲಕರ್ಣಿ ಮುಂತಾದವರು ಪ್ರಮುಖರು.

ಪಂ.ನೀಲಕಂಠ ಬುವಾ ಮೀರಜಕರ, ಪಂ.ಪಂಚಾಕ್ಷರ ಗವಾಯಿಗಳು, ಪಂ. ಪುಟ್ಟರಾಜ ಗವಾಯಿಗಳು, ಡಾ.ಬಸವರಾಜ ರಾಜಗುರುಗಳು, ಪಂ.ಕುಮಾರ ಗಂಧರ್ವರು, ಪಂ.ಅರ್ಜುನ ಸಾ ನಾಕೋಡರು, ಪಂ. ಶೇಷಾದ್ರಿ ಗವಾಯಿಗಳು, ಪಂ. ಚಂದ್ರಶೇಖರ ಪುರಾಣಿಕಮಠ, ಬಿ.ಎಸ್.ಮಠ, ಪಂ. ಎಂ.ವೆಂಕಟೇಶ ಕುಮಾರ, ಡಿ. ಕುಮಾರದಾಸ ಮುಂತಾದ ಕಲಾವಿದರು ಕರ್ನಾಟಕದಲ್ಲಿ ಗ್ವಾಲಿಯರ ಘರಾಣೆಯನ್ನು ಪ್ರಭಲವಾಗಿ ಮುನ್ನಡೆಸಿದ ಕಲಾವಿದರು.

**ಕಿರಾಣಾ ಘರಾಣೆ:** ಜಮಖಂಡಿ ಸಂಸ್ಥಾನದ ಆಸ್ಥಾನ ಗಾಯಕ ಗಣಪತರಾವ್ ಗುರವ್ ಹಾಗು ಹುಬ್ಬಳ್ಳಿ ಸಮೀಪದ ಕುಂದಗೋಳದ ರಾಮಬಾವು ಕುಂದಗೋಳಕರ್‌ರವರು ಕಿರಾಣಾ ಘರಾಣೆಯ ಮೂಲ ಪುರುಷರಾದ ಅಬ್ದುಲ್ ಕರೀಂಖಾನರ ನೇರ ಶಿಷ್ಯರಲ್ಲಿ ಪ್ರಮುಖರು.

ಕಿರಾಣಾ ಘರಾಣೆಯ ಮೇರು ಗಾಯಕರಾದ ಅಬ್ದುಲ್ ಕರೀಂಖಾನ ಸಾಹೇಬರು ಒಮ್ಮೆ ಹುಬ್ಬಳ್ಳಿಗೆ ಕಛೇರಿ ನೀಡಲು ಆಗಮಿಸಿದ್ದರು. ಆಗ ಕುಂದಗೋಳದ ಬಾಲಕ ರಾಮಚಂದ್ರ ರಾಮಭಾವು ಅವರ ತಂದೆಯವರೊಂದಿಗೆ ಹುಬ್ಬಳ್ಳಿಗೆ ಆಗಮಿಸಿ, ಅಬ್ದುಲ್ ಕರೀಂಖಾನರನ್ನು ಭೇಟಿಯಾದರು. ಚಿಕ್ಕಂದಿನಿಂದಲೇ ಶಾಸ್ತ್ರೀಯ ಸಂಗೀತದ ಪ್ರೇಮಿಯಾಗಿದ್ದ ರಾಮಚಂದ್ರ ಅದಾಗಲೇ ಕುಂದಗೋಳದಲ್ಲಿ ವಾಸವಾಗಿದ್ದ ಬಳವಂತರಾವ್ ಕೋಲ್ಹಟಕರಿಂದ ಸುಮಾರು ದ್ರುಪದ್, ಖ್ಯಾಲಗಳನ್ನು ಕೆಲವು ತಾಳಗಳನ್ನು ಕಲಿತಿದ್ದನು. ಬಾಲಕ ರಾಮಚಂದ್ರನು ತನ್ನ ಸಂಗೀತ ಪ್ರತಿಭೆಯನ್ನು ಅಬ್ದುಲ್ ಕರೀಂಖಾನರಿಗೆ ಹಾಡಿ ತೋರಿಸಿದನು. ಬಾಲಕನ ಪ್ರತಿಭೆಯನ್ನು ಕಂಡು ಸಂತಸಗೊಂಡ ಅಬ್ದುಲ್ ಕರೀಂಖಾನರು ರಾಮಚಂದ್ರನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿ, ತಮ್ಮೊಂದಿಗೆ ಮೀರಜ್‌ಗೆ ಕರೆದುಕೊಂಡು ಹೋದರು. ೧೯೦೦ರಿಂದ ೧೯೦೭ರವರೆಗೆ ಏಳು ವರ್ಷಗಳ ಕಾಲ ರಾಮಚಂದ್ರನು ಗುರುಕುಲ ಮಾದರಿಯ ಪದ್ಧತಿಯಲ್ಲಿ ಕಿರಾಣಾ ಘರಾಣೆಯ ಶಾಸ್ತ್ರೀಯ ಸಂಗೀತವನ್ನು ಕಟ್ಟು, ನಿಟ್ಟಿನಿಂದ ಕಲಿತನು. ಕಾಲಾನಂತರ ಇದೇ ಬಾಲಕ 'ಸವಾಯಿ ಗಂಧರ್ವ'ರೆಂದು ಪ್ರಸಿದ್ಧರಾದರು.

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತಕ್ಕೆ ಅಪಾರ ಕೊಡುಗೆ ನೀಡಿದ ಸವಾಯಿ ಗಂಧರ್ವರ ಶಿಷ್ಯವೃಂದದಲ್ಲಿ ಭಾರತರತ್ನ ಡಾ. ಭೀಮಸೇನ ಜೋಶಿಯವರು, ವಿದೂಷಿ ಗಂಗೂಬಾಯಿ ಹಾನಗಲ್ ಹಾಗು ಫಿರೋಜ್ ದಸ್ತೂರ್‌ರವರು ಪ್ರಮುಖರು. ಈ ಮೂರುಜನ ಶಿಷ್ಯರು ಕಿರಾಣಾ ಘರಾಣೆಯ ಘನತೆ, ಗೌರವವನ್ನು ರಾಜ್ಯ ಹಾಗೂ ದೇಶಾದ್ಯಂತ ಹೆಚ್ಚಿಸಿದರು.

ಜಮಖಂಡಿ ಸಂಸ್ಥಾನದ ಆಸ್ಥಾನ ಗಾಯಕ ಹಾಗು ಕರ್ನಾಟಕದ ಕಿರಾಣಾ ಘರಾಣೆಯ ಮತ್ತೊಬ್ಬ ಪ್ರಮುಖ ಗಾಯಕರಾದ ಗಣಪತರಾವ್ ಗುರವ್ ಅವರು ತಮ್ಮ ಮಗನಾದ ಸಂಗಮೇಶ್ವರ ಗುರವ್ ಅವರಿಗೆ, ಹಾಗೆಯೇ ಸಂಗಮೇಶ್ವರ ಗುರವ್ ಅವರು ತಮ್ಮ ಮಗನಾದ ಕೈವಲ್ಯ ಕುಮಾರ ಗುರವ್ ಅವರಿಗೆ ಕಿರಾಣಾ ಘರಾಣೆಯ ಶಾಸ್ತ್ರೀಯ ಸಂಗೀತವನ್ನು ಕಲಿಸುವುದರ ಮೂಲಕ ಕಿರಾಣಾ ಘರಾಣೆಯ ಪರಂಪರೆಯನ್ನು ಕರ್ನಾಟಕದಲ್ಲಿ ಮುಂದುವರಿಸಿದರು.

ಸವಾಯಿ ಗಂಧರ್ವರ ಶಿಷ್ಯರಾದ ಭಾರತರತ್ನ ಭೀಮಸೇನ ಜೋಶಿರವರು ಶ್ರೀಪತಿ ಪಾಡಿಗಾರ, ಮಾಧವ ಗುಡಿ, ಅನಂತ ತೇರದಾಳ, ಶ್ರೀಕಾಂತ ದೇಶಪಾಂಡೆ, ಅರವಿಂದ ಹುಯಿಲಗೋಳ, ನಾರಾಯಣ ದೇಶಪಾಂಡೆ, ರಾಮಕೃಷ್ಣ ಪಟವರ್ಧನ್ ಹಾಗು ಪುತ್ರ ಶ್ರೀನಿವಾಸ ಜೋಶಿಯವರಿಗೆ ಕಿರಾಣಾ ಘರಾಣೆಯ ಶಾಸ್ತ್ರೀಯ ಸಂಗೀತವನ್ನು ಕಲಿಸುವುದರ ಮೂಲಕ ಹಾಗೆಯೇ ವಿದೂಷಿ ಗಂಗೂಬಾಯಿ ಹಾನಗಲ್‌ರವರು ಮಗಳು ಕೃಷ್ಣಾ ಹಾನಗಲ್, ಸುಲಭದತ್ತಾ ನೀರಲಗಿ, ನಾಗನಾಥ ಒಡೆಯರ್ ಅವರಿಗೆ ಸಂಗೀತಧಾರೆ ಎರೆಯುವುದರ ಮೂಲಕ ಕಿರಾಣಾ ಘರಾಣೆಯ ಪರಂಪರೆಯನ್ನು ಕರ್ನಾಟಕದಲ್ಲಿ ಮುಂದುವರಿಸಿದರು.

**ಜೈಪುರ–ಅತ್ರೌಲಿ ಘರಾಣೆ:** ಧಾರವಾಡ ಜಿಲ್ಲೆಯ ಮನಸೂರಿನ ಪಂ.ಮಲ್ಲಿಕಾರ್ಜುನ ಮನಸೂರ ಅವರು ಕರ್ನಾಟಕದಲ್ಲಿ ಜೈಪುರ–ಅತ್ರೌಲಿ ಘರಾಣೆಯನ್ನು ಉಳಿಸಿ, ಬೆಳಸಿದ ಮೂಲಪುರುಷರು. ಶಾಸ್ತ್ರೀಯ ಸಂಗೀತದ ಪ್ರಾರಂಭಿಕ ಶಿಕ್ಷಣವನ್ನು ಗ್ವಾಲಿಯರ್ ಘರಾಣೆಯ ಪಂ.ನೀಲಕಂಠ ಬುವಾ ಮೀರಜಕರ್‌ರವರಿಂದ ಕಲಿತ ಇವರು ನಂತರ ಅನಿವಾರ್ಯವಾಗಿ ಜೈಪುರ–ಅತ್ರೌಲಿ ಘರಾಣೆಯ ಸಂಗೀತವನ್ನು ಅಲ್ಲಾದಿಯಾಖಾನರವರ ಮಕ್ಕಳಾದ ಮಂಜೀಖಾನ್ ಹಾಗು ಭುರ್ಜಿಖಾನ್‌ರವರಲ್ಲಿ ಮುಂದುವರಿಸುತ್ತಾರೆ.

ಜೈಪುರ–ಅತ್ರೌಲಿ ಘರಾಣೆಯ ಕಠಿಣ ಹಾಗು ಕಟ್ಟುನಿಟ್ಟಿನ ಗಾಯಕಿಯನ್ನು ಕಲಿತು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಜಗತ್ತನ್ನು ಅರ್ಧಶತಕಕ್ಕೂ ಹೆಚ್ಚು ಆಳಿದ 'ಸ್ವರ ಚಕ್ರವರ್ತಿ"ಯಾಗುತ್ತಾರೆ. ಇವರ ಅಪಾರ ಶಿಷ್ಯವೃಂದದಲ್ಲಿ ಸಿದ್ಧರಾಮ ಜಂಬಲದಿನ್ನಿ, ಪಂ.ಪಂಚಾಕ್ಷರಿಸ್ವಾಮಿ ಮತ್ತಿಘಟ್ಟಿ ಹಾಗು ಮಕ್ಕಳಾದ ನೀಲಮ್ಮ ಕೊಡ್ಲಿ, ರಾಜಶೇಖರ ಮನಸೂರರು ಪ್ರಮುಖರು.

**ಆಗ್ರಾ ಘರಾಣೆ:** ಆಗ್ರಾ ಘರಾಣೆಯ ಪ್ರಮುಖ ಗಾಯಕರಾದ ವಿಲಾಯತ್ ಹುಸೇನಖಾನ್‌ರವರ ಶಿಷ್ಯರಾದ ಹನುಮಂತರಾವ್ ವಾಳ್ವೇಕರ್ ಕರ್ನಾಟಕದಲ್ಲಿ ಆಗ್ರಾ ಘರಾಣೆಯನ್ನು ಪರಿಚಯಿಸಿದರು. ದಿನಕರ ಕಾಯ್ಕಿಣಿ, ಕೆ.ಜಿ.ಗಿಂಡೆ, ರಾಮರಾವ್ ನಾಯಕ, ಲಲಿತಾ ಜೆ. ರಾವ್, ಎಸ್.ಸಿ.ಆರ್.ಭಟ್, ಇಂದೂಧರ ನಿರೋಡಿರವರು ಮುಂತಾದವರು ಕರ್ನಾಟಕದಲ್ಲಿ ಆಗ್ರಾ ಘರಾಣೆಯನ್ನು ಬೆಳೆಸಿದರು.

ಆಗ್ರಾ ಘರಾಣೆಯ ಬೇರನ್ನು ಕರ್ನಾಟಕದಲ್ಲಿ ಭದ್ರವಾಗಿ ನೆಲೆಯೂರಿಸಿದವರಲ್ಲಿ ಅತಾ ಹುಸೇನಖಾನರ ಶಿಷ್ಯರಾದ ಹಾವೇರಿ ಜಿಲ್ಲೆಯ ನೀರಲಗಿ ಗ್ರಾಮದ ರಾಮರಾವ ನಾಯಕರು ಹಾಗು ದಿನಕರ ಕಾಯ್ಕಿಣಿಯವರ ಶಿಷ್ಯ, ಮೂಲತಃ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನವರಾದ ಪಂ. ಇಂದೂಧರ ನಿರೋಡಿಯವರು ಪ್ರಮುಖರು.

## ವಾದನ ಘರಾಣೆಗಳು

**ಸಿತಾರ ವಾದ್ಯದ ಘರಾಣೆ** – ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಗಾಯನ ಕ್ಷೇತ್ರ ಒಂದೇ ಅಲ್ಲದೆ, ವಾದನ ಕ್ಷೇತ್ರದಲ್ಲೂ ಕರ್ನಾಟಕ ರಾಜ್ಯದ ಕಲಾವಿದರು ದೇಶ ವಿದೇಶಗಳಲ್ಲಿ ತಮ್ಮ ಛಾಪನ್ನು ಮೂಡಿಸಿದ್ದಾರೆ. ಅವರುಗಳಲ್ಲಿ ಮೂಲತಃ ಉತ್ತರ ಭಾರತದವರಾದ ಹಾಗು ಕರ್ನಾಟಕದಲ್ಲಿ ಸಿತಾರ ವಾದನಕ್ಕೆ ಭದ್ರ ಬುನಾದಿಯನ್ನು ಹಾಕಿದ ಸಿತಾರರತ್ನ ಉಸ್ತಾದ ರಹಮತ್ ಖಾನರು ಪ್ರಮುಖರು.

ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಆಹ್ವಾನದ ಮೇರೆಗೆ ದಸರಾ ಕಾರ್ಯಕ್ರಮಕ್ಕೆ ಉತ್ತರ ಭಾರತದಿಂದ ಆಗಮಿಸಿದ ಉಸ್ತಾದ ರಹಿಮತ್ ಖಾನರು ಹಿಂತಿರುಗಿ ಹೋಗುವಾಗ ಧಾರವಾಡದಲ್ಲಿ ತಂಗುತ್ತಾರೆ. ಧಾರವಾಡದ ಪ್ರಕೃತಿ ಸೌಂದರ್ಯಕ್ಕೆ ಮನಸೋತು ಧಾರವಾಡದಲ್ಲೇ ಖಾಯಂ ಆಗಿ ನೆಲೆಸುತ್ತಾರೆ. ಉಸ್ಮಾನಖಾನ, ಬಾಲೇಖಾನ, ಹಮೀದಖಾನ, ಛೋಟೆ ರೆಹಮತ್‌ಖಾನ, ರಫೀಕ್ ಮತ್ತು ಶಫೀಕಖಾನ್, ಶ್ರೀನಿವಾಸ ಜೋಶಿ, ರಫೀಕ್ ನದಾಫ್ ಸಾಂಗ್ಲಿ, ವಿ.ಜಿ.ಮಹಾಪುರುಷ ಹೀಗೆ ಸಿತಾರರತ್ನರ ರಹಿಮತ್ ಖಾನರ ಸಿತಾರ ವಾದನದ ಪರಂಪರೆ ಮಕ್ಕಳು, ಮೊಮ್ಮಕ್ಕಳು, ಮರಿಮೊಮ್ಮಕ್ಕಳು ಹಾಗು ಶಿಷ್ಯವರ್ಗ ಸೇರಿದಂತೆ ಸುಮಾರು ಏಳು ತಲೆಮಾರಿನವರೆಗೆ ಈ ಪರಂಪರೆ ಮುಂದುವರಿಯುತ್ತದೆ.

**ಸರೋದ ವಾದ್ಯದ ಘರಾಣೆ:** ಸರೋದ ವಾದ್ಯವು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ತಂತಿ ವಾದ್ಯಗಳಲ್ಲಿ ಒಂದಾಗಿದ್ದು, ಅತ್ಯಂತ ಕಠಿಣ ಹಾಗು ಸೂಕ್ಷ್ಮ ವಾದ್ಯವಾದ ಇದರಲ್ಲಿ ಸಿತಾರ ವಾದ್ಯದಲ್ಲಿರುವಂತೆ ಪಡದೆಗಳಿರುವುದಿಲ್ಲ. ಬಾಂಗ್ಲಾದೇಶದ ರಾಷ್ಟ್ರೀಯ ವಾದ್ಯವಾದ ಸರೋದವು ಭಾರತದ ಪಶ್ಚಿಮಬಂಗಾಳದಲ್ಲಿ ಹೆಚ್ಚು ಪ್ರಚಾರವನ್ನು ಪಡೆದ ವಾದ್ಯವಾಗಿದೆ. ಅಲ್ಲಾವುದ್ದೀನಖಾನರ ಸಹೋದರ ಮತ್ತು ಬಹದ್ದೂರಖಾನರ ತಂದೆಯವರಾದ ಅಯಾತ ಅಲಿಖನರು ಸರೋದ ವಾದ್ಯಕ್ಕೆ ಹೊಸರೂಪ ನೀಡಿದರು. ಅಲ್ಲಾವುದ್ದೀನಖಾನರ ಪುತ್ರ ಅಲಿಅಕಬರಖಾನ, ಹಾಫಿಜ

ಅಲಿಖಾನ, ಅಮಜದ ಅಲಿಖಾನ, ಶರಣರಾಣಿ, ಝುರೀನ ದಾರಾವಾಲಾ ಶರ್ಮಾ, ಕೆನರುಖಕರ ಮನ್ ಮುಂತಾದವರು ಭಾರತದಲ್ಲಿ ಸರೋದ ವಾದನದ ಪರಂಪರೆಯನ್ನು ಬೆಳೆಸಿದರು.

ಕಲ್ಕತ್ತಾದ ಅಲಿಅಕಬರಖಾನರಲ್ಲಿ ಸರೋದ ವಾದನವನ್ನು ಕಲಿಯಲೇಬೇಕೆಂಬ ಮಹದಾಸೆಯನ್ನಿಟ್ಟುಕೊಂಡು ಕರ್ನಾಟಕದಿಂದ ತೆರಳಿದವರು ನಾಡೋಜ ರಾಜೀವ ತಾರಾನಾಥರು. ಕಠಿಣ ಪರಿಶ್ರಮ ಹಾಗು ಅತ್ಯಂತ ಶ್ರದ್ಧೆಯಿಂದ ಸರೋದ ವಾದನವನ್ನು ಕಲಿತು, ರಾಜೀವ ತಾರಾನಾಥರು ದಕ್ಷಿಣ ಭಾರತದ ಏಕೈಕ ಸರೋದಿಯಾ ಎಂದೇ ಕರೆಯಿಸಿಕೊಂಡರು.

**ತಬಲಾ ವಾದ್ಯದ ಘರಾಣೆ:** ತಬಲಾ ವಾದ್ಯವು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಗಾಯನ ಹಾಗು ವಾದನ ಪ್ರಕಾರಗಳಿಗೆ ಮುಖ್ಯವಾದ ಸಾಥಿವಾದ್ಯವಾಗಿದೆ. ಪಂಜಾಬ, ಡೆಲ್ಲಿ, ಬನಾರಸ, ಅಜರಡಾ, ಲಕನೋ ಎಂಬ ಪ್ರಸಿದ್ಧ ಘರಾಣೆಗಳನ್ನು ಒಳಗೊಂಡ ತಬಲಾ ವಾದನವನ್ನು ಕರ್ನಾಟಕದಲ್ಲಿ ಮೊದಲಿಗೆ ಪರಿಚಯಿಸಿದವರು ಬಸವರಾಜ ಬೆಂಡಿಗೇರಿಯವರು. ಪಂ.ಪಂಚಾಕ್ಷರಿ ಗವಾಯಿಗಳವರ ಒತ್ತಾಸೆಯಿಂದ ಬೆಳಗಾವಿ ಮೂಲದ ಉಸ್ತಾದ ಮೆಹಬೂಬಖಾನ ಮೀರಜಕರ ಅವರಲ್ಲಿ ಬೆಂಡಿಗೇರಿಯವರು ತಬಲಾ ವಾದನವನ್ನು ಕಲಿತು ಪ್ರಸಿದ್ಧರಾಗುತ್ತಾರೆ. ಇವರ ಶಿಷ್ಯರಲ್ಲಿ ರಘುನಾಥ ನಾಕೋಡ, ವೆರಣೆಕರ್, ವೀರಣ್ಣ ಕಾಮಕರ, ನಂದಿಕೇಶ್ವರ ಗುರವ್, ಸರೇಶ್ ನಿಡಗುಂದಿ ಪ್ರಮುಖರು.

ಬಸವರಾಜ ಬೆಂಡಿಗೇರಿಯವರಲ್ಲದೇ ತಬಲಾ ವಾದನದಲ್ಲಿ ಪ್ರಸಿದ್ಧರಾದ ಮತ್ತೊಬ್ಬರು ಡಾ.ಗಂಗೂಬಾಯಿ ಹಾನಗಲ್‌ರವರ ಸೋದರಮಾವನವರಾದ ಶೇಷಗಿರಿ ಹಾನಗಲ್‌ರವರು. ಪುಣೆಯ ಲಾಲಜೀ ಗೋಖಲೆ ಹಾಗು ನಾರಾಯಣರಾವ್ ಇಂದೋರಕರಲ್ಲಿ ತಬಲಾ ವಾದನವನ್ನು ಕಲಿತ ಶೇಷಗಿರಿ ಹಾನಗಲ್ ರವರು ದೇಶದ ಶ್ರೇಷ್ಠ ಸಂಗೀತಗಾರರಿಗೆ ತಬಲಾ ಸಾಥ್ ನೀಡಿದ್ದಾರೆ. ಇವರ ಶಿಷ್ಯವೃಂದದಲ್ಲಿ ರವೀಚಿದ್ರ ಯಾವಗಲ್, ಸೂರಜ ಪುರಂದರೆ, ಗೋಪಾಲಕೃಷ್ಣ ಹೆಗಡೆ, ಸಂಜೀವ ಪೋತದಾರ್, ವಿನಾಯಕ ಪಾಟೀಲ, ಕೆ.ಸ್ವಾಮಿ, ರಾಮಚಂದ್ರ ಉಪಾದೆ, ಸೋಮಶೇಖರ ಹೊಳಗೊಂದಿ, ಎಂ.ನಾಗೇಶರವರು ಪ್ರಮುಖರು.

**ಹಾರ್ಮೋನಿಯಂ ವಾದ್ಯದ ಘರಾಣೆ:** ಹಿಂದೂಸ್ತಾನಿ ಸಂಗೀತದಲ್ಲಿ ಹಾರ್ಮೋನಿಯಂ ವಾದನಕ್ಕೆ ಮಹತ್ತರವಾದ ಸ್ಥಾನ-ಮಾನವಿದೆ. ಗಾಯನದ ಜೊತೆಯಲ್ಲದೇ ಸ್ವತಂತ್ರವಾಗಿಯೂ ಈ ವಾದ್ಯವನ್ನು ನುಡಿಸುತ್ತಾರೆ. ಕರ್ನಾಟಕದಲ್ಲಿ ವಿಠಲರಾವ್ ಕೋರೆಗಾಂವಕರ್, ಅಪ್ಪಜಳಗಂವಕರ, ಹನುಮಂತರಾವರ ವಾಳ್ವೇಕರ, ಗೋವಿಂದರಾವ್ ಟೆಂಬೆ, ರಾಮಭಾವು ಬಿಜಾಪುರೆ, ಗುಂಡೋಪಂಥ ವಾಲವಾಲಕರ, ವಸಂತ ಕನಕಾಪುರ, ವ್ಯಾಸಮೂರ್ತಿ ಕಟ್ಟಿ, ರವೀಂದ್ರ ಕಾಟೋಟಿ, ಸುಧಾಂಶು ಕುಲಕರ್ಣಿ, ಸತೀಶ ಕೊಳ್ಳಿ ಮುಂತಾದವರು ಪ್ರಮುಖರು.

**ವಯಲೀನ್ ವಾದನದ ಘರಾಣೆ:** ಕರ್ನಾಟಕದಲ್ಲಿ ಬಿ.ಎಸ್.ಮಠ, ಅಕ್ಕಮಹಾದೇವಿಮಠ, ವಾದಿರಾಜ ನಿಂಬರಗಿ ಮತ್ತು ಈಶ್ವರ ಮೋರಗೇರಿ ಮುಂತಾದವರು ವಯಲೀನ್ ವಾದನ ಪರಂಪರೆಯನ್ನು ಉಳಿಸಿ-ಬೆಳಸಿದ ಪ್ರಸಿದ್ಧ ಕಲಾವಿದರು.

**ಬಾಂಸುರಿ ವಾದನದ ಘರಾಣೆ:** ದೇವೇಂದ್ರ ಮುರುಡೇಶ್ವರ, ನಿತ್ಯಾನಂದ ಹಳದೀಪುರ, ವೆಂಕಟೇಶ ಗೋಡ್ಖಿಂಡಿ, ಪ್ರವೀಣ ಗೋಡ್ಖಿಂಡಿ, ಶೇಖ್ ಅಬ್ದುಲ್ಲಾ ಖಾಜಿ ಮುಂತಾದವರು ಬಾಂಸುರಿ ವಾದನದಲ್ಲಿ ಕರ್ನಾಟಕದ ಹೆಸರನ್ನು ರಾಷ್ಟ್ರಮಟ್ಟದಲ್ಲಿ ಬಹು ಎತ್ತರಕ್ಕೆ ಏರಿಸಿದ ಕಲಾವಿದರು.

**ದತ್ತವೀಣೆ ವಾದ್ಯದ ಘರಾಣೆ:** ದತ್ತವೀಣೆಯನ್ನು ಆವಿಷ್ಕರಿಸಿದವರು ಬಾಗಲಕೋಟೆ ಜಿಲ್ಲೆಯ ಗುಳೇದಗುಡ್ಡ ಎಂಬ ಗ್ರಾಮದವರಾದ, ನಂತರದಲ್ಲಿ ಹಿಮಾಲಯದ ಹೃಷಿಕೇಶದಲ್ಲಿ ನೆಲೆಸಿದ್ದ ದತ್ತಾತ್ರೇಯ ರಾಮರಾವ್ ಪರ್ವತಿಕರರವರು. ದತ್ತವೀಣೆ ನುಡಿಸುವುದರಲ್ಲಿ ಅಪಾರ ಪಾಂಡಿತ್ಯವನ್ನು ಹೊಂದಿದ ಇವರಿಗೆ ವೀಣಾಬಾಬಾ, ನಾದಯೋಗಿ, ವೀಣಾಮಹಾರಾಜರೆಂಬ ಬಿರುದುಗಳಿವೆ.

**ಬೀನ್ ವಾದ್ಯದ ಘರಾಣೆ:** ಬೀನ್ ವಾದ್ಯವು ಹಿಂದೂಸ್ತಾನಿ ಸಂಗೀತದ ಅಳುವಿನಂಚಿನಲ್ಲಿರುವ ವಾದ್ಯವಾಗಿದ್ದು ಮೊದಲಿಗೆ ಇದು ಗಾಯನದೊಂದಿಗೆ ನುಡಿಸುತ್ತಿದ್ದ ಸಾಥಿವಾದ್ಯವಾಗಿತ್ತು, ಕಾಲಾನಂತರ ಇದು ಸ್ವತಂತ್ರ ವಾದ್ಯವಾಗಿ ನುಡಿಸಲಾಗುತ್ತಿದೆ. ಸೇನಿಯ ಘರಾಣೆಯ ಪರಂಪರೆಯಲ್ಲಿ ಬರುವಂತಹಾ ಈ ವಾದ್ಯವನ್ನು ಕರ್ನಾಟಕದಲ್ಲಿ ಉಳಿಸಿ, ಬೆಳೆಸಿದವರು ಬಿಂಧು ಮಾಧವ ಪಾಠಕರವರು.

# ಅಧ್ಯಾಯ ೫

# ಮಲೆನಾಡು ಪ್ರದೇಶದ ಸರ್ವೇಕ್ಷಣೆ

(ಶಿವಮೊಗ್ಗ ಜಿಲ್ಲೆಯನ್ನು ಅನುಲಕ್ಷಿಸಿ)

# ಅಧ್ಯಾಯ ೫

# ಮಲೆನಾಡು ಪ್ರದೇಶದ ಸರ್ವೇಕ್ಷಣೆ

(ಶಿವಮೊಗ್ಗ ಜಿಲ್ಲೆಯನ್ನು ಅನುಲಕ್ಷಿಸಿ)

## ೫.೧ ಭೌಗೋಳಿಕ ಹಿನ್ನೆಲೆ

ಕರ್ನಾಟಕದ ಹೃದಯ ಭಾಗದಲ್ಲಿರುವ "ಮಲೆನಾಡಿನ ಹೆಬ್ಬಾಗಿಲು" ಎಂದೇ ಪ್ರಸಿದ್ಧವಾದ ಶಿವಮೊಗ್ಗ ಜಿಲ್ಲೆಯು ಕಲೆ ಹಾಗೂ ಸಾಂಸ್ಕೃತಿಕ ನೆಲೆಗಳ ಬೀಡಾಗಿದೆ. ಇಲ್ಲಿಯ ಪ್ರಕೃತಿಯು ಉತ್ತಮ ಹವಾಮಾನವನ್ನು ಹೊಂದಿದ್ದು ಮಳೆಗಾಲದಲ್ಲಿ ಹಸಿರು ಜಿಲ್ಲೆಯ ತುಂಬೆಲ್ಲಾ ಚಿಗುರೊಡೆದು ಭೂಲೋಕದ ಸ್ವರ್ಗದಂತೆ ಕಂಗೊಳಿಸುತ್ತಿರುತ್ತದೆ. ಕರ್ನಾಟಕದಲ್ಲೇ ಅತೀ ಹೆಚ್ಚು ಮಳೆಯಾಗುವ ಆಗುಂಬೆ ಅರಣ್ಯ ಪ್ರದೇಶ ಹಾಗೂ ಜೋಗ ಜಲಪಾತದಂತಹ ಜಗತ್‌ಪ್ರಸಿದ್ಧ ಪ್ರವಾಸಿ ತಾಣಗಳು ಈ ಜಿಲ್ಲೆಯಲ್ಲಿವೆ.

ಗುಡ್ಡ, ಬೆಟ್ಟ, ಹೊಳೆ, ನದಿ, ಕೆರೆ, ಹಳ್ಳ, ಕೊಳ್ಳಗಳೇ ಅಧಿಕವಾಗಿರುವ ಈ ಜಿಲ್ಲೆಯು ಇತ್ತೀಚಿನ ದಶಕಗಳಲ್ಲಿ ರಸ್ತೆ ಸಾರಿಗೆ ಸಂಪರ್ಕ, ರೈಲು ಸಂಪರ್ಕಗಳನ್ನು ಪ್ರಬಲಗೊಳಿಸಿಕೊಂಡು ಪ್ರವಾಸಿಗರನ್ನು ತನ್ನ ಹತ್ತಿರ ಆಕರ್ಷಿಸಿಕೊಳ್ಳುತ್ತಿದೆ.

ಇತ್ತೀಚಿನ ದಿನಗಳಲ್ಲಿ ಹಳ್ಳಿಗಳಿಗೂ ಆಧುನಿಕ ಕಾಲಮಾನದ ವ್ಯಾಪಾರೀಕರಣಗಳ ಸೋಂಕು ತಟ್ಟಿದ್ದು ಭತ್ತ ಕುಟ್ಟುವುದು, ಹಿಟ್ಟು ಬೀಸುವುದು, ಗಾಣ ಹೊಡೆಯುವುದು, ವ್ಯವಸಾಯ ಮಾಡುವುದು, ಹೈನುಗಾರಿಕೆ ಮಾಡುವಂತವುಗಳು ಮಾಯವಾಗುತ್ತಿವೆ.

ಮುಂಜಾನೆಯಿಂದ ಸಾಯಂಕಾಲದವರೆಗೂ ಜೋಡೆತ್ತುಗಳನ್ನು ಕಟ್ಟಿ ಹೊಲಗಳಲ್ಲಿ ದುಡಿಯುವ ರೈತನ ದುಡಿಮೆ ಮೊದಲು ಪ್ರತಿಯೊಂದು ಹಳ್ಳಿಯಲ್ಲೂ ಸರ್ವೇಸಾಮಾನ್ಯವಾಗಿತ್ತು. ಆದರೆ ಇಂದಿನ ದಿನಗಳಲ್ಲಿ ಇವು ಮಾಯವಾಗುತ್ತಿವೆ. ಭಾರತ ದೇಶದ ಬೆನ್ನೆಲುಬಾದ ರೈತ ದುಡ್ಡಿನ ಆಸೆಯ ಬೆನ್ನುಹತ್ತಿ ಹೊಲಗದ್ದೆಗಳನ್ನು ಕಾರ್ಖಾನೆಗಳಿಗೆ ಮಾರುವುದು ಈಗ ಸಾಮಾನ್ಯವಾಗಿದೆ.

ಬದುಕಿನ ಮುಖ್ಯ ಘಟ್ಟವಾದ ಮದುವೆ, ಮುಂಜಿಗಳಲ್ಲಿ ಹಿಂದೆಲ್ಲಾ ಹಿರಿಯ ಮಹಿಳೆಯರ ಹಾಡುಗಳೇ ತುಂಬಿರುತ್ತಿತ್ತು. ಆದರೆ ಇಂದಿನ ದಿನಗಳಲ್ಲಿ ಆ ಹಾಡಿನ ಜಾಗವನ್ನು ಸಿನಿಮಾ

ಕ್ಯಾಸೆಟ್‌ಗಳು ಆಕ್ರಮಿಸಿವೆ. ಹೊಲಗದ್ದೆ, ತೋಟಗಳಿರುವ ಜಾಗದಲ್ಲಿ ಕಾಂಕ್ರೀಟ್ ಕಟ್ಟಡಗಳು ತಲೆ ಎತ್ತುತ್ತಲಿವೆ. ವ್ಯಾಪರೋದ್ಯಮ ಬೆಳೆದಿದೆ. ಹಲವು ಎ.ಟಿ.ಬಿ.ಟಿ. ಕಂಪನಿಗಳ ಕಾರ್ಖಾನೆಗಳು ರೈತಾಪಿ ಜನರ ಜೀವನದಲ್ಲಿ ಬಿರುಗಾಳಿಯನ್ನೇ ಎಬ್ಬಿಸಿದೆ. ಯಾಂತ್ರೀಕೃತ ವ್ಯವಸಾಯ ಪದ್ಧತಿ ರೈತರ ಬದುಕಿನಲ್ಲಿ ತೀವ್ರ ಬದಲಾವಣೆ ತರುತ್ತಿದೆ. ಹಳ್ಳಿಗಳ ಪರಂಪರಾಗತ ಕಲೆಗಳು ಇಂತಹ ಬದಲಾವಣೆಯಲ್ಲಿ ಕಣ್ಮರೆಯಾಗುತ್ತಿವೆ.

ಅರಣ್ಯ ಬೆಳೆಸುವುದರ ಬದಲು ಹಳ್ಳಿಯ ಜನಸಾಮಾನ್ಯರು ಅರಣ್ಯವನ್ನೇ ನಾಶಪಡಿಸಿ ಮಳೆ ಬೆಳೆಗೆ ಹಾನಿಯನ್ನುಂಟುಮಾಡುವಂತಾಗಿದೆ. ದೊಡ್ಡ ಪ್ರಮಾಣದ ಅರಣ್ಯ ಗುತ್ತಿಗೆದಾರರು ಅರಣ್ಯಗಳನ್ನು ಗುತ್ತಿಗೆ ಪಡೆದು ಅರಣ್ಯ ಸಂಪತ್ತನ್ನು ಲೂಟಿ ಮಾಡಿ ತಮ್ಮ ಸಂಪತ್ತನ್ನು ಹೆಚ್ಚಿಸಿಕೊಳ್ಳುತ್ತಿದ್ದಾರೆ. ಇವರು ದೊಡ್ಡ ಪ್ರಮಾಣದ ಅರಣ್ಯ ನಾಶಕ್ಕೂ ಕಾರಣರಾಗಿದ್ದಾರೆ. ಸರ್ಕಾರ ಇಂತವರನ್ನು ಗುರುತಿಸಿ ತಕ್ಕ ಶಿಕ್ಷೆ ನೀಡಬೇಕಾಗಿದೆ.

ಬೆಲೆಬಾಳುವಂತಹ ಶ್ರೀಗಂಧ, ಬೀಟೆ, ಚಂದನ, ಬೆತ್ತ, ಬಿದಿರುಗಳು ಕಣ್ಮರೆಯಾಗಿವೆ. ಇವುಗಳಿಗೆ ಸಂಬಂಧಿಸಿದ ಕರಕುಶಲ ಕೈಗಾರಿಕೆಗಳೂ ಮಾಯವಾಗಿವೆ. ಶ್ರೀಗಂಧ ಹಾಗೂ ಬೀಟೆ ಮರಗಳ ಕರಕುಶಲ ಕಲೆಗಳಿಗೇ ಪ್ರಸಿದ್ಧವಾದ ಸಾಗರ, ಸೊರಬ ತಾಲ್ಲೂಕು ಗುಡಿಗಾರರ ಕುಟುಂಬ ಇಂದು ಕೆಲಸವಿಲ್ಲದೆ ನಿರುದ್ಯೋಗದಿಂದ ತತ್ತರಿಸಿವೆ. ತಮ್ಮ ಮೂಲ ವೃತ್ತಿಯನ್ನು ಬಿಟ್ಟು ಬೇರೆ ವೃತ್ತಿಯಡೆಗೆ ತೆರಳುವಂತಹ ಪರಿಸ್ಥಿತಿ ಬಂದೊದಗಿದೆ.

ಬದಲಾವಣೆ ಆಗಬೇಕು ನಿಜ, ಆದರೆ ನಮ್ಮ ಪೂರ್ವಜರು ಹಾಕಿಕೊಟ್ಟ ಅತ್ಯಮೂಲ್ಯ ಸಂಪ್ರದಾಯಗಳನ್ನು ವ್ಯವಸಾಯ ಪದ್ಧತಿಗಳನ್ನು ಸಾಂಸ್ಕೃತಿಕ ಕಲೆಗಳನ್ನು ಹಾಳುಮಾಡಿ ಈಗಿನ ಹೊಸಬಗೆಯ ಪದ್ಧತಿಗಳನ್ನು ಆಧುನಿಕತೆಗಳು ಜನರಜೀವನದಲ್ಲಿ ಹೊಕ್ಕು ಇಲ್ಲಿನ ಶ್ರೀಸಾಮಾನ್ಯರ ಕನಸುಗಳನ್ನು ಹಾಳು ಮಾಡಿದೆ.

ಎಷ್ಟೇ ಕಷ್ಟ ಬಂದರೂ ಸಹ ಇಲ್ಲಿನ ಕಷ್ಟಗಳನ್ನು ಎದುರಿಸುವವರು ಶ್ರೀಸಾಮಾನ್ಯರು, ಮಧ್ಯಮವರ್ಗದವರು ಹಾಗೂ ಬಡಕುಟುಂಬದವರು.

ಜೀವನವೇ ದುಸ್ತರವಾದಾಗ ಕಲೆಗಳಂತಹ ಸೃಜನಶೀಲತೆಯನ್ನು ಬೆಳೆಸಿಕೊಂಡು ಹೋಗುವುದೇ ಕಷ್ಟದ ಕೆಲಸವಾಗಿದೆ. ಬಡ ಅಶಕ್ತ ಕಲಾವಿದರನ್ನು ಗುರುತಿಸಿ ಪ್ರೋತ್ಸಾಹಿಸಿ ಅವರಿಗೆ ಜೀವಿಸುವ ಆಸೆ ಹುಟ್ಟಿಸುವ ಕೆಲಸ ಸರ್ಕಾರ ಹಾಗೂ ಕಲಾರಸಿಕರು, ಕಲಾಪೋಷಕರು, ಸಂಘ, ಸಂಸ್ಥೆಗಳು ಮಾಡಬೇಕಾಗಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಸಂಗೀತ ನೃತ್ಯ ಅಕಾಡೆಮಿಗಳೂ ಇಂತಹ ಕೆಲಸವನ್ನು ಪ್ರಾಮಾಣಿಕವಾಗಿ ಮಾಡಬೇಕಾಗಿದೆ. ಪಾಶ್ಚಾತ್ಯ ಶಿಕ್ಷಣ ಹಾಗೂ ಆಧುನಿಕತೆಯಿಂದ ನಮ್ಮ ಹಲವಾರು ಕಲೆಗಳು ಮಾರ್ಪಾಡು ಹೊಂದುವುದರ ಜೊತೆ ಜೊತೆಗೆ ಹಲವು ಪರಂಪರಾಗತ

ಕಲೆಗಳು ಮಾಯವಾಗಿ ಹೋಗಿವೆ. ಇಂತಹ ಕಲೆಗಳನ್ನು ಪರಂಪರಾಗತವಾಗಿ ಬೆಳೆಯಲು ಹಾಗೂ ಇದನ್ನು ಬೆಳೆಸಲು, ಉಳಿಸಲು ಈಗಿನ ಪ್ರಜ್ಞಾವಂತ ನಾಗರಿಕರು, ಯುವ ಪೀಳಿಗೆಯವರು ಸಹಕರಿಸುವುದು ಅವಶ್ಯವಾಗಿದೆ.

ಭದ್ರಾವತಿ, ಶಿವಮೊಗ್ಗ, ತೀರ್ಥಹಳ್ಳಿ, ಸಾಗರ, ಹೊಸನಗರ, ಸೊರಬ, ಶಿಕಾರಿಪುರ ಹೀಗೆ ಶಾಸ್ತ್ರೀಯ ಸಂಗೀತದ ಸಪ್ತಕದಲ್ಲಿರುವ ಏಳು ಸ್ವರಗಳಂತೆ ಏಳು ತಾಲ್ಲೂಕುಗಳನ್ನು ಶಿವಮೊಗ್ಗ ಜಿಲ್ಲೆ ಒಳಗೊಂಡಿದೆ. ಕಲೆಯ ತವರೂರಾದ ಈ ಜಿಲ್ಲೆಯಲ್ಲಿ ಕಲೆಯು ಪ್ರತಿಯೊಬ್ಬ ವ್ಯಕ್ತಿಯ ಮೈ ಮನಸ್ಸಿನಲ್ಲಿ ಹಾಸುಹೊಕ್ಕಿದೆ. ಪ್ರತಿ ಹಳ್ಳಿ ಹಳ್ಳಿಗಳಲ್ಲಿ ನಗರ ಪಟ್ಟಣಗಳಲ್ಲಿ ಸಾಂಸ್ಕೃತಿಕ ಕಲೆಗಳ ಕವಿಗಳು, ಸಂಗೀತಗಾರರು, ರಂಗ ಕಲಾವಿದರು ಕಲೆಯನ್ನು ಪ್ರೋತ್ಸಾಹಿಸಿ ಎಲ್ಲ ರಂಗಗಳಲ್ಲಿ ತಮ್ಮ ಛಾಪನ್ನು ಮೂಡಿಸಿದ್ದಾರೆ.

**ಶಿವಮೊಗ್ಗ:** ಶಿವಮೊಗ್ಗ ನಗರವು ಕರ್ನಾಟಕ ರಾಜ್ಯದ ಒಂದು ಮಹಾನಗರವಾಗಿದ್ದು, ಇದು ಈ ಜಿಲ್ಲೆಯ ರಾಜಧಾನಿಯಾಗಿದೆ. ಶಿವಮೊಗ್ಗ ಜಿಲ್ಲೆ ಕರ್ನಾಟಕದ ನಿಸರ್ಗಭರಿತ ಮಲೆನಾಡಿನ ಒಂದು ಭಾಗವಾಗಿದೆ.

ಸಹ್ಯಾದ್ರಿ ಪರ್ವತಶ್ರೇಣಿ ಮತ್ತು ಅಲ್ಲಿ ಉಗಮಗೊಳ್ಳುವ ನದಿ–ಉಪನದಿಗಳು ಶಿವಮೊಗ್ಗಕ್ಕೆ ಯಥೇಚ್ಛ ನೈಸರ್ಗಿಕ ಸೌಂದರ್ಯವನ್ನು ತಂದುಕೊಟ್ಟಿವೆ. ಶಿವಮೊಗ್ಗ ನಗರದಿಂದ ೧೧೩ ಕಿ.ಮೀ. ದೂರದಲ್ಲಿರುವ ಜಗತ್ ಪ್ರಸಿದ್ಧ ಜೋಗ ಜಲಪಾತ ಪ್ರಕೃತಿಯ ಒಂದು ಅಪೂರ್ವ ದೃಶ್ಯ. ಇಲ್ಲಿ ಶರಾವತಿ ನದಿಯು ೨೩೫ ಮೀ. ಎತ್ತರದಿಂದ ಸುಮನೋಹರವಾಗಿ ಧುಮುಕುತ್ತದೆ. ರಾಜ, ರಾಣಿ, ರೋರರ್ ಮತ್ತು ರಾಕೆಟ್ ಎಂಬ ನಾಲ್ಕು ವಿಭಿನ್ನ ಪ್ರವಾಹಗಳಾಗಿ ಧುಮುಕುವ ಶರಾವತಿ ಏಷ್ಯದ ಅತಿ ಎತ್ತರದ ಜಲಪಾತವನ್ನು ನಿರ್ಮಿಸಿದೆ. ಮಳೆಗಾಲದ ಸಮಯದಲ್ಲಿ ಕಾಮನ ಬಿಲ್ಲುಗಳನ್ನು ನಿರ್ಮಿಸಿಕೊಂಡು ಅತ್ಯದ್ಭುತ ದೃಶ್ಯವನ್ನು ಈ ಜಲಪಾತ ಪ್ರದರ್ಶಿಸುತ್ತದೆ. ತುಂಗಭದ್ರಾ, ಶರಾವತಿ, ಕುಮುದ್ವತಿ ಮತ್ತು ಇತರ ನದಿಗಳಿಂದ ಜಲಸರಬರಾಜಿನ ಸೌಕರ್ಯವುಳ್ಳ ಶಿವಮೊಗ್ಗ ಜಿಲ್ಲೆ 'ಕರ್ನಾಟಕದ ಅನ್ನದ ಬಟ್ಟಲು' ಎನ್ನಿಸಿಕೊಂಡಿದೆ.

ಶಿವಮೊಗ್ಗ ಎಂಬ ಹೆಸರು 'ಶಿವ–ಮುಖ' ಎಂಬ ಪದಪುಂಜದಿಂದ ಬಂದದ್ದು. ಇನ್ನೊಂದು ಉಕ್ತಿಯಂತೆ ಇದು 'ಸಿಹಿ–ಮೊಗೆ'(ಸಿಹಿಯಾದ ಮೊಗ್ಗು) ಎಂದಿದ್ದು, ಅದು 'ಶಿವಮೊಗ್ಗ'ವಾಗಿ ಮಾರ್ಪಾಟು ಹೊಂದಿದೆ. ಈ ಪ್ರದೇಶವು ಕ್ರಿ.ಪೂ. ೩ನೇ ಶತಮಾನದಲ್ಲಿ ಸಾಮ್ರಾಟ್ ಅಶೋಕನ ಮೌರ್ಯ ಸಾಮ್ರಾಜ್ಯದ ದಕ್ಷಿಣದ ತುದಿಯಾಗಿತ್ತು. ಮುಂದಿನ ಶತಮಾನಗಳಲ್ಲಿ ಅನೇಕ ರಾಜಮನೆತನಗಳ ಆಳ್ವಿಕೆಯಲ್ಲಿ ಈ ಪ್ರದೇಶ ಇತ್ತು. ೪ನೇ ಶತಮಾನದಲ್ಲಿ ಕದಂಬರು, ೬ನೇ ಶತಮಾನದಲ್ಲಿ ಚಾಲುಕ್ಯರು ಮತ್ತು ಅವರ ಸಾಮಂತರಾದ ಗಂಗರು, ೮ನೇ ಶತಮಾನದಲ್ಲಿ

ರಾಷ್ಟ್ರಕೂಟರು, ೧೧ನೇಯ ಶತಮಾನದಲ್ಲಿ ಹೊಯ್ಸಳರು ಮತ್ತು ೧೫ನೇ ಶತಮಾನದಲ್ಲಿ ವಿಜಯನಗರದ ಅರಸರು ಈ ಪ್ರದೇಶವನ್ನು ಆಳಿದ ರಾಜಮನೆತನಗಳಲ್ಲಿ ಪ್ರಮುಖರು. ಶಿವಮೊಗ್ಗ ನಗರಕ್ಕೆ ಸ್ವತಂತ್ರ ವ್ಯಕ್ತಿತ್ವ ಬಂದದ್ದು ೧೬ನೇ ಶತಮಾನದ ಕೆಳದಿ ನಾಯಕರ ಆಳ್ವಿಕೆಯಲ್ಲಿ. ೧೭ನೇ ಶತಮಾನದ ನಂತರ ಭಾರತ ಸ್ವಾತಂತ್ರ್ಯದವರೆಗೂ ಶಿವಮೊಗ್ಗ ಮೈಸೂರು ಸಂಸ್ಥಾನದ ಭಾಗವಾಗಿತ್ತು.

**ತೀರ್ಥಹಳ್ಳಿ:** ಶಿವಮೊಗ್ಗ ಜಿಲ್ಲೆಯ ತಾಲ್ಲೂಕುಗಳಲ್ಲಿ ಒಂದಾದ ತೀರ್ಥಹಳ್ಳಿಯು ಈ ತಾಲೂಕಿನ ಆಡಳಿತ ಕೇಂದ್ರವಾಗಿದೆ. ಶಿವಮೊಗ್ಗ ಜಿಲ್ಲೆಯ ನೈರುತ್ಯ ತುದಿಯಲ್ಲಿರುವ ತೀರ್ಥಹಳ್ಳಿ, ಅಗ್ರಹಾರ, ಆಗುಂಬೆ, ಮುತ್ತೂರು, ಮಂಡಗದ್ದೆ ಇವು ಈ ತಾಲ್ಲೂಕಿನ ಹೋಬಳಿಗಳು. ತುಂಗಾ ನದಿಯ ತೀರದಲ್ಲಿರುವ ತೀರ್ಥಹಳ್ಳಿ ಪಟ್ಟಣವು ಜಿಲ್ಲಾ ಕೇಂದ್ರವಾದ ಶಿವಮೊಗ್ಗದಿಂದ ೬೧ ಕಿ.ಮಿ. ದೂರದಲ್ಲಿದೆ. ಸಂಪೂರ್ಣವಾಗಿ ಮಲೆನಾಡಿನ ಮಡಿಲಿನಲ್ಲಿರುವ ತೀರ್ಥಹಳ್ಳಿ ತಾಲೂಕು ಕರ್ನಾಟಕ ರಾಜ್ಯದಲ್ಲಿಯೇ ಅತೀ ಹೆಚ್ಚು ಮಳೆ ಬೀಳುವ ಪ್ರದೇಶಗಳಲ್ಲಿ ಒಂದು.

ತೀರ್ಥಹಳ್ಳಿ ತಾಲ್ಲೂಕಿನಾದ್ಯಂತ ಸಹ್ಯಾದ್ರಿಯ ನಿತ್ಯಹರಿದ್ವರ್ಣದ ದಟ್ಟ ಅರಣ್ಯವಿದೆ. ಅಡಿಕೆ ಇಲ್ಲಿನ ಮುಖ್ಯ ಬೆಳೆಗಳಲ್ಲೊಂದು. ಅಡಿಕೆ ತೋಟಗಳಲ್ಲಿ ಉಪ ಬೆಳೆಗಳಾಗಿ ಏಲಕ್ಕಿ, ಕಾಳುಮೆಣಸು ಮತ್ತು ಬಾಳೆಯನ್ನು ಬೆಳೆಯುತ್ತಾರೆ. ತಾಲ್ಲೂಕಿನ ಪಶ್ಚಿಮ ಭಾಗ ಪಶ್ಚಿಮ ಘಟ್ಟದ ಪ್ರದೇಶವಾಗಿದ್ದು, ಕವಲೇದುರ್ಗ, ಕಬ್ಬಿಣದ ಗುಡ್ಡ ಮತ್ತು ಕುಂದರಗುಡ್ಡ ಇಲ್ಲಿಯ ಬೆಟ್ಟಗಳು. ಪ್ರಕೃತಿ ಸೌಂದರ್ಯಕ್ಕೆ ಪ್ರಸಿದ್ಧವಾಗಿರುವ ಆಗುಂಬೆ ಘಾಟಿ ಈ ತಾಲ್ಲೂಕಿನ ನೈಋತ್ಯ ಭಾಗದಲ್ಲಿದೆ. ಕಬ್ಬಿಣದ ಗುಡ್ಡದ ಕಬ್ಬಿಣ ಅದಿರು ಉತ್ತಮ ದರ್ಜೆಯದ್ದಾಗಿದೆ. ಈ ತಾಲ್ಲೂಕು ಪಶ್ಚಿಮದಿಂದ ಪೂರ್ವಕ್ಕೆ ಇಳಿಜಾರಾಗಿದೆ. ತುಂಗಾ ಈ ತಾಲ್ಲೂಕಿನ ಪ್ರಧಾನ ನದಿ. ಮಾಲತಿ ಮುಂತಾದ ಹಳ್ಳಗಳು ಇದನ್ನು ಸೇರುತ್ತವೆ. ಪಶ್ಚಿಮ ಭಾಗದ ದಟ್ಟ ಕಾಡು ಇತ್ತೀಚೆಗೆ ಕಡಿಮೆಯಾಗುತ್ತಿದೆ. ಅಡಿಕೆ ತೋಟ ಮತ್ತು ಎಲೆಗೊಬ್ಬರಕ್ಕಾಗಿ ಕಾಡನ್ನು ಸವರುವುದು ಹೆಚ್ಚಾಗಿದೆ. ಇಲ್ಲಿಯ ಕಾಡಿನಲ್ಲಿ ಕರಿಮರ, ಹೊನ್ನೆ, ತೇಗ, ಗಂಧ, ನಂದಿ ಮುಂತಾದ ಬೆಲೆಬಾಳುವ ಮರಗಳು ಬೆಳೆಯುತ್ತವೆ. ಈ ಅರಣ್ಯ ಭಾಗದಲ್ಲಿ ಕಾಡುಕೋಣ, ಹಂದಿ, ಹುಲಿ, ಚಿರತೆ, ಕರಡಿ ಇತ್ಯಾದಿ ಪ್ರಾಣಿಗಳಿವೆ. ಬೆಟ್ಟ ಪ್ರದೇಶದಲ್ಲಿ ಜೇಡಿಮಣ್ಣು ಇದ್ದರೆ, ಉತ್ತರ ಭಾಗದ ಬಯಲಿನಲ್ಲಿ ಕರಿಮಣ್ಣು ಹೆಚ್ಚಾಗಿದೆ.

ಭತ್ತ, ಅಡಿಕೆ, ಏಲಕ್ಕಿ, ಮೆಣಸು ಇಲ್ಲಿಯ ಮುಖ್ಯ ಬೆಳೆಗಳು. ತಾಲ್ಲೂಕಿನ ಬೇರೆ ಬೇರೆ ಭಾಗಗಳಲ್ಲಿ ಭೂಮಿ ಮತ್ತು ನೀರಾವರಿ ಸೌಲಭ್ಯವನ್ನು ಅನುಸರಿಸಿ ರಾಗಿ, ಜೋಳ, ತೊಗರಿ, ಕಬ್ಬು, ಮೆಣಸಿನ ಕಾಯಿಗಳನ್ನು ಬೆಳೆಯುತ್ತಾರೆ. ತಾಲ್ಲೂಕಿನಲ್ಲಿ ಜೇನುಸಾಕಣೆ ತುಂಬ ಜನಪ್ರಿಯವಾಗಿದೆ. ತೀರ್ಥಹಳ್ಳಿಯಲ್ಲಿರುವ ಜೇನು ಸಾಕಣೆದಾರರ ಸಹಕಾರ ಸಂಘ ಇಡೀ ಜಿಲ್ಲೆಯಲ್ಲಿ ಮಾತ್ರವಲ್ಲದೇ ಪಕ್ಕದ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ, ನರಸಿಂಹರಾಜಪುರ ಹಾಗೂ ಶೃಂಗೇರಿ ತಾಲ್ಲೂಕುಗಳಲ್ಲೂ ತನ್ನ ಕ್ಷೇತ್ರವನ್ನು ವಿಸ್ತರಿಸಿದೆ.

**ಭದ್ರಾವತಿ:** ಶಿವಮೊಗ್ಗ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾದ ಭದ್ರಾವತಿಯು ಶಿವಮೊಗ್ಗ ಜಿಲ್ಲೆಯಲ್ಲಿರುವ ಒಂದು ಕೈಗಾರಿಕಾ ಪಟ್ಟಣ. ಕರ್ನಾಟಕ ರಾಜ್ಯದ 'ಉಕ್ಕಿನ ನಗರ'ವೆಂದು ಭದ್ರಾವತಿಯನ್ನು ಕರೆಯಲಾಗಿದೆ. ಇತ್ತೀಚಿನ ಚರಿತ್ರೆಯಲ್ಲಿ ಭದ್ರಾವತಿಯು ೧೯೧೮ರಲ್ಲಿ ಸ್ಥಾಪಿಸಲಾದ ಮೈಸೂರು ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯಿಂದ ಹೆಸರಾಯಿತು. ಅನಂತರ ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆ ಎಂದು ನಾಮಕರಣಗೊಂಡ ಇದು ಒಂದು ದೊಡ್ಡ ಕಬ್ಬಿಣ ಮತ್ತು ಉಕ್ಕು ಉತ್ಪಾದಿಸುವ ಸೌಕರ್ಯ ಹೊಂದಿದ್ದು, ಭದ್ರಾವತಿಯ ಮುಖ್ಯ ಭಾಗವಾಗಿದೆ. ಕಾರ್ಖಾನೆಗಳ ಪಟ್ಟಣ ಎಂಬ ಪ್ರಖ್ಯಾತಿಯನ್ನು ಇನ್ನೂ ಹೆಚ್ಚಿಸಿದ್ದು ೧೯೩೬ರಲ್ಲಿ ಸ್ಥಾಪಿಸಲಾದ ಮೈಸೂರು ಕಾಗದ ಕಾರ್ಖಾನೆಯಿಂದ 'ಭದ್ರಾವತಿ' ಎಂಬ ಹೆಸರು ಈ ಪಟ್ಟಣದ ಮೂಲಕ ಹರಿಯುವ ಭದ್ರಾ ನದಿಯಿಂದ ಬಂದಿದೆ. ಈ ಹಿಂದೆ ಬೆಂಕಿಪುರ ಅಥವಾ ವಂಕಿಪುರ, ವೆಂಕಿಪುರ ಎಂಬುದು ಈ ಪಟ್ಟಣದ ಹೆಸರಾಗಿತ್ತು. ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಸರ್ ಎಂ. ವಿಶ್ವೇಶ್ವರಯ್ಯನವರು ಇಲ್ಲಿ ಕಬ್ಬಿಣದ ಕಾರ್ಖಾನೆಯನ್ನು ಸ್ಥಾಪಿಸಿದ ಮೇಲೆ ಭದ್ರಾವತಿ ಎಂಬ ಈ ಹೊಸ ಹೆಸರು ಈ ಊರಿಗೆ ಬಂದಿತೆಂದು ಹೇಳಲಾಗುತ್ತದೆ. ಹತ್ತೊಂಬತ್ತನೆಯ ಶತಮಾನದ ಕೊನೆಯವರೆಗೂ ಈ ಊರಿಗೆ ಬೆಂಕಿಪುರವೆಂದು ಕರೆಯುತ್ತಿದ್ದರು. ಈ ಬೆಂಕಿಪುರವೆಂಬ ಹೆಸರಿಗೂ ಬೆಂಕಿಗೂ ಯಾವ ಸಂಬಂಧವೂ ಇಲ್ಲ. ಈ ಬೆಂಕಿಪುರ ಎಂಬ ಪದವು ವಂಕೀಪುರ ಎನ್ನುವ ಹೆಸರಿನ ಅಪಭ್ರಂಶವಷ್ಟೆ.

ಚಿಕ್ಕಮಗಳೂರು ಜಿಲ್ಲೆಯ ಕುದುರೆಮುಖದ ಬಳಿ ಸಹ್ಯಾದ್ರಿಯ ಒಡಲಲ್ಲಿ ತನ್ನ ಉಗಮಸ್ಥಾನ ಹೊಂದಿರುವ ಭದ್ರಾನದಿಯು ಉತ್ತರಾಭಿಮುಖವಾಗಿ ಹರಿದು ಭದ್ರಾವತಿ ನಗರವನ್ನು ದಕ್ಷಿಣ ದಿಕ್ಕಿನಿಂದ ಪ್ರವೇಶಿಸುತ್ತದೆ. ಹೀಗೆ ಪ್ರವೇಶಿಸುವಾಗ, ಉತ್ತರ ದಿಕ್ಕಿನಿಂದ ಪಶ್ಚಿಮ ದಿಕ್ಕಿಗೆ ಎಡಕ್ಕೆ ತಿರುಗಿ ಪಶ್ಚಿಮ ವಾಹಿನಿಯಾಗುತ್ತದೆ. ಉತ್ತರ ದಿಕ್ಕಿನಿಂದ ಪಶ್ಚಿಮ ದಿಕ್ಕಿಗೆ ತಿರುಗುವ ಈ ತಿರುವಿಗೆ ಚಕ್ರತೀರ್ಥ ಎನ್ನುತ್ತಾರೆ. ಈ ಚಕ್ರತೀರ್ಥದ ಬಳಿ ಪುರಾಣ ಪ್ರಸಿದ್ಧ ವಂಕೀ ಮಹರ್ಷಿಗಳ ಆಶ್ರಮವಿತ್ತಂತೆ. ಈ ವಂಕೀ ಮಹರ್ಷಿಗಳು ಶ್ರೀ ಲಕ್ಷ್ಮೀ ನರಸಿಂಹ ಸ್ವಾಮಿಯನ್ನು ಕುರಿತು ತಪಸ್ಸನ್ನು ಆಚರಿಸುತ್ತಾರೆ. ನರಸಿಂಹಸ್ವಾಮಿಯು ಈ ಋಷಿಗಳಿಗೆ ದರ್ಶನವಿತ್ತು, "ಪಶ್ಚಿಮವಾಹಿನಿಯಾದ ಭದ್ರೆಯ ಯಾವ ಪವಿತ್ರ ಕ್ಷೇತ್ರದಲ್ಲಿ ನೀನು ತಪಸ್ಸನ್ನು ಆಚರಿಸಿದೆಯೋ ಆ ಕ್ಷೇತ್ರದಲ್ಲಿ ನಾನು ಸ್ಥಿರವಾಗಿ ನೆಲೆಸಿ ಭಕ್ತರ ಅಭೀಷ್ಟೆಗಳನ್ನು ಈಡೇರಿಸುವೆನು" ಎಂದು ಹೇಳಿದನೆಂದು ಪ್ರತೀತಿ. ಮುಂದೆ ಹದಿಮೂರನೇ ಶತಮಾನದಲ್ಲಿ ಹೊಯ್ಸಳರ ವೀರನರಸಿಂಹನು(ವಿಷ್ಣುವರ್ಧನನ ಮೊಮ್ಮಗ ಮತ್ತು ಎರಡನೇ ಬಲ್ಲಾಳನ ಮಗ) ವಂಕೀ ಮಹರ್ಷಿ ಮತ್ತು ಲಕ್ಷ್ಮೀನರಸಿಂಹ ಸ್ಥಳ ಪುರಾಣವಿದ್ದ ಈ ಪ್ರದೇಶದಲ್ಲಿ ಭವ್ಯವಾದ ಲಕ್ಷ್ಮೀನರಸಿಂಹ ದೇವಾಲಯವನ್ನು ಹೊಯ್ಸಳ ಶಿಲ್ಪಕಲಾ ಮಾದರಿಯಲ್ಲಿ ಕಟ್ಟಿಸಿ ಕ್ರಿ.ಶ.

೧೨೨೪ನೇ ಇಸವಿಯ ವ್ಯಯನಾಮ ಸಂವತ್ಸರದ ದ್ವಿತೀಯ ಶುದ್ಧ ತ್ರಯೋದಶಿಯಂದು ಲೋಕಾರ್ಪಣೆ ಮಾಡಿದನು. ಇಂದಿಗೂ ಈ ದೇವಾಲಯ ಭದ್ರಾವತಿಯ ಹಳೇನಗರದಲ್ಲಿದ್ದು, ಭಾರತೀಯ ಪುರಾತತ್ವ ಇಲಾಖೆಯ ವ್ಯಾಪ್ತಿಯಲ್ಲಿ ಐತಿಹಾಸಿಕ ಸ್ಮಾರಕವೆಂದು ಘೋಷಿಸಲ್ಪಟ್ಟಿದೆ. ಈ ಊರಿಗೆ ವಂಕೀಪುರ ಎಂಬ ಹೆಸರು ಇತ್ತೆಂಬುದಕ್ಕೆ ಇಂಬು ಕೊಡುವಂತೆ, ಶ್ರೀಲಕ್ಷ್ಮೀನರಸಿಂಹನ ಬಗ್ಗೆ ಒಂದು ಶ್ಲೋಕವಿದೆ. ಅದೆಂದರೆ "ಮಂಗಲಂ ಸ್ತಂಭ ಡಿಂಭಾಯ, ಮಂಗಲಂ ಮೃತ್ಯು ಮೃತ್ಯವೇ, ವಂಕೀಪುರ ನಿವಾಸಾಯ, ನರಸಿಂಹಾಯ ಮಂಗಲಂ" ಎಂದು ಈ ಶ್ಲೋಕವನ್ನು ಇಂದಿಗೂ ದೇವಾಲಯ ದ್ವಾರದಲ್ಲಿ ಕಾಣಬಹುದು. ಹದಿನಾಲ್ಕನೇ ಶತಮಾನದಿಂದ ಈಚೆಗೆ ಈ ಊರಿಗೆ ಲಕ್ಷ್ಮೀಪುರ, ಲಕ್ಷ್ಮೀನರಸಿಂಹಪುರ, ಭದ್ರಾಪುರ ಇನ್ನೂ ಮುಂತಾದ ಹೆಸರುಗಳಿದ್ದವು ಎಂಬುದಕ್ಕೆ ಸಾಕಷ್ಟು ಪುರಾವೆಗಳಿವೆ. ಇಷ್ಟೆಲ್ಲಾ ಹೆಸರುಗಳಿದ್ದೂ ವಂಕೀಪುರವೆಂಬ ಹೆಸರೇ ರೂಢಿಯಲ್ಲಿ ಉಳಿದುಕೊಂಡು ಕಾಲಕ್ರಮೇಣ ಜನರ ಬಾಯಲ್ಲಿ ಅದು ಬೆಂಕಿಪುರವಾದದ್ದು, ತದನಂತರ ನಾಲ್ವಡಿ ಕೃಷ್ಣರಾಜ ಒಡೆಯರ್ ಆಳ್ವಿಕೆಯ ಕಾಲದಲ್ಲಿ ಭದ್ರಾವತಿ ಎಂದು ಮರುನಾಮಕರಣಗೊಂಡಿತು.

**ಶಿಕಾರಿಪುರ:** ಶಿಕಾರಿಪುರವು ಶಿವಮೊಗ್ಗ ಜಿಲ್ಲೆಯಲ್ಲಿರುವ ಒಂದು ತಾಲ್ಲೂಕು ಕೇಂದ್ರ, ಹಾಗು ಈ ತಾಲ್ಲೂಕಿನ ಆಡಳಿತ ಕೇಂದ್ರವಾಗಿದೆ. ಕರ್ನಾಟಕ ರಾಜ್ಯದ ಅರೆಮಲೆನಾಡು ಭಾಗದಲ್ಲಿರುವ ಈ ಒಂದು ಊರು ಕುಮದ್ವತಿ ನದಿಯ ಬಲದಂಡೆಯ ಮೇಲಿದೆ. ಶಿಕಾರಿಪುರದ ಸಮೀಪದಲ್ಲಿ ಹರಿಯುವ ಕುಮದ್ವತಿ ನದಿಯನ್ನು ಗೌರಿಹಳ್ಳ ಎಂದೂ ಕರೆಯುವರು. ಅಂಜನಪುರ, ಶಿಕಾರಿಪುರ, ಹೊಸೂರು, ಉಡುತಡಿ ಮತ್ತು ತಾಳಗುಂದ ಎಂಬ ಹೋಬಳಿಗಳು ಈ ತಾಲ್ಲೂಕಿನಲ್ಲಿವೆ.

ಈ ತಾಲ್ಲೂಕು ಮಲೆನಾಡು ಮತ್ತು ಮೈದಾನಗಳ ಮಧ್ಯ ಪ್ರದೇಶದಲ್ಲಿರುವುದರಿಂದ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ದಟ್ಟ ಕಾಡುಗಳೂ ಪೂರ್ವದ ಕಡೆ ತೆಳುವಾದ ಕುರುಚಲು ಕಾಡೂ ಕಂಡು ಬರುತ್ತದೆ. ಇಲ್ಲಿನ ಕಾಡುಗಳಲ್ಲಿ ಮತ್ತಿ, ಹೊನ್ನೆ, ನಂದಿ, ಬಿಲ್ವಾರ, ತಾರೆ, ಕಣಿಗಲು, ಶ್ರೀಗಂಧ, ಬೇವು, ದಿಂಡಿಗ, ಅಳಲೆ, ಹೊಂಗೆ, ಜಾಲಿ, ಕಾರೆ ಇತ್ಯಾದಿ ಮರಗಿಡಗಳಿವೆ.

ಕುಮುದ್ವತಿ ಈ ತಾಲ್ಲೂಕಿನ ಮುಖ್ಯ ನದಿ. ಹುಂಚದ ಹತ್ತಿರ ಅಗಸ್ತ್ಯ ಪರ್ವತದಲ್ಲಿ(ಬಿಲೇಶ್ವರಬೆಟ್ಟ) ಹುಟ್ಟಿ ಉತ್ತರಾಭಿಮುಖವಾಗಿ ಹೊಸನಗರ ತಾಲ್ಲೂಕಿನ ಈಶಾನ್ಯ ಭಾಗದಲ್ಲಿ ಹರಿದು, ಮುಂದೆ ಶಿವಮೊಗ್ಗ ತಾಲ್ಲೂಕಿನ ಕುಂಸಿ ಮೂಲಕ ಶಿಕಾರಿಪುರ ತಾಲ್ಲೂಕನ್ನು ದಕ್ಷಿಣದಲ್ಲಿ ಪ್ರವೇಶಿಸಿ, ಅಂಜನಪುರ ಜಲಾಶಯಕ್ಕೆ ನೀರೊದಗಿಸಿ, ಮುಂದೆ ಶಿಕಾರಿಪುರವನ್ನು ಬಳಸಿಕೊಂಡು ತಾಲ್ಲೂಕು ಮತ್ತು ಜಿಲ್ಲೆಯ ಎಲ್ಲೆಯಲ್ಲಿರುವ ಮದಗದ ಕೆರೆಗೆ ಜಲಾಶ್ರಯ ನೀಡಿ ಮುಂದುವರಿದು ತುಂಗಭದ್ರಾ ನದಿಯನ್ನು ಕುಮುದ್ವತಿ ನದಿ ಸೇರುತ್ತದೆ. ಈ ನದಿಗೆ ಚೊರಾಡಿ ನದಿ ಎಂದೂ ಹೆಸರಿದೆ. ತಾಲ್ಲೂಕಿನಲ್ಲಿ ಅಂಜನಪುರ ಜಲಾಶಯದಿಂದ ಕುಮುದ್ವತಿ ನದಿಯ ಉಪನದಿ ಸಾಲೂರು ಹಳ್ಳಕ್ಕೆ

ಅಡ್ಡಲಾಗಿ ಕಟ್ಟಿರುವ ಅಂಬ್ಲಿಗೋಳ ಜಲಾಶಯದಿಂದಲೂ ತಾಲ್ಲೂಕಿನ ಅಂಚಿನಲ್ಲಿರುವ ಮದಗದ ಕೆರೆಯಿಂದಲೂ ನೀರಾವರಿಗೆ ನೀರೊದಗುವುದು.

ಈ ತಾಲ್ಲೂಕಿನಲ್ಲಿ ಬತ್ತ, ರಾಗಿ, ಕಬ್ಬು, ಹತ್ತಿ, ನೆಲಗಡಲೆ ಬೆಳೆಯುವರು. ಅಡಿಕೆ ಮತ್ತು ತೆಂಗು ತೋಟದ ಬೆಳೆಗಳು. ಇತ್ತೀಚೆಗೆ ವೆನಿಲಾ ಬೆಳೆಸುತ್ತಿದ್ದಾರೆ. ಗೇರುಬೀಜ, ಮೆಣಸಿನಕಾಯಿ, ವಿವಿಧ ಬಗೆಯ ಹಣ್ಣು ಮತ್ತು ತರಕಾರಿಗಳನ್ನು ಬೆಳೆಯುತ್ತಾರೆ. ಜೊತೆಗೆ ಅವರೆ, ಹೆಸರು, ತೊಗರಿ ಮುಂತಾದ ದ್ವಿದಳಧಾನ್ಯಗಳನ್ನೂ ಬೆಳೆಯುವುದುಂಟು.

ಸಸ್ಯ ಸಮೃದ್ಧಿಯೊಂದಿಗೆ ಈ ತಾಲ್ಲೂಕಿನಲ್ಲಿ ಪಶುಸಂಪತ್ತೂ ಸಾಕಷ್ಟು ಇದೆ. ಸ್ವಲ್ಪಮಟ್ಟಿಗೆ ಮತ್ಸ್ಯೋದ್ಯಮವಿದೆ. ಮರಕೊಯ್ಯುವುದು, ಹೆಂಚಿನ ತಯಾರಿಕೆ, ಎಣ್ಣೆ ತೆಗೆಯುವುದು ಇವು ಈ ತಾಲ್ಲೂಕಿನ ಮುಖ್ಯ ಉದ್ಯಮಗಳು. ಬಿದಿರು, ಚರ್ಮ, ಕಬ್ಬಿಣ ಕೈಗಾರಿಕೆಗಳೂ ಉಂಟು.

**ಸಾಗರ:** ಸಾಗರ ಅಥವಾ ಸಾಗರ–ಜಂಬಗಾರು ಶಿವಮೊಗ್ಗ ಜಿಲ್ಲೆಯ ಒಂದು ನಗರ ಮತ್ತು ಅದೇ ಹೆಸರಿನ ಉಪವಿಭಾಗೀಯ ಮತ್ತು ತಾಲೂಕು ಆಡಳಿತ ಕೇಂದ್ರ, ಸಾಗರ ನಗರವು ಮಲೆನಾಡು ಪ್ರದೇಶದ ವ್ಯಾಪ್ತಿಗೊಳಪಟ್ಟಿದೆ. ಮಳೆ ಹೆಚ್ಚಾಗಿ ಬೀಳುವ ಸಾಗರ ತಾಲೂಕು ಸಹಜವಾಗಿ ದಟ್ಟವಾದ ಕಾಡು ಮತ್ತು ವಿವಿಧ ರೀತಿಯ ಪ್ರಾಣಿಸಂಕುಲಗಳಿಗೆ ತವರಾಗಿದೆ. ಪ್ರಕೃತಿಪ್ರಿಯರಿಗೆ ಮತ್ತು ಚಾರಣಪ್ರಿಯರಿಗೆ ಸಾಗರ ಸ್ವರ್ಗ. ಶ್ರೀಗಂಧ ಕೆತ್ತನೆಗೆ ರಾಜ್ಯದಲ್ಲೇ ಹೆಸರುವಾಸಿಯಾಗಿರುವ ಸಾಗರವನ್ನು ಶ್ರೀಗಂಧದ ಗುಡಿ ಎಂದೂ ಕರೆಯಲಾಗುತ್ತದೆ. ಸಾಗರವು ಜನರ ಒಗ್ಗಟ್ಟಿನಲ್ಲಿ ಪ್ರಸಿದ್ಧವಾಗಿದೆ. ಇಲ್ಲಿನ ಗಣೇಶ ಚತುರ್ಥಿ ಬಹಳ ಅದ್ದೂರಿಯಾಗಿ ಆಚರಿಸುತ್ತಾರೆ.

ಸಾಗರ ನಗರಕ್ಕೆ ನಾಲ್ಕುನೂರು ವರ್ಷಗಳ ಇತಿಹಾಸವಿದೆಯೆಂದು ತಿಳಿದು ಬಂದಿದೆ. ಕೆಳದಿ ವಂಶಸ್ಥರ ಕಾಲದಿಂದಲೂ ಈ ನಗರ ಇದ್ದಿತು. ಸಾಗರದ ಸಮೀಪವಿರುವ ಕೆರೆ ಅಂದು ಅತ್ಯಂತ ವಿಶಾಲವಾಗಿ ಇದ್ದು, ಅದು ಸಾಗರದಂತೆ(ಸಮುದ್ರದಂತೆ) ಕಾಣಿಸುತ್ತಿತ್ತಂತೆ. ಆ ಕೆರೆಗೆ "ಸದಾಶಿವ ಸಾಗರ" ಎಂಬ ಹೆಸರು ಇತ್ತು. ನಂತರ ಸದಾಶಿವ ಹೊರಟು ಹೋಗಿ ಸಾಗರ ಮಾತ್ರ ಉಳಿದು ಅದುವೇ ಈ ನಗರದ ಹೆಸರಾಯಿತು ಎಂದು ಹೇಳಲಾಗುತ್ತಿದೆ. ಇತ್ತೀಚಿಗೆ ಸಾಗರದ ಜನಸಂಖ್ಯೆ ಹೆಚ್ಚಾದ ಕಾರಣ ಇದನ್ನು ನಗರಸಭೆಯನ್ನಾಗಿ ಘೋಷಿಸಿದ್ದಾರೆ.

**ಸೊರಬ:** ಸೊರಬವು ಶಿವಮೊಗ್ಗ ಜಿಲ್ಲೆಯ ಮಲೆನಾಡಿನ ಸೆರಗಿನಲ್ಲಿರುವ ಒಂದು ತಾಲೂಕು. ದಂಡಾವತಿ ನದಿ ತೀರದಲ್ಲಿರುವ ಇದು ಶಿವಮೊಗ್ಗ ಜಿಲ್ಲಾ ಕೇಂದ್ರದಿಂದ ೮೫ ಕಿಮೀ ದೂರದಲ್ಲಿದೆ. ಸೊರಬದ ಮೂಲ ಹೆಸರು ಸುರಭಿಪುರ, ಇಲ್ಲಿ ಒಂದು ಸುರಭಿ(ಆಕಳು) ರಂಗನಾಥ ದೇವರಿಗೆ ಹಾಲಿನ ಅಭಿಷೇಕ ಮಾಡುತ್ತಿತ್ತೆಂಬ ಪ್ರತೀತಿ ಇದೆ. ಈಗಿನ ರಂಗನಾಥ ದೇವಸ್ಥಾನವನ್ನು ಹಳೇಸೊರಬದ ಒಬ್ಬ ಗೌಡರು ಕಟ್ಟಿಸಿದರು ಎಂಬುವುದರ ಬಗ್ಗೆ ದಂಡಾವತಿ ನದಿತೀರದಲ್ಲಿ ಶಿಲಾಶಾಸನವಿದೆ. ಸೊರಬವು ಶ್ರೀಗಂಧದ ಕರಕುಶಲ ಕಲೆಗೆ ಪ್ರಸಿದ್ಧವಾಗಿದೆ.

**ಹೊಸನಗರ:** ಹೊಸನಗರ ಇದು ಶಿವಮೊಗ್ಗ ಜಿಲ್ಲೆಯ ಒಂದು ತಾಲೂಕು ಕೇಂದ್ರ. ಈ ತಾಲೂಕಿನಲ್ಲಿನ ಬಿದನೂರು ನಗರ ಎಂಬ ಊರನ್ನು ಶಿವಪ್ಪನಾಯಕನು ತನ್ನ ಆಳ್ವಿಕೆಯ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನೆಂದು ಇತಿಹಾಸ ಹೇಳುತ್ತದೆ. ಆ ಕಾಲದಲ್ಲಿ ಈ ಊರನ್ನು 'ಕಳೂರು' ಎಂದು ಕರೆಯುತ್ತಿದ್ದರು. ಕ್ರಮೇಣ ಬಿದನೂರು ನಗರ ಹಳೇನಗರವಾದರೆ, ಜನವಸತಿ ಹೆಚ್ಚುತ್ತಾ ಬಂದ ಈ ಪ್ರದೇಶ ಹೊಸನಗರ ಎಂದು ಕರೆಸಿಕೊಂಡಿತು.

ಕರ್ನಾಟಕದಲ್ಲಿಯೇ ಅತೀ ಹೆಚ್ಚು ಮಳೆ ಬೀಳುವ ಪ್ರದೇಶ(ಹುಲಿಕಲ್) ಈ ತಾಲೂಕಿನಲ್ಲಿದೆ. ಜೆಟ್ಟಿಮನೆ, ಬೆಳ್ಳಕ್ಕ, ಅಂಬ್ಲಾಡಿ ಪ್ರದೇಶಗಳು ಯಾವಾಗಲು ತಂಪಾಗಿರುವ ಈ ತಾಲೂಕಿನ ಪ್ರದೇಶಗಳು. ತಾಲೂಕಿನ ಬಹುತೇಕ ಭಾಗ ಶರಾವತಿ ಅಣೆಕಟ್ಟಿನ ಹಿನ್ನೀರಿನಲ್ಲಿ ಮುಳುಗಡೆಯಾಗಿದೆ.

## ಶಿವಮೊಗ್ಗ ಜಿಲ್ಲೆಯ ಸುಪ್ರಸಿದ್ಧ ಪ್ರವಾಸಿ ತಾಣಗಳು

**ಜೋಗ ಜಲಪಾತ:** ಜಗತ್‌ಪ್ರಸಿದ್ಧ ಜೋಗಜಲಪಾತವು ಶಿವಮೊಗ್ಗ ಜಿಲ್ಲೆಯ ಹೆಮ್ಮೆಯ ಪ್ರವಾಸಿ ತಾಣವಾಗಿದೆ. ಸಾಗರ ತಾಲ್ಲೂಕಿನ ಜೋಗದಲ್ಲಿರುವ ಶರಾವತಿ ನದಿಯ ಈ ಜಲಪಾತವನ್ನು ಮಳೆಗಾಲದಲ್ಲಿ ನೋಡುವುದೇ ಒಂದು ರೋಮಾಂಚನ. ಶರಾವತಿ ನದಿಯು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಅಂಬುತೀರ್ಥದ ಬಳಿಯಲ್ಲಿರುವ ಪಶ್ಚಿಮ ಘಟ್ಟಗಳಲ್ಲಿ ಜನಿಸುತ್ತದೆ. ಶ್ರೀರಾಮನು ತನ್ನ "ಶರ"(ಬಾಣ)ವನ್ನು ಹೊಡೆದು ಅದು ನಾಟಿದ ಜಾಗದಿಂದಲೇ ಈ ನದಿ ಹುಟ್ಟಿದ್ದರಿಂದ ಇದಕ್ಕೆ "ಶರಾವತಿ" ಎಂಬ ಹೆಸರು ಬಂದಿದೆ ಎಂಬುದು ಪೌರಾಣಿಕ ಹಿನ್ನೆಲೆಯಲ್ಲಿದೆ. ಈ ನದಿಯ ಉದ್ದ ಸುಮಾರು ೧೨೮ ಕಿ.ಮೀ. ಆಗಿದ್ದು, ಇದರ ಹರಿವಿನ ಪ್ರದೇಶ ೨,೭೭೧ ಚ.ಕಿ.ಮೀ. ಆಗಿದೆ.

ಜೋಗ ಅಥವಾ ಗೇರುಸೊಪ್ಪಿನ ಜಲಪಾತ ಪ್ರಪಂಚದ ಪ್ರಸಿದ್ಧ ಜಲಪಾತಗಳಲ್ಲೊಂದು. ಇದು ಭಾರತ ದೇಶದ ಎರಡನೆಯ ಅತೀ ಎತ್ತರದ ಜಲಪಾತವಾಗಿದೆ. ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ದಟ್ಟವಾದ ಕಾಡು ಹಾಗು ಗುಡ್ಡಗಳಿಂದ ಆವೃತ್ತವಾದ ಜೋಗ ಕರ್ನಾಟಕದ ಒಂದು ಪ್ರಮುಖ ಪ್ರವಾಸಿ ತಾಣವಾಗಿದೆ. ಇಲ್ಲಿ ಸುಮಾರು ೨೯೨ ಮೀ. ಎತ್ತರದಿಂದ ಭೋರ್ಗರೆ ಯುತ್ತಾ ಶರಾವತಿ ನದಿಯು ನಾಲ್ಕು ಸೀಳಾಗಿ ಆಳದ ಪ್ರಪಾತಕ್ಕೆ ಧುಮುಕುತ್ತದೆ. ವೈಭವದಿಂದ ಅವ್ಯಾಹತವಾಗಿ ಧುಮಕುವ ರಾಜ, ಜೋರಾಗಿ ಆರ್ಭಟಿಸುತ್ತಾ ಹಲವಾರು ಭಾರಿ ಚಿಮ್ಮುತ್ತಾ ಧುಮುಕುವ ರೋರರ್, ಬಳುಕುತ್ತಾ ಜಾರುವ ರಾಣಿ(ಲೇಡಿ) ಮತ್ತು ರಭಸದಿಂದ ಹಲವಾರು ಬಂಡೆಗಳನ್ನು ಚಿಮ್ಮುತ್ತಾ ನುಗ್ಗುವ ರಾಕೆಟ್ ಈ ನಾಲ್ಕು ಜಲ ಭಾಗಗಳಾಗಿವೆ. ಮಳೆಗಾಲದಲ್ಲಿ ಅತ್ಯಂತ ರಮಣೀಯರೂಪ ತೊಡುವ ಈ ಜಲಪಾತ ಬಿಳಿ ಮೋಡಗಳ ಹಿಂದೆ ಕಣ್ಣಾಮುಚ್ಚಾಲೆ ಆಡುತ್ತಾ ನೋಡುಗರ ಕಣ್ಮನ ಸೆಳೆಯುವುದು.

ನಾಲ್ಕು ಪ್ರತ್ಯೇಕ ಬಿರುಕುಗಳಿಂದ ನದಿ ರಭಸದಿಂದ ಕಣಿವೆಗೆ ಬೀಳುತ್ತದೆ. ಅದು ಧುಮುಕುವ ಠೀವಿ ಮನಮೋಹಕವಾಗಿದೆ. ಜಲಪಾತದ ನಾಲ್ಕು ಕವಲುಗಳ ಪೈಕಿ ರಾಜಾ ಸುಮಾರು ೮೨೯ ಅಡಿ ಆಳಕ್ಕೆ ಧುಮುಕುತ್ತದೆ. ರಾಜಾ ಬೀಳುತ್ತಿರುವಂತೆಯೇ ಸ್ವಲ್ಪ ಕೆಳಗೆ, ಬಂಡೆಯ ಬಿರುಕಿನಿಂದ ಹರಿದು ಬೀಳುವ ರೋರರ್ ಜಲಪಾತವನ್ನು ಅಪ್ಪಿಕೊಂಡು, ಅದರೊಂದಿಗೆ ಕಣಿವೆಗೆ ಬೀಳುತ್ತದೆ. ಮೂರನೇಯ ಜಲಪಾತ ರಾಕೆಟ್ ಬಂಡೆಯ ಮೇಲಿನಿಂದ ಹಲವು ಧಾರೆಗಳಲ್ಲಿ ಚಿಮ್ಮಿ ತಳಕ್ಕೆ ಕುಪ್ಪಳಿಸುತ್ತದೆ. ನಾಲ್ಕನೆಯ ರಾಣಿ ಜಲಪಾತ(ಲೇಡಿ ಬ್ಲಾಂಚೆ) ಬೀಳುವ ರಭಸದಿಂದ ಏಳುವ ನೊರೆಯಿಂದ ತುಂಬಿ ಸೊಗಸುಗಾತಿಯಂತೆ ಪ್ರಪಾತಕ್ಕೆ ಇಳಿಯುತ್ತದೆ.

ಮಳೆಗಾಲದಲ್ಲಿ ಹೆಚ್ಚು ನೀರು ರಭಸದಿಂದ ಬೀಳುವ ಕಾರಣ, ನೀರಿನಿಂದ ಏಳುವ ಧೂಮ ಪ್ರಪಾತವನ್ನು ಆವರಿಸಿ, ನೀರಿನ ಭೋರ್ಗರೆತದ ಶಬ್ದ ಹೃದಯವನ್ನು ಕಂಪಿಸುವಂತಿರುತ್ತದೆ. ಮಳೆಗಾಲದ ಅನಂತರದ ತಿಂಗಳುಗಳಲ್ಲಿ ನದಿಯ ಪ್ರವಾಹ ಸರಿಯಾದ ಗಾತ್ರದಲ್ಲಿರುವುದರಿಂದ ಜಲಪಾತ ನೋಡಲು ರಮ್ಯವಾಗಿರುತ್ತದೆ. ಜಲಪಾತದ ಪೂರ್ಣ ದೃಶ್ಯವನ್ನು ಶಿವಮೊಗ್ಗ ಗಡಿ ಭಾಗದಿಂದ ನೋಡಬಹುದು. ಜಲಪಾತದ ಬಂಡೆಯ ಅಂಚುಗಳಲ್ಲಿರುವ ಪೊಟರೆಗಳಲ್ಲಿ ಕಾಡು ಪಾರಿವಾಳಗಳು ಮನೆ ಮಾಡಿಕೊಂಡು ಪ್ರಪಾತದ ಬಳಿ ಗುಂಪುಗುಂಪಾಗಿ ಹಾರುತ್ತಿರುತ್ತವೆ.

ಸೂರ್ಯನ ಕಿರಣಗಳಿಂದ ದಿನದ ವಿವಿಧ ಕಾಲಗಳಲ್ಲಿ ಕಾಮನ ಬಿಲ್ಲು ಜಲಪಾತದ ಸ್ಥಳದಲ್ಲಿ ವೈವಿಧ್ಯಮಯವಾಗಿ ಕಾಣುತ್ತದೆ. ಜಲಪಾತದ ಏಕತಾನದ ನಾದ ಹತ್ತಿರ ನಿಂತು ಕೇಳುವವರ ಕಿವಿಗಳಿಗೆ ಘನಗರ್ಜನೆಯಂತೆ ಕೇಳಿಸುತ್ತದೆ. ಅದರ ಮೇಘನಾದದ ಗಾಂಭೀರ್ಯ ನಿಸರ್ಗ ಸಂಗೀತದ ಒಂದು ನಿರುಪಮ ಮಾದರಿ. ಮೌನವನ್ನು ಸೀಳುವ ಆ ನಿತ್ಯನಾದವನ್ನು ಆಲಿಸುತ್ತಾ ನಿಂತವರಿಗೆ ಒಮ್ಮೆ ನಾದಸಮಾಧಿಯನ್ನು ಉಂಟುಮಾಡವಂತಿರುತ್ತದೆ.

ಜೊತೆಗೆ ಬಿಸಿಲು ಹರಿದಂತೆ ಜಲಧಾರೆಗಳ ಮೇಲಿನ ಕಾಮನಬಿಲ್ಲುಗಳು ನಿತ್ಯ ನವ್ಯವಾಗಿ ಕಾಣಿಸುವವು. ಬೆಳದಿಂಗಳ ರಾತ್ರಿಯಲ್ಲೂ ಕಾಮನಬಿಲ್ಲು ಕಾಣಿಸುವುದುಂಟು. ಈ ಜೀವಂತ ಪ್ರವಾಹದ ಸೌಮ್ಯ-ಭೀಕರತೆಗಳ ವರ್ಣನೆ ಮಾತಿಗೆ ನಿಲುಕದ್ದು. ಗೇರುಸೊಪ್ಪ ಜಲಪಾತದ ಮಾಹಿತಿಗಳನ್ನು ಸಂಗ್ರಹಿಸಲು ಮಾರ್ಚ್ ೧೮೫೭ರಲ್ಲಿ ಬಂದ ಇಬ್ಬರು ಬ್ರಿಟಿಷ್ ನೌಕಾಧಿಕಾರಿಗಳ ವರದಿಯಂತೆ- ಈ ಪ್ರಪಾತದ ಆಳ ೮೨೯ ಅಡಿಗಳು. ಪ್ರಪಾತದ ತಳದಲ್ಲಿ ನದಿ ಕೊರೆದಿರುವ ಮಡುವಿನ ಆಳ ೧೩೯ ಅಡಿಗಳು.

ಈಗ ಜಲಪಾತದ ಎದುರಿಗೆ, ನದಿ ಭೋರ್ಗರೆದು ಧುಮುಕುವ ಸುಂದರವಾದ ಸ್ಥಳದಲ್ಲಿ ಪ್ರವಾಸಿ ಬಂಗಲೆ, ಉಪಹಾರ ಗೃಹ ಮತ್ತು ಅಂಚೆ ಕಚೇರಿ ಇವೆ. ಅಕ್ಟೋಬರಿನಿಂದ ಫೆಬ್ರವರಿಯವರೆಗೆ ಸಹಸ್ರಾರು ಪ್ರವಾಸಿಗಳು ಜಗತ್ ಪ್ರಸಿದ್ಧವಾದ ಈ ಮನೋಹರ ಸ್ಥಳಕ್ಕೆ ಭೇಟಿ ನೀಡುತ್ತಾರೆ.

ಮಹಾತ್ಮ ಗಾಂಧಿ ಜಲ ವಿದ್ಯುತ್ ಯೋಜನೆ ಜೋಗ ಜಲಪಾತದ ಬಳಿ ಇರುವ ವಿದ್ಯುತ್ ಸ್ಥಾವರ. ಸ್ವಾತಂತ್ರ್ಯ ಪೂರ್ವದಲ್ಲಿ ಸರ್ ಎಂ. ವಿಶ್ವೇಶ್ವರಯ್ಯನವರು ಮೊದಲ ಬಾರಿ ಜೋಗಕ್ಕೆ ಭೇಟಿಯಿತ್ತಾಗ ಜೋಗ ಜಲಪಾತವನ್ನು ನೋಡಿ "ಎಂತಹ ವ್ಯರ್ಥ" ಎಂದು ಉದ್ಗರಿಸಿದರಂತೆ. ಅವರ ಈ ಮಾತಿನ ಫಲಶ್ರುತಿ ಈ ಜಲವಿದ್ಯುತ್ ಆಗರ. ೧೯೩೦ರ ದಶಕದ ಪೂರ್ವಭಾಗದಲ್ಲಿ ಮೈಸೂರು ಲೋಕೋಪಯೋಗಿ ಇಲಾಖೆಯಿಂದ ಜಲವಿದ್ಯುತ್ ಯೋಜನಾ ಕಾರ್ಯ ಶುರುವಾಯಿತು.

ಮೊದಲ ಹಂತದ ಕೆಲಸ ೧೯೩೯ರಲ್ಲಿ ಜೋಗ ಜಲಪಾತದಿಂದ ೨೪ ಕಿ. ಮಿ. ದೂರದಲ್ಲಿರುವ ಹಿರೇಭಾಸ್ಕರ ಎಂಬ ಸ್ಥಳದಲ್ಲಿ ಶುರುವಾಯಿತು. ಮೊದಲು ಕೃಷ್ಣರಾಜೇಂದ್ರ ಜಲವಿದ್ಯುತ್ ಯೋಜನೆಯೆಂದು ಕರೆಯಲ್ಪಡುತ್ತಿದ್ದ ಈ ಯೋಜನೆಯನ್ನು ನಂತರ ಮಹಾತ್ಮ ಗಾಂಧಿ ಜಲವಿದ್ಯುತ್ ಯೋಜನೆಯೆಂದು ನಾಮಕರಣ ಮಾಡಲಾಯಿತು. ಫೆಬ್ರುವರಿ ೨೧, ೧೯೪೯ರಲ್ಲಿ ಉದ್ಘಾಟನೆಯಾದ ಈ ವಿದ್ಯುತ್ ಸ್ಥಾವರ ೧೨೦ ಮೆಗಾವ್ಯಾಟ್ ವಿದ್ಯುಚ್ಛಕ್ತಿ ಉತ್ಪಾದಿಸುವ ಕ್ಷಮತೆಯನ್ನು ಹೊಂದಿದೆ. ಮೊದಲು ಹಿರೇಭಾಸ್ಕರ ಜಲಾಶಯದಿಂದ ಈ ಯೋಜನೆಗೆ ನೀರಿನ ಸರಬರಾಜಾಗುತ್ತಿತ್ತು. ೬೦ರ ದಶಕದಲ್ಲಿ ಲಿಂಗನಮಕ್ಕಿ ಜಲಾಶಯ ಪ್ರಾರಂಭವಾದ ನಂತರ ಅದೇ ಈ ಯೋಜನೆಗೆ ನೀರಿನ ಮೂಲವಾಗಿದೆ.

**ಕೊಡಚಾದ್ರಿ:** ಕೊಡಚಾದ್ರಿ ಬೆಟ್ಟ ಸಾಲುಗಳು ಶಿವಮೊಗ್ಗ ಜಿಲ್ಲೆಯ ಪಶ್ಚಿಮ ಘಟ್ಟಗಳ ಸಾಲಿನಲ್ಲಿ ಇವೆ. ಇದರಲ್ಲಿ ಕೊಡಚಾದ್ರಿ ಬೆಟ್ಟದ ಎತ್ತರ ಸಮುದ್ರ ಮಟ್ಟದಿಂದ ಸುಮಾರು ೧೩೪೩ ಮೀ. ಕೊಡಚಾದ್ರಿ ಬೆಟ್ಟವು ಪ್ರಸಿದ್ಧ ಯಾತ್ರಾ ಸ್ಥಳವಾದ ಕೊಲ್ಲೂರು ಮೂಕಾಂಬಿಕ ದೇವಸ್ಥಾನದ ಹಿನ್ನೆಲೆಯಲ್ಲಿ ಇದ್ದು, ಪ್ರಕೃತಿ ಪ್ರಿಯರಿಗೆ ಹಾಗು ಚಾರಣಿಗರಿಗೆ ಹೇಳಿ ಮಾಡಿಸಿದ ಜಾಗ ಇದಾಗಿದೆ. ಕೊಡಚಾದ್ರಿ ಬೆಟ್ಟ ಸಾಲುಗಳು ಮೂಕಾಂಬಿಕ ವನ್ಯಜೀವಿ ಅಭಯಾರಣ್ಯದ ವ್ಯಾಪ್ತಿಯಲ್ಲಿ ಬರುತ್ತದೆ. ಕೊಡಚಾದ್ರಿ ಬೆಟ್ಟದ ಮೇಲೆ ಸರ್ವಜ್ಞ ಪೀಠವೆಂಬ ಒಂದು ಸಣ್ಣ ದೇವಾಲಯವಿದೆ. ಈ ಜಾಗದಲ್ಲಿ ಭಗವಾನ್ ಶ್ರೀ ಶಂಕರಾಚಾರ್ಯರು ತಪಸ್ಸು ಮಾಡಿದ್ದರು ಎಂದು ಪ್ರತೀತಿ. ಸರ್ವಜ್ಞ ಪೀಠಕ್ಕಿಂತ ೨ ಕಿ.ಮೀ ಮೊದಲು ಮೂಲ ಮೂಕಾಂಬಿಕ ದೇವಸ್ಥಾನವಿದೆ. ಸರ್ವಜ್ಞ ಪೀಠದಿಂದ ಮುಂದಕ್ಕೆ ಕಡಿದಾದ ಬೆಟ್ಟವನ್ನು ಇಳಿದರೆ ಚಿತ್ರಮೂಲ ಎಂಬ ಸ್ಥಳ ತಲುಪಬಹುದು. ಇದು ಸೌಪರ್ಣಿಕ ನದಿಯ ಉಗಮ ಸ್ಥಾನ. ಈ ಜಾಗವು ಹಲವಾರು ಜಾತಿಯ ಔಷದೀಯ ಸಸ್ಯಗಳಿಗೆ ಹೆಸರುವಾಸಿ ಯಾಗಿದೆ. ಕೊಡಚಾದ್ರಿ ಬೆಟ್ಟವು ದಟ್ಟವಾದ ಕಾಡುಗಳಿಂದ ಆವೃತವಾಗಿದೆ.

ಇಪ್ಪತ್ತನೆಯ ಶತಮಾನದಲ್ಲಿ ಪಶ್ಚಿಮ ಘಟ್ಟಗಳಲ್ಲಿ ವ್ಯಾಪಕವಾಗಿ ಸುತ್ತಾಡಿದ ಲೇಖಕ ಮತ್ತು ಪರಿಸರ ಪ್ರೇಮಿ ಡಾ. ಶಿವರಾಮ ಕಾರಂತರು ಒಂದೆಡೆ ಇದನ್ನು ದಾಖಲಿಸಿದ್ದಾರೆ. ಸಹ್ಯಾದ್ರಿಯ ಈ ಭಾಗದಲ್ಲಿ ಮೇಲೆದ್ದಿರುವ ಮೂರು ಪರ್ವತ ಶಿಖರಗಳನ್ನು ಕಾಲ್ನಡಿಗೆಯಲ್ಲಿಯೇ ಏರಿದ

ಡಾ. ಕಾರಂತರ ಪ್ರಕಾರ ಕುದುರೆಮುಖ ಶಿಖರವು ಅತ್ಯಂತ ದೂರದ ಚಾರಣ, ಕುಮಾರ ಪರ್ವತವು ತುಂಬಾ ಕಠಿಣವೆನಿಸುವ ದಾರಿ; ಮತ್ತು ಕೊಡಚಾದ್ರಿಯು ಇವೆಲ್ಲಕ್ಕಿಂತಲೂ ಚಂದದ ತಾಣ ಎಂದಿದ್ದಾರೆ.

ಕೊಡಚಾದ್ರಿಗೆ ಪುರಾತನ ಕಾಲದಿಂದಲೂ ಜನರು ಯಾತ್ರೆ ಹೋಗುತ್ತಿದ್ದರು. ಇಲ್ಲಿಗೆ ಸಮೀಪದ ನಗರ ಹತ್ತಿರದ ನಿಲಸಕಲ್ಲು ಎಂಬಲ್ಲಿ ನವ ಶಿಲಾಯುಗದ ಕಾಲದ ನಿಲುವುಗಲ್ಲುಗಳ ಸಾಲುಗಳನ್ನು ಗಮನಿಸಿದರೆ, ಈ ಸುತ್ತಲಿನ ಪ್ರದೇಶದಲ್ಲಿ ಕನಿಷ್ಟ ಮೂರು ಸಾವಿರ ವರುಷಗಳಿಂದ ಜನವಸತಿ ಇರಬೇಕು ಎನಿಸುತ್ತದೆ. ಕೊಡಚಾದ್ರಿಯಲ್ಲಿ ಪುರಾತನ ಜನವಸತಿ ಇದ್ದ ಕುರುಹು ಇನ್ನೂ ಪತ್ತೆಯಾಗಿಲ್ಲವಾದರೂ, ಕ್ರಿ.ಶ.ಏಳನೆಯ ಶತಮಾನದಲ್ಲಿ ಶಂಕರಾಚಾರ್ಯರು ಕೊಡಚಾದ್ರಿಗೆ ಭೇಟಿ ಕೊಟ್ಟಿದ್ದರು ಎನ್ನಲಾಗಿದ್ದು, ಇಲ್ಲಿದ್ದ ಮೂಲ ಮೂಕಾಂಬಿಕೆ ದೇವಿಯ ವಿಗ್ರಹವನ್ನು ಪರ್ವತದ ತಳದಲ್ಲಿರುವ ಕೊಲ್ಲೂರಿನಲ್ಲಿ ಪ್ರತಿಷ್ಠಾಪನೆ ಮಾಡಿದರು ಎಂದು ಕೊಲ್ಲೂರಿನ ಸ್ಥಳಪುರಾಣ ಹೇಳುತ್ತದೆ.

ಕೊಡಚಾದ್ರಿಗೆ ನೂರಾರು ವರುಷಗಳಿಂದ ಜನರು ಯಾತ್ರೆಯರೂಪದಲ್ಲಿ ಚಾರಣ ಹೋಗುತ್ತಿದ್ದುದು ಸಹಜವಾಗಿದೆ. ಶಿಖರದ ಹತ್ತಿರವಿರುವ ಮೂಲ ಮೂಕಾಂಬಿಕ ದೇವಾಲಯವೂ ಸಹ ಸಾಕಷ್ಟು ಪುರಾತನವಾದದ್ದು, ಈ ದೇವಾಲಯದ ಬಳಿ ಇರುವ ಸುಮಾರು ೪೦ ಅಡಿ ಎತ್ತರದ ಕಬ್ಬಿಣದ ಕಂಬವು ಮೂಕಾಸುರನನ್ನು ವಧಿಸಲು ದೇವಿ ಉಪಯೋಗಿಸಿದ ತ್ರಿಶೂಲ ಎನ್ನುತ್ತಾರೆ ಇಲ್ಲಿಯ ಸ್ಥಳೀಯರು. ಇದು ಪುರಾತನ ವಿಧಾನಗಳಿಂದ ತಯಾರಾದ ಕಬ್ಬಿಣ ಎಂದು ಸಂಶೋಧನೆಗಳಿಂದ ಪತ್ತೆಯಾಗಿದೆ.

ಕೊಡಚಾದ್ರಿಯ ಸುತ್ತ ಮುತ್ತ ಇರುವುದು ಸಹ್ಯಾದ್ರಿಯ ವಿಶಿಷ್ಟ ನಿತ್ಯಹರಿದ್ವರ್ಣ ಅರಣ್ಯ. ಭಾರತದಲ್ಲೇ ಅತೀ ಹೆಚ್ಚು ಮಳೆ ಬೀಳುವ ಈ ಪರ್ವತ ಶ್ರೇಣಿಯಲ್ಲಿ ಬೆಳೆದಿರುವ ಮಳೆಕಾಡು ತನ್ನದೇ ಆದ ವ್ಯಕ್ತಿತ್ವವನ್ನು ಹೊಂದಿದೆ ಎಂದರೂ ತಪ್ಪಾಗಲಾರದು. ಕೊಡಚಾದ್ರಿಯ ತುತ್ತ ತುದಿಯಲ್ಲಿ ನಿಂತು ನೋಡಿದರೆ, ನಾಲ್ಕೂ ದಿಕ್ಕಿನಲ್ಲಿ ದಟ್ಟ ಅರಣ್ಯವು ಅಲೆ ಅಲೆಯಂತೆ ಹರಡಿರುವ ದೃಶ್ಯ ಕಾಣುತ್ತದೆ. ಕೊಡಚಾದ್ರಿ ಇರುವ ಜಿಲ್ಲೆಯಲ್ಲೇ ಹುಟ್ಟಿ ಬೆಳೆದ ಕವಿ ಕುವೆಂಪುರವರು ತಮ್ಮ ಒಂದು ಕವನದಲ್ಲಿ ಹೇಳಿದಂತೆ, “ಹಸುರಿತ್ತಲ್, ಹಸುರತ್ತಲ್, ಹಸುರೆತ್ತಲ್, ಕಡಲಿನಲಿ” ಎಂಬ ಸಾಲು ನೆನಪಾಗುವ ತಾಣ ಕೊಡಚಾದ್ರಿಯಾಗಿದೆ.

ಕೊಡಚಾದ್ರಿಯ ಸೂರ್ಯಾಸ್ತ ಅಪರೂಪವಾದದ್ದು. ಶಿಖರದಿಂದ ಸಾಕಷ್ಟು ಸ್ಪಷ್ಟವಾಗಿಯೇ ಕಾಣಿಸುವ ಸಮುದ್ರದಲ್ಲಿ ಚಿನ್ನದ ಬಣ್ಣದ ಸೂರ್ಯನು ಮುಳುಗುವಾಗ, ನೀರಿನ ವಕ್ರೀಭವನದಿಂದಲೋ ಅಥವಾ ವಾತಾವರಣದ ಹಲವು ಪದರಗಳಿಂದಲೋ, ಸೂರ್ಯನು ತಾಳುವ ವಿವಿಧ ರೂಪಗಳು ಆನಂದವನ್ನು ಉಂಟುಮಾಡುತ್ತದೆ. ವಾತಾವರಣದಲ್ಲಿ ದೂಳಿನ ಅಂಶ ಕಡಿಮೆಯಿದ್ದ ದಿನ

ಮತ್ತು ತಿಳಿಯಾಗಿ ಕಾಣುವ ದಿನದ ಸೂರ್ಯಾಸ್ತದ ಸಮಯದಲ್ಲಿ ಸೂರ್ಯನು ಚಿನ್ನದ ಬುಗುರಿಯಂತೆ, ಚಿನ್ನದ ಬೋಗುಣಿಯಂತೆ, ಟೋಪಿಯಂತೆ, ಗಾಲಿಚಕ್ರದಂತೆ, ಕೊಡದ ರೀತಿ, ಬಿಲ್ಲೆಯ ರೀತಿ, ಚಿನ್ನದ ಚೂರಿನ ರೀತಿ, ಉಂಗುರದ ತುದಿಯ ರೀತಿ ಈ ತರ ವಿವಿಧ ರೂಪಗಳಲ್ಲಿ ಸ್ಪಷ್ಟವಾಗಿ ಕಾಣಬಹುದಾಗಿದೆ.

ವಿಶಾಲಾಕಾಶ ಮತ್ತು ದೂರದ ದಿಗಂತದ ಮಬ್ಬು ಹಿನ್ನೆಲೆಯಲ್ಲಿ ಹೊಂಬಣ್ಣದ ಸೂರ್ಯನು, ಈ ರೀತಿಯ ನಾನಾರೂಪ ಧರಿಸುತ್ತಾ ಕ್ರಮೇಣ ಸಮುದ್ರದೊಳಗೆ ಜಾರಿ ಕಣ್ಮರೆಯಾಗಿ, ಎಲ್ಲೆಲ್ಲೂ ಮಬ್ಬು ಮಾತ್ರ ಪಸರಿಸಿದಾಗ, ಈ ನಿಸರ್ಗ ನಾಟಕದ ಭವ್ಯತೆಗೆ ಬೆರಗಾಗುತ್ತೇವೆ. ಆ ಪ್ರಕೃತಿಗೆ ಇದು ದಿನನಿತ್ಯದ, ಏಕತಾನದ ದಿನಚರಿಯೇ ಆದರೂ, ಆ ಅಪೂರ್ವ ಅನುಭೂತಿಯನ್ನು ಅನುಭವಿಸಿದ ನಮ್ಮ ಮನವು, ವಿಶಾಲ ಪರದೆಯ ಮೇಲೆ ನಡೆದ ಹೊನ್ನಿನ ಬಣ್ಣದ ಸೂರ್ಯನ ಆಟವಿದೋ ಅಥವಾ ನಿಸರ್ಗದ ಅರ್ಥಗರ್ಭಿತ ನಾಟಕವಿದೋ ಎಂದು ವಿಸ್ಮಯ ಪಡುವಂತಾಗುತ್ತದೆ. ಜೊತೆಗೆ, ಅಮೂರ್ತ ಭಾವನೆಗಳಿಗೆ ಪಕ್ಕಾದ ಮನವು ಕ್ಷಣಕಾಲ ಮಂಕಾಗಿ, ಆ ಭವ್ಯತೆಯನ್ನು ತಾನೇ ತಾನಾಗಿ ಅನುಭವಿಸುತ್ತಿದೆಯೋ ಎಂಬ ವಿಸ್ಮೃತಿಗೆ ನಾವು ಒಳಗಾಗುತ್ತೇವೆ.

**ಆಗುಂಬೆ:** ತೀರ್ಥಹಳ್ಳಿ ತಾಲ್ಲೂಕಿನ ಗಡಿಭಾಗದಲ್ಲಿರುವ ಆಗುಂಬೆಯು ದಕ್ಷಿಣ ಭಾರತದಲ್ಲೇ ಅತೀ ಹೆಚ್ಚು ಮಳೆಯಾಗುವ ಪ್ರದೇಶ ಎಂಬ ಹೆಗ್ಗಳಿಕೆಯನ್ನು ಪಡೆದಿದೆ. ಶಿವಮೊಗ್ಗ ಹಾಗೂ ಉಡುಪಿ ಜಿಲ್ಲೆಯ ಗಡಿಭಾಗದಲ್ಲಿರುವ ಈ ಪ್ರದೇಶ ಘಾಟಿಯಾಗಿದ್ದು, ಮಲೆನಾಡಿನ ಹಾಗೂ ಕರಾವಳಿ ಪ್ರದೇಶದ ಕೊಂಡಿ ಇದಾಗಿದೆ. ಸದಾ ಮಂಜು ಮುಸುಕಿದ ಪ್ರದೇಶವಾದ ಇಲ್ಲಿನ ಸೂರ್ಯಾಸ್ತವನ್ನು ನೋಡಲು ಲಕ್ಷ ಲಕ್ಷ ಪ್ರವಾಸಿಗರು ವಷವಿಡೀ ಆಗಮಿಸುತ್ತಾರೆ.

ಆಗುಂಬೆ ಕರ್ನಾಟಕದ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಒಂದು ಚಿಕ್ಕ ಊರು. ಪಶ್ಚಿಮ ಘಟ್ಟದಲ್ಲಿರುವ ಈ ಊರು ಒಂದು ಪ್ರಸಿದ್ಧ ಪ್ರವಾಸಿ ತಾಣವಾಗಿದೆ. ಇಲ್ಲಿನ ಪ್ರಕೃತಿ ಸೌಂದರ್ಯ ಅದ್ವಿತೀಯವಾಗಿದೆ. ಸಾಯಂಕಾಲದ ಸೂರ್ಯಾಸ್ತದ ದೃಶ್ಯವನ್ನು ನೋಡಲು ಸಾವಿರಾರು ಜನ ಇಲ್ಲಿಗೆ ಬರುತ್ತಾರೆ. ಅಕ್ಟೋಬರ್ ತಿಂಗಳಿನಲ್ಲಿ ಆಕಾಶ ನಿರ್ಮಲವಾಗಿರುವುದರಿಂದ ಮುಳುಗುವ ಸೂರ್ಯನ ದೃಶ್ಯ ಅತ್ಯಂತ ಮುದನೀಡುತ್ತದೆ. ಆದರೆ ಮಳೆಯೇ ಮಲೆನಾಡಿನ ಜೀವಾಳ. ಮಳೆಗಾಲದಲ್ಲಿ ಸೂರ್ಯಾಸ್ತವನ್ನು ಕಾಣುವುದೇ ಒಂದು ಸಡಗರದ ಸನ್ನಿವೇಶವಾಗಿದೆ. ಭಾರತದಲ್ಲಿಯೇ ಅತೀ ಹೆಚ್ಚು ಮಳೆ ಬೀಳುವ ಸ್ಥಳಗಳಲ್ಲಿ ಆಗುಂಬೆಯೂ ಒಂದಾಗಿರುವ ಕಾರಣಕ್ಕಾಗಿಯೇ ಆಗುಂಬೆಯನ್ನು "ದಕ್ಷಿಣದ ಚಿರಾಪುಂಜಿ" ಎಂದೂ ಕರೆಯುತ್ತಾರೆ.

ಭಾರತದ ಏಕೈಕ ಶಾಶ್ವತ ಹರಿದ್ವರ್ಣವನ ಸಂಶೋಧನ ಕೇಂದ್ರ ಆಗುಂಬೆಯಲ್ಲಿದೆ. ಹೆಸರುವಾಸಿ ಉರಗತಜ್ಞ ರೊಮುಲುಸ್ ವಿಟೆಕರ್ ಆಗುಂಬೆಯನ್ನು "ಕಾಳಿಂಗ ಸರ್ಪಗಳ ರಾಜಧಾನಿ" ಎಂದು ಕರೆದಿದ್ದಾರೆ. ಬಿರುಗಾಳಿಗೋ, ಜಡಿಮಳೆಗೋ ದಿನವೂ ಒಂದಲ್ಲ ಒಂದು ಭೂತಾಕಾರದ ಮರ

ರಸ್ತೆಗೆ ಅಡ್ಡವಾಗಿ ಬಿದ್ದು ಸಂಚಾರವನ್ನು ತಡೆಯುವುದಿದೆ. ಇಲ್ಲಿ ತಿರುಗಾಡುವ ಬಸ್ಸು, ಲಾರಿಗಳು ಸಾಮಾನ್ಯವಾಗಿ ಕೊಡಲಿ ಗರಗಸಗಳನ್ನು, ರಸ್ತೆಗೆ ಅಡ್ಡವಾಗಿ ಬೀಳುವ ಬೃಹದಾಕಾರದ ಮರಗಳನ್ನು ಕಡಿಯಲೆಂದೇ ಇಟ್ಟುಕೊಂಡಿರುತ್ತವೆ. ಕರ್ನಾಟಕದ ಅತ್ಯಂತ ದಟ್ಟವಾದ ಅರಣ್ಯಶ್ರೀಯನ್ನು ಇಲ್ಲಿ ನೋಡಬಹುದು. ಘಟ್ಟದ ರಸ್ತೆಯಲ್ಲಿ ನಡೆದುಕೊಂಡು ಹೋಗುತ್ತಿದ್ದರೆ ಇಲ್ಲಿಯ ಎತ್ತರದಿಂದ ಬಗೆ ಬಗೆಯ ದೈತ್ಯಾಕಾರದ ವೃಕ್ಷಗಳು ಯಾವುದೋ ಪಾತಾಳದಿಂದ ಎದ್ದು ಬಂದವುಗಳಂತೆ ತಮ್ಮ ತಲೆಯನ್ನೆತ್ತಿ ಇಣುಕುತ್ತವೆಯೋ ಎಂಬಂತೆ ಭಾಸವಾಗುತ್ತದೆ.

ಇಲ್ಲಿಯ ಪ್ರದೇಶವೆಲ್ಲಾ ಜಿಗಣಿ ಜಾತಿಯ ಇಂಬುಳ ಎಂಬ ರಕ್ತಹೀರುವ ಕೀಟಗಳಿಂದ ತುಂಬಿದೆ. ತಮ್ಮ ತಾರಸ್ವರದಿಂದ ಕಿವಿಯನ್ನು ಕೊರೆಯುವ ಮರಚಾರಟೆಗಳ ಸಂಗೀತ ಇಲ್ಲಿ ಸರ್ವೇಸಾಮಾನ್ಯ. ಸಹ್ಯಾದ್ರಿ ಶ್ರೇಣಿಗಳಿಂದ ಮೇಲಿಂದ ಕೆಳಕ್ಕೆ ಧುಮುಕುವ ಚಿಕ್ಕಚಿಕ್ಕ ಜಲಪಾತಗಳಿಗೆ ಇಲ್ಲಿ ಲೆಕ್ಕವಿಲ್ಲ. ಅರಣ್ಯದ ಸುಮನೋಹರ ಹಾಗು ದಟ್ಟ ಅರಣ್ಯದ ಭಯಂಕರತೆಯನ್ನು ಇಲ್ಲಿ ಅನುಭವಿಸಬಹುದು. ಮಳೆಗಾಲದಲ್ಲಿ ಸಿಡಿಲು, ಗುಡುಗು, ಮಿಂಚು, ಮಳೆಗಳಿಂದ ಆಗುಂಬೆ ಭಯಂಕರವೆನಿಸುತ್ತದೆ. ದಟ್ಟಕಾಡಿನಿಂದಲೂ ಮಳೆಮೋಡಗಳ ಆವರಣದಿಂದಲೂ ಮಳೆಗಾಲ ಮೂರು ತಿಂಗಳು ಇಲ್ಲಿ ಸೂರ್ಯನ ಬಿಸಿಲು ಬೀಳುವುದು ತುಂಬ ಅಪೂರ್ವವಾಗಿರುತ್ತದೆ.

ಆಗುಂಬೆಯ ಪೇಟೆಯಿಂದ ಸುಮಾರು ಒಂದು ಮೈಲು ಪಶ್ಚಿಮದಲ್ಲಿ ಸೂರ್ಯಾಸ್ತಮಾನ ದೃಶ್ಯವನ್ನು ಕಾಣಲು ಬೆಟ್ಟದ ನೆತ್ತಿಯಲ್ಲಿ ಒಂದು ರಂಗಸ್ಥಳವನ್ನು ಮಾಡಿದ್ದಾರೆ. ವರ್ಷವಿಡೀ ಮಳೆಗಾಲದಂತಿರುವ ಈ ಭೂಭಾಗದ ದೃಶ್ಯವನ್ನು ನೋಡಲು ದೇಶೀಯ, ವಿದೇಶೀಯ ಪ್ರವಾಸಿಗಳು ಇಲ್ಲಿಗೆ ಸಾವಿರಾರು ಸಂಖ್ಯೆಯಲ್ಲಿ ಬರುತ್ತಾರೆ. ಮೋಡವಲ್ಲದ ಶುಭ್ರ ಸಂಜೆಗಳಲ್ಲಿ ಸೂರ್ಯಾಸ್ತವನ್ನು ನೋಡಲು ಚೆನ್ನ. ಈ ರಂಗಸ್ಥಳದಿಂದ ಕಾಣುವ ಸುಮಾರು ಅಡಿಗಳ ಪಾತಾಳ ದರ್ಶನ ರೋಮಾಂಚನಗೊಳಿಸುತ್ತದೆ. ಕೇವಲ ಆಳ ಮಾತ್ರವಲ್ಲ, ಪಡುಗಡಲ ತಡಿಯವರೆಗಿನ, ಅಲ್ಲಿಂದ ದಿಗಂತದ ಅಂಚಿನವರೆಗಿನ ಸುಮಾರು ಮೈಲುಗಳ ವಿಸ್ತಾರ ಒಮ್ಮೆಗೇ ಕಣ್ಣುಗಳನ್ನು ತುಂಬುತ್ತದೆ. ಆ ಕ್ಷಣದಲ್ಲಿ ಆಗುವ ಅನುಭವ ಮಾತಿಗೆ ಮೀರಿದ್ದಾಗಿದ್ದು, ಇದು ಮೌನವಾಗಿಯೇ ಅನುಭವಿಸು ವಂಥದ್ದಾಗಿದೆ.

ಸಂಜೆಯ ಸಮಯದಲ್ಲಿ ಸೌಂದರ್ಯದ ವಾರಿಧಿಯೇ ನಮ್ಮೆದುರು ನಿಲ್ಲುತ್ತದೆ. ಸೂರ್ಯ ತನ್ನ ಪ್ರಖರತೆಯನ್ನು ಕಳೆದುಕೊಂಡು ಇಳಿಯುತ್ತಿರುವಾಗ ಕ್ಷಣಕ್ಷಣವೂ ಸಮುದ್ರ ಸುತ್ತಮುತ್ತಲಿನ ಮೇಘಮಾಲೆ ಬಗೆಬಗೆಯ ಬಣ್ಣವನ್ನು ತಳೆಯುತ್ತವೆ. ಸೂರ್ಯಾಸ್ತಮಾನದ ನಾಟಕವನ್ನಾಡಲು ಪ್ರಕೃತಿ ನಿರ್ಮಿಸಿದ ಮಹಾಪಟವಾಗಿ ಪಶ್ಚಿಮಾಕಾಶ ಚಿತ್ರ ವೈಚಿತ್ರ್ಯಗಳಿಂದ ತುಂಬಿರುತ್ತದೆ. ಸೂರ್ಯ ಇಳಿಯುತ್ತಿರುವಂತೆ ಕಡಲು ಮೊದಮೊದಲು ಹೊಂಬಣ್ಣದ ಹಾಳೆಯಾಗಿದ್ದು, ದಿಗಂತರೇಖೆಗೆ

ಹತ್ತಿರವಾದಾಗ ಸಮಸ್ತ ಸಮುದ್ರ ವಿಸ್ತಾರ ರಕ್ತಾರುಣರೇಖೆಯಾಗುತ್ತದೆ. ಪ್ರಕೃತಿಯ ಸುಂದರದೃಶ್ಯಗಳಲ್ಲಿ ಒಂದಾದ ಸೂರ್ಯಾಸ್ತಮಾನ ಭಾರತದಲ್ಲಿ ಮತ್ತೆಲ್ಲಿಯೂ ಇಷ್ಟು ಸುಂದರವಾಗಿ ಕಾಣಿಸುವುದಿಲ್ಲವಂತೆ, ಈ ಒಂದು ಅಮೃತಗಳಿಗೆಯನ್ನು ಸವಿಯಲೆಂದೇ ಇಲ್ಲಿಗೆ ಪ್ರವಾಸಿಗಳು ಬರುತ್ತಾರೆ.

ಯಾವ ಚಿತ್ರಕಾರನ ಚಿತ್ರವೂ ಈ ನಿಸರ್ಗ ನಿರ್ಮಿತ ಕಲಾಕೃತಿಗೆ ಸರಿದೂಗದು ಎಂದೆನಿಸುತ್ತದೆ. ಸೂರ್ಯ ಮುಳುಗುವ ಕೊನೆಯ ಒಂದು ನಿಮಿಷದ ಹೊತ್ತಂತೂ ಅಪೂರ್ವ ರಸಗಳಿಗೆ ಎಂದೆನಿಸುತ್ತದೆ. ಆಗುಂಬೆಯ ಸೂರ್ಯಾಸ್ತಮಾನದ ಸಮಯ ಸೂರ್ಯ ಕವುಚಿಟ್ಟ ಸ್ವರ್ಣ ಕುಂಭಾಕೃತಿಯಾಗಿ, ಅರ್ಧಚಂದ್ರಾಕೃತಿಯಾಗಿ; ಕಟ್ಟಕಡೆಗೆ ಬಿದಿಗೆಯ ಚಂದ್ರಲೇಖೆಯಾಗಿ ತನ್ನ ಕೊನೆಯ ರೂಪದಲ್ಲಿ ಮರೆಯಾಗುವ ಸೌಂದರ್ಯ ನಾಟಕ ದೃಶ್ಯ ಆನಂದದ ಹುಚ್ಚು ಹಿಡಿಸುತ್ತದೆ. ಸಾಯುವುದರೊಳಗೆ ಈ ಒಂದು ಅಮೃತಗಳಿಗೆಯನ್ನು ಕಾಣದೇ ಹೋಗುವವನು ಏನೋ ಕಳೆದುಕೊಂಡಂತಾಗುತ್ತದೆ.

**ಗುಡವಿ ಪಕ್ಷಿಧಾಮ:** ಶಿವಮೊಗ್ಗ ಜಿಲ್ಲೆಯ ತಾಲ್ಲೂಕು ಕೇಂದ್ರವಾದ ಸೊರಬದಿಂದ ೧೬ ಕಿ.ಮೀ. ದೂರದಲ್ಲಿರುವ ಗುಡವಿ ಎಂಬ ಪುಟ್ಟ ಹಳ್ಳಿಯ ಸಮೀಪದಲ್ಲಿರುವ ಸರೋವರದಲ್ಲಿ ಈ ಪಕ್ಷಿಧಾಮವಿದೆ. ಸಮೀಕ್ಷೆಯ ಪ್ರಕಾರ, ಸುಮಾರು ೨೦೦ಕ್ಕೂ ಹೆಚ್ಚು ಜಾತಿಯ ಪಕ್ಷಿಗಳು ಜೂನ್ ತಿಂಗಳಿಂದ ಅಕ್ಟೋಬರ್ ತಿಂಗಳವರೆಗೆ ತಮ್ಮ ಸಂತಾನೋತ್ಪತ್ತಿಯ ಪ್ರಕ್ರಿಯೆಗೆಂದು ಹೊರದೇಶಗಳಿಂದ ಇಲ್ಲಿಗೆ ಆಗಮಿಸಿ, ಇಲ್ಲಿನ ಮರಗಳಲ್ಲಿ ಗೂಡು ಕಟ್ಟಿಕೊಂಡು ಇರುತ್ತವೆ. ನೈಸರ್ಗಿಕ ಕೆರೆ ಮತ್ತು ಮರಗಳು ಈ ಪಕ್ಷಿಗಳಿಗೆ ಆಶ್ರಯ ನೀಡುತ್ತವೆ.

ಈ ಪಕ್ಷಿಧಾಮವು ೦.೭೪ ಚದರ ಕಿ.ಮೀ. ವಿಸ್ತೀರ್ಣದಲ್ಲಿ ಹರಡಿದೆ. ವಿವಿಧ ಜಾತಿಯ ಪಕ್ಷಿಗಳು ಈ ಸ್ಥಳದಲ್ಲಿ ಸುಂದರ ಕಲರವ ಮಾಡುವುದು ಕಂಡುಬರುತ್ತವೆ. ಗುಡವಿ ಸರೋವರದ ಮರಗಳು ತನ್ನ ದಂಡೆಗಳ ಉದ್ದಕ್ಕೂ ಸುಂದರವಾದ ದೃಶ್ಯವಾಗಿ ಕಾಣುತ್ತದೆ. ಇದು ಒಂದು ಸಣ್ಣ ಕಾಲೋಚಿತ ಸರೋವರವಾಗಿದ್ದು, ಹೆಚ್ಚಾಗಿ ಮಳೆಗಾಲದಲ್ಲಿ ನೀರಿನಿಂದ ತುಂಬಿರುತ್ತದೆ. ವಿವಿಧ ಏವಿಯನ್ ಪ್ರಭೇಧಗಳ ಪಕ್ಷಿಗಳು ಸಂತಾನೋತ್ಪತ್ತಿಗಾಗಿ ವಿವಿಧ ಋತುಗಳಲ್ಲಿ ಜಗತ್ತಿನಾದ್ಯಂತದಿಂದ ಇಲ್ಲಿಗೆ ವಲಸೆ ಬರುತ್ತವೆ. ಪಕ್ಷಿ ವೀಕ್ಷಕರು ಪಕ್ಷಿಗಳನ್ನು ಸಮೀಪದಿಂದ ನೋಡಲೆಂದೇ ಎತ್ತರದಲ್ಲಿ ಒಂದು ವೇದಿಕೆಯನ್ನು ಇಲ್ಲಿ ನಿರ್ಮಿಸಲಾಗಿದೆ.

ಮೈಸೂರಿನ ರಂಗನತಿಟ್ಟಿನಂತೆಯೇ ಇಲ್ಲಿಯ ಪಕ್ಷಿಗಳನ್ನು ನೋಡಲು ಸಹಸ್ರಾರು ಪ್ರವಾಸಿಗರು ಆಗಮಿಸುತ್ತಾರೆ. ಒಂದೆರಡು ದಶಕಗಳ ಈಚೆಗೆ ಈ ಪಕ್ಷಿಧಾಮ ಪ್ರಚಾರವನ್ನು ಪಡೆದಿದೆ. ಇನ್ನೂ ಹಲವು ರೀತಿಯ ಆಧುನಿಕ ವ್ಯವಸ್ಥೆಗಳನ್ನು ಈ ಪಕ್ಷಿಧಾಮ ಸರ್ಕಾರದಿಂದ ಪಡೆಯಬೇಕಾಗಿದೆ.

**ಹೊನ್ನೆಮರಡು:** ಹೊನ್ನೆಮರಡು ಶಿವಮೊಗ್ಗ ಜಿಲ್ಲೆಯ ಸಾಗರದಿಂದ ೨೫ ಕಿ.ಮಿ. ದೂರದಲ್ಲಿರುವ ಒಂದು ಪ್ರವಾಸಿ ತಾಣ. ಇದು ಶರಾವತಿ ನದಿಯ ದಡದಲ್ಲಿರುವ ಹಿನ್ನೀರಿನ ಪ್ರದೇಶವಾಗಿದೆ.

ಹೊನ್ನೆಮರಡು ನಿಸರ್ಗದ ಸುಂದರ ನೋಟವನ್ನು ನಿಮ್ಮ ಮುಂದೆ ಅನಾವರಣಗೊಳಿಸುತ್ತದೆ. ಶರಾವತಿ ನದಿಗೆ ಲಿಂಗನಮಕ್ಕಿಯಲ್ಲಿ ಕಟ್ಟಿರುವ ಅಣೆಕಟ್ಟಿನಿಂದ ಹೊನ್ನೆಮರಡು ಅಂತಹ ನಿಸರ್ಗ ಸಹಜ ಸೌಂದರ್ಯವನ್ನು ಸೃಷ್ಟಿ ಮಾಡಿದೆ. ಅತೀ ದೂರದವರೆಗೆ ಶುಭ್ರ ನೀರಿನ ನೋಟ ಯಾವುದೇ ರೀತಿಯ ಮಾಲಿನ್ಯಕ್ಕೆ ಅವಕಾಶವಿಲ್ಲದೇ ಪ್ರವಾಸಿಗರನ್ನು ಸೆಳೆಯುತ್ತದೆ. ತೆಪ್ಪದಲ್ಲಿ ಒಂದು ಸುತ್ತು ಹಾಕಿ, ನೀರಿನ ನಡುವೆ ಇರುವ ನಡುಗಡ್ಡೆಗಳಿಗೆ ಹೋಗಿ ಬಂದರೆ ಆ ಪ್ರವಾಸದ ಸವಿ ರುಚಿಯ ನೆನಪು ಸಾಕಷ್ಟು ದಿನ ಕಾಡುತ್ತಲೇ ಇರುತ್ತದೆ.

**ವರದಹಳ್ಳಿ:** ವರದಹಳ್ಳಿ ಅಥವಾ ವರದಪುರ ಅಥವಾ ವದ್ದಳ್ಳಿ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನಲ್ಲಿದೆ. ಇದು ಶ್ರೀ ಶ್ರೀಧರ ಸ್ವಾಮಿಗಳು ತಪಸ್ಸು ಮಾಡಿದ ಮತ್ತು ಸಮಾಧಿ ಹೊಂದಿದ ಸ್ಥಳವಾಗಿದೆ. ಇಲ್ಲಿ ಶ್ರೀಧರ ಸ್ವಾಮಿಗಳು ಸ್ಥಾಪಿಸಿದ ಆಶ್ರಮ, ಅವರ ಸಮಾಧಿ ಮತ್ತು ಧರ್ಮ ಧ್ವಜಗಳನ್ನು ಕಾಣಬಹುದು. ಇತಿಹಾಸ ಪ್ರಸಿದ್ಧವಾದ ಶ್ರೀ ದುರ್ಗಾಂಬಾ ದೇವಾಲಯ ಇಲ್ಲಿದೆ. ದುರ್ಗಾಂಬಾ ದೇವಿಯು ಮೂಕಾಸುರನನ್ನು ಒದ್ದಾಗ ಅವನು ಇಲ್ಲಿ ಬಂದು ಬಿದ್ದನಂತೆ. ಹಾಗಾಗಿ ದೇವಿ ಒದ್ದ ಹಳ್ಳಿ "ವದ್ದಳ್ಳಿ" ಅಂತ ನಾಮಕರಣವಾಯಿತೆಂದು ಇಲ್ಲಿಯ ಜನರು ಹೇಳುತ್ತಾರೆ.

ವರದಹಳ್ಳಿಗೆ ಬಂದಾಗ ಮೊದಲು ಒಂದು ಕೊಳ ಸಿಗುತ್ತದೆ. ಅದರ ಪಕ್ಕದಲ್ಲಿ ಗೋಮುಖ ತೀರ್ಥ ಇದೆ. ವರ್ಷವಿಡೀ ಬೀಳುತ್ತಿರೋ ಈ ತೀರ್ಥದಲ್ಲಿ ಅನೇಕ ಔಷಧೀಯ ಗುಣಗಳಿವೆ ಎಂದು ಭಕ್ತರು ನಂಬುತ್ತಾರೆ. ಹಾಗೇ ತೀರ್ಥದ ಪಕ್ಕದಲ್ಲಿನ ಮೆಟ್ಟಿಲುಗಳಲ್ಲಿ ಮೇಲಕ್ಕೆ ಹತ್ತಿ ಬಂದರೆ ಶ್ರೀಧರ ಸ್ವಾಮಿಗಳು ಕೂತು ತಪಸ್ಸು ಮಾಡುತ್ತಿದ್ದ ಸ್ಥಳ ಸಿಗುತ್ತದೆ. ಅಲ್ಲಿ ಶ್ರೀಧರ ತೀರ್ಥ ಬೆಟ್ಟದ ತಪ್ಪಲಿಂದ, ಬಂಡೆಯ ಸಂದಿಯಿಂದ ಬಂದು ಬೀಳುವುದು ಕಾಣುತ್ತದೆ. ಹಾಗೇ ಬಲಕ್ಕೆ ತಿರುಗಿದರೆ ಗುರುಕುಲ ಕಾಣಿಸುತ್ತದೆ. ಇದರ ಪಕ್ಕದಲ್ಲಿನ ದಟ್ಟ ಅರಣ್ಯವನ್ನು ದೇವರ ಕಾಡು ಎಂಬ ಸಂರಕ್ಷಿತ ಅರಣ್ಯವನ್ನಾಗಿ ಘೋಷಿಸಲಾಗಿದೆ.

ಮೇಲೆ ಸಾಗಿದರೆ ಮೊದಲೊಂದು ಗುರುಕುಲವೂ, ಅದಕ್ಕಿಂತ ಮೇಲೆ ಸಾಗಿದರೆ ಸಾಮವೇದ ಪಾಠಶಾಲೆಯೂ ಇಲ್ಲಿದೆ. ಅದರ ಪಕ್ಕದಲ್ಲಿ ಶ್ರೀಧರರು ಸಮಾಧಿ ಹೊಂದಿದ ಜಾಗ, ಆ ಜಾಗದಲ್ಲಿ ಕಟ್ಟಲಾದ ಮಂದಿರವನ್ನು ಕಾಣಬಹುದು. ಈ ಮಂದಿರ ಬೆಳಗ್ಗೆ ೬ ಘಂಟೆಯಿಂದ ಮಧ್ಯಾಹ್ನ ೨ ಘಂಟೆಯವರೆಗೆ ಹಾಗು ಸಂಜೆ ನಾಲ್ಕರಿಂದ ಎಂಟರವರೆಗೆ ತೆರೆದಿರುತ್ತದೆ. ಮಂದಿರದ ಎಡಭಾಗದಲ್ಲಿ ಶ್ರೀಧರರ ಏಕಾಂತಗುಹೆ ಕಾಣುತ್ತದೆ. ಭಕ್ತರು ನೋಡಲನುವಾಗುವಂತೆ ಅದಕ್ಕೊಂದು ಕಿಟಕಿಯಿಟ್ಟಿದ್ದಾರೆ. ಅಲ್ಲಿಗೆ ಬಂದ ಭಕ್ತರು ಆ ಕಿಟಕಿಯಲ್ಲಿ ನಾಣ್ಯಗಳನ್ನು ಹಾಕುವುದು ಇಲ್ಲಿನ ಒಂದು ಪದ್ಧತಿ. ಪಕ್ಕದಲ್ಲಿ ಶ್ರೀಧರರ ಜೀವನವನ್ನು ನೆನಪಿಸುವ ಅಪರೂಪದ ಕಪ್ಪು ಬಿಳುಪು ಛಾಯಾಚಿತ್ರಗಳ ಸಂಗ್ರಹವಿದೆ.

ನವರಾತ್ರಿಯ ಸಮಯದಲ್ಲಿ ಇಲ್ಲಿನ ಸಾಮವೇದ ಗುರುಕುಲದಲ್ಲಿ ಶಾರದಾದೇವಿಯ ಮೂರ್ತಿಯನ್ನಿಟ್ಟು ಅಲಂಕರಿಸಿರುತ್ತಾರೆ. ದತ್ತಜಯಂತಿ ಇಲ್ಲಿನ ಮತ್ತೊಂದು ಆಕರ್ಷಣೆ. ಸಾಮವೇದ ಗುರುಕುಲದಿಂದ ಸುಮಾರು ಒಂದೂವರೆ ಕಿಲೋಮೀಟರ್ ನಡೆದರೆ ಧರ್ಮಧ್ವಜ ಸಿಗುತ್ತದೆ. ಇಲ್ಲಿಂದ ಶರಾವತಿ ಹಿನ್ನೀರಿನ, ಮುಳುಗಡೆಯ ದೃಶ್ಯಗಳನ್ನೂ ನೋಡಬಹುದು. ಸುಪ್ರಸಿದ್ಧ ಕನ್ನಡ ಚಲನ ಚಿತ್ರ "ಅಮೃತ ಘಳಿಗೆ"ಯ ಹಾಡುಗಳನ್ನು ಈ ಧರ್ಮಧ್ವಜದ ಪಕ್ಕದಲ್ಲೇ ಚಿತ್ರಿಸಲಾಗಿದೆ.

**ಸಿಗಂದೂರು:** ಸಿಗಂದೂರು ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನಲ್ಲಿರುವ ಪ್ರಸಿದ್ಧ ಯಾತ್ರಾಸ್ಥಳವಾಗಿದೆ. ಶ್ರೀ ಚೌಡೇಶ್ವರಿ ಅಮ್ಮನವರ ದೇವಾಲಯ ಇಲ್ಲಿದೆ. ಸಿಗಂದೂರೇಶ್ವರಿ ಎಂದೂ ಈ ಅಮ್ಮನವರನ್ನು ಕರೆಯುತ್ತಾರೆ. ಮಕರ ಸಂಕ್ರಾಂತಿ ವೇಳೆ ಇಲ್ಲಿ ಜಾತ್ರೆ ನಡೆಯುತ್ತದೆ. ಚೌಡಮ್ಮ ದೇವಿಯು ಕಳ್ಳರ ಕಳ್ಳತನದ ಭಯವನ್ನು ಹೋಗಲಾಡಿಸುವ ಶಕ್ತಿಯನ್ನು ಹೊಂದಿದವಳಾಗಿದ್ದಾಳೆ. ಇಲ್ಲಿ ಹರಕೆ ಹೊತ್ತುಕೊಂಡಿರುವ ಭಕ್ತರು ಕಳ್ಳಕಾಕರ ಭಯವಿಲ್ಲದೇ ನೆಮ್ಮದಿಯಿಂದ ಬದುಕುತ್ತಿದ್ದಾರೆ. ಹರಕೆ ಹೊತ್ತುಕೊಂಡಿರುವ ಭಕ್ತರ ಮನೆಯಲ್ಲಿ ಕಳ್ಳತನವಾದರೆ ಕಳ್ಳರನ್ನು ದೇವಿ ಭಯಂಕರವಾಗಿ ಶಿಕ್ಷಿಸುತ್ತಾಳೆ ಎಂಬ ಪ್ರತೀತಿ ಇದೆ. ಆದುದರಿಂದ ಈ ಭಾಗದಲ್ಲಿ ಹೆಚ್ಚಿನ ಮನೆ, ಆಸ್ತಿಗಳಲ್ಲಿ ದೇವಿ ಶಿಕ್ಷಿಸುವ ಬಗ್ಗೆ ಬರೆದಿರುವ ಫಲಕಗಳನ್ನು ಹರಕೆ ಹೊತ್ತುಕೊಂಡಿರುವವರು ಹಾಕಿರುತ್ತಾರೆ. ಅಲ್ಲದೆ ಅಮೂಲ್ಯ ವಸ್ತುಗಳು ಕಳೆದು ಹೋದಲ್ಲಿ ದೇವಿಯಲ್ಲಿ ಕೂಡಲೆ ಹರಕೆ ಹೊತ್ತುಕೊಂಡಲ್ಲಿ ವಸ್ತುಗಳು ಸಿಗುತ್ತವೆ ಎಂಬ ನಂಬಿಕೆ ಈ ಭಾಗದ ಭಕ್ತರಲ್ಲಿದೆ. ಇದಕ್ಕೆ ಸಾಕಷ್ಟು ನಿದರ್ಶನಗಳು ಇಲ್ಲಿ ಇವೆ.

ಸಿಗಂದೂರು ಸಾಗರದಿಂದ ಸುಮಾರು ೩೨ ಕಿ.ಮಿ. ದೂರದಲ್ಲಿದೆ. ಸಾಗರದಿಂದ ಆವಿನಹಳ್ಳಿ ದಾರಿಯಾಗಿ ಹೊಳೆಬಾಗಿಲುವರೆಗೆ ರಸ್ತೆಯಿದೆ. ಹೊಳೆಬಾಗಿಲಿನಲ್ಲಿ ಲಿಂಗನಮಕ್ಕಿ ಅಣೆಕಟ್ಟಿನ ಹಿನ್ನೀರು ಎದುರಾಗುತ್ತದೆ. ಇಲ್ಲಿ ಮುಂದೆ ಸೇತುವೆ ಇಲ್ಲ. ಕಡವನ್ನು(ಲಾಂಚ್) ಬಳಸಿಕೊಂಡು ಹಿನ್ನೀರನ್ನು ದಾಟಬೇಕಾಗುತ್ತದೆ. ಈ ದಾರಿಯಾಗಿ ಬರುವ ಎಲ್ಲಾ ವಾಹನಗಳಿಗೂ ಈ ಕಡವನ್ನು ಬಳಸುವುದು ಅನಿವಾರ್ಯ. ಹಿನ್ನೀರು ಸುಮಾರು ೨ ಕಿ.ಮಿ. ದೂರವಿದೆ. ಈ ಹಿನ್ನೀರಿನಲ್ಲಿ ಪಯಣಿಸುವುದೇ ರೋಮಾಂಚನಕಾರಿಯಾಗಿದೆ. ಕಡವು ನಿಗದಿತ ಸಮಯಗಳಲ್ಲಿ ಮಾತ್ರ ಲಭ್ಯವಿರುತ್ತದೆ. ಇನ್ನೊಂದು ದಡದಲ್ಲಿರುವ ಕಳಸವಳ್ಳಿಯಿಂದ ದೇವಸ್ಥಾನ ಸುಮಾರು ೨ ಕಿ.ಮಿ. ದೂರದಲ್ಲಿದೆ. ಕೊಲ್ಲೂರಿನಿಂದ ಬರುವವರು ನಾಗೋಡಿ ಘಟ್ಟವನ್ನು ಏರಿ ನಾಗೋಡಿಯಿಂದ ತುಮರಿ ಮಾರ್ಗವಾಗಿ ಸಿಗಂದೂರಿಗೆ ಬರಬಹುದು. ಇಲ್ಲಿ ಯಾವುದೇ ಹಿನ್ನೀರು ಸಿಗುವುದಿಲ್ಲ. ಕೊಲ್ಲೂರಿನಿಂದ ಸಿಗಂದೂರು ಸುಮಾರು ೪೫ ಕಿ.ಮಿ. ದೂರವಿದೆ.

**ವರದಾಮೂಲ:** ವರದಾಮೂಲ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನಲ್ಲಿದೆ. ಇದು ವರದಾ ನದಿಯ ಉಗಮ ಸ್ಥಳ. ಈ ಕ್ಷೇತ್ರದಲ್ಲಿ ಶ್ರೀ ವರದಾಂಬಾ ದೇವಿಯ ದೇವಸ್ಥಾನವೂ ಇದೆ.

ವರದಾಮೂಲವು ಸಾಗರ ನಗರದಿಂದ ೬ ಕಿ.ಮೀ ದೂರದಲ್ಲಿ ಇದ್ದು, ಇದು ಮಲೆನಾಡಿನ ಒಂದು ಸುಂದರ ಸ್ಥಳವಾಗಿದೆ. ಇದು ಕರ್ನಾಟಕದ ಒಂದು ಪ್ರಮುಖ ಯಾತ್ರಾ ಸ್ಥಳ ಹಾಗೂ ಪ್ರವಾಸಿ ತಾಣವಾಗಿದೆ.

ವರದಾಮೂಲ ಎನ್ನುವ ಹೆಸರೇ ಹೇಳುವಂತೆ ವರದಾನದಿಯ ಉಗಮ ಸ್ಥಾನವಾಗಿದೆ. ಇಲ್ಲಿ ವರದಾನದಿಯು ವರದಾಂಬಾ ದೇವಿಯ ಪಾದದಡಿಯಿಂದ ಉದ್ಭವಿಸಿ, ಲಕ್ಷ್ಮೀತೀರ್ಥವೆಂದು ಕರೆಯಲ್ಪಡುತ್ತದೆ. ಮುಂದೆ ಈ ಲಕ್ಷ್ಮೀತೀರ್ಥವೇ ವರದಾ ನದಿಯಾಗಿ ಹರಿಯುತ್ತದೆ.

ವರದಾ ಮೂಲಕ್ಕೆ ಬಂದವರಿಗೆ ಮೊದಲು ಎದುರಾಗುವುದು ಸರ್ವತೀರ್ಥ. ಅದಕ್ಕೆ ಇಳಿಯುವ ಜಾಗದಲ್ಲಿ ಬಲಬದಿಯಲ್ಲಿ ಕಾಲಭೈರವನ ವಿಗ್ರಹವಿದೆ. ಹೊಯ್ಸಳರ ದೇಗುಲಗಳಲ್ಲಿ ಅತೀ ಸಾಮಾನ್ಯವೆನಿಸುವ ಸ್ಮಶಾನಭೈರವಿಯ ಶಿಲ್ಪವನ್ನು ಈ ಶಿಲ್ಪ ನೆನಪಿಸಿದರೆ ಅಚ್ಚರಿಯಿಲ್ಲ. ದೇವಿಯ ಕೈಯಲ್ಲಿರೋ ರುಂಡಕ್ಕೆ ಬಾಯಿ ಹಾಕುತ್ತಿರುವ ನಾಯಿಯ ಚಿತ್ರಣ ಇಲ್ಲೂ ಇದ್ದರೂ ಸ್ಮಶಾನ ಭೈರವಿಯ ಶಿಲ್ಪದಲ್ಲಿರುವ ಪ್ರೇತಗಣಗಳು, ಅದರಲ್ಲೊಂದರ ಕೈಯಲ್ಲಿರೋ ಮಗು ಮುಂತಾದ ಕೆತ್ತನೆಗಳು ಇಲ್ಲಿಲ್ಲ. ಅದರಿಂದ ಹಾಗೇ ಮುಂದೆ ಬಂದರೆ ತ್ರಿಲೋಚನ ಎಂದು ಕರೆಯಲ್ಪಡುವ ಶಿವಲಿಂಗ ಮತ್ತು ಪ್ರಸನ್ನ ಗಣಪತಿಯ ದೇಗುಲಗಳಿವೆ.

ಗಾಯಿತ್ರಿ, ಸಾವಿತ್ರಿ, ಸರಸ್ವತಿ ದೇವಿಯರ ಸಂಗಮರೂಪವೆಂದು ನಂಬಲಾಗುವ ವರದೆಯು ಎಡಗೈಯಲ್ಲಿ ವರದಹಸ್ತೆ. ಎರಡೂ ಕಡೆ ವರ ಕೊಡುವುದರಿಂದ ವರದಾಂಬಿಕೆಯೆಂಬ ನಂಬಿಕೆ ಇದೆಯೆಂದೂ ಪ್ರತೀತಿ ಇದೆ. ಈ ಕ್ಷೇತ್ರಕ್ಕೆ ಮೊದಲು ತೀರ್ಥರಾಜಪುರ ಎಂಬ ಹೆಸರೂ ಇತ್ತಂತೆ. ಅದರ ಬಗೆಗಿನ ಉಲ್ಲೇಖಗಳನ್ನು ನೋಡುವುದಾದರೆ ಮಹಾರಾಜ ಸಗರನು ನೀರಿಗಾಗಿ ಯಜ್ಞ ವೊಂದನ್ನು ಕೈಗೊಳ್ಳಲು ತಾಯಿ ವರದೆ ಪ್ರತ್ಯಕ್ಷಳಾಗಿ, ನೀನು ಹೋದಲ್ಲೆಲ್ಲಾ ನಾನು ಹಿಂಬಾಲಿಸಿಕೊಂಡು ಬರುತ್ತೇನೆಂದೂ, ಆದರೆ ಹಿಂದಿರುಗಿ ನೋಡಬಾರದೆಂದೂ ಹೇಳುತ್ತಾಳಂತೆ. ಆತ ಸಾಗರವೆಂಬ ಪ್ರದೇಶದಲ್ಲಿ ಹಿಂತಿರುಗಿ ನೋಡುತ್ತಾನಂತೆ. ಅಲ್ಲಿಗೆ ನದಿಯ ಹರಿಯುವಿಕೆ ನಿಂತು ಆಕೆ ಬೃಹದಾಕಾರವಾಗಿ ಶೇಖರಗೊಳ್ಳುತ್ತಾಳಂತೆ. ಅದೇ ಈಗಿನ ಸಾಗರವೆಂಬ ಊರೆಂದು ಪ್ರತೀತಿ! ಈ ಕಥೆ ಭಗೀರಥನು ಭೂಮಿಗೆ ಗಂಗೆಯನ್ನು ತಂದ ಪ್ರಸಂಗವನ್ನು ಹೋಲುವಂತೆ ಇದ್ದರೂ, ಸಾಗರವೆಂದು ಬರುವ ಉಲ್ಲೇಖ ನಿಜವಾದ ಸಮುದ್ರದ ಪರಿಕಲ್ಪನೆಯೂ ಆಗಿರಬಹುದು ಎಂದೆನಿಸುತ್ತದೆ. ಈ ನದಿ ಉತ್ತರಕ್ಕೆ ಹರಿದು ಬಂಕಸಾಣ ಎಂಬ ಊರಿನಲ್ಲಿ ದಂಡಾವತಿ ನದಿಯನ್ನು ಸೇರುತ್ತದೆ. ನಂತರ ಮುಂದೆ ಕದಂಬರ ರಾಜಧಾನಿ ಬನವಾಸಿ ಮಾರ್ಗವಾಗಿ ಹರಿದು ಕೃಷ್ಣಾ ನದಿಗೆ ಸೇರಿಕೊಂಡು ಮುಂದೆ ಅರಬ್ಬೀ ಸಮುದ್ರವನ್ನು ಸೇರುತ್ತದೆ.

## ಜಿಲ್ಲೆಯ ಪ್ರಮುಖ ನದಿಗಳು

**ತುಂಗಭದ್ರಾ:** "ಗಂಗಾ ಸ್ನಾನ, ತುಂಗಾ ಪಾನ" ಎಂಬ ಗಾದೆ ಮಾತಿನಂತೆಯೇ ಕರ್ನಾಟಕ ರಾಜ್ಯದ ಅದರಲ್ಲೂ ಹೈದ್ರಾಬಾದ ಕರ್ನಾಟಕ ಪ್ರದೇಶದ ಜನತೆಗೆ ನೀರಿನ ದಾಹವನ್ನು ವರ್ಷವಿಡೀ ಪೂರೈಸುವ ಪವಿತ್ರ ನದಿಗಳಲ್ಲಿ ಒಂದಾದ ಈ ತುಂಗಭದ್ರಾ ನದಿಯು ದಕ್ಷಿಣ ಭಾರತದಲ್ಲೇ ದಕ್ಷಿಣಕ್ಕೆ ಹುಟ್ಟಿ, ಉತ್ತರಕ್ಕೆ ಹರಿಯುವ ಏಕೈಕ ನದಿಯಾಗಿದೆ. ಈ ನದಿಯು ದಕ್ಷಿಣ ಕನ್ನಡ ಜಿಲ್ಲೆಯ ಕುದುರೆಮುಖದ ಪಶ್ಚಿಮಘಟ್ಟದ ಕಣಿವೆಯಲ್ಲಿ ಜನಿಸುತ್ತದೆ. ನಂತರ ತುಂಗಾ ಮತ್ತು ಭದ್ರಾ ಎಂದು ಕವಲಾಗಿ ಹರಿದು, ಶಿವಮೊಗ್ಗ ಬಳಿಯ ಕೂಡಲಿ ಎಂಬಲ್ಲಿ ಒಂದನ್ನೊಂದು ಮತ್ತೆ ಸೇರಿಕೊಂಡು ತುಂಗಭದ್ರೆಯಾಗಿ ಮುಂದೆ ಭದ್ರಾವತಿ, ಹರಿಹರ, ಹೊಸಪೇಟೆಯವರೆಗೆ ಹರಿಯುತ್ತದೆ. ಹೊಸಪೇಟೆಯಲ್ಲಿ ಈ ನದಿಗೆ ಅಡ್ಡವಾಗಿ ಅಣೆಕಟ್ಟನ್ನು ನಿರ್ಮಿಸಲಾಗಿದೆ. ಈ ತುಂಗಭದ್ರ ಜಲಾಶಯದ ನೀರನ್ನು ಕೇವಲ ವ್ಯವಸಾಯಕ್ಕಾಗಿಯೇ ಬಳಸಲಾಗುತ್ತದೆ. ಇಲ್ಲಿಂದ ಮುಂದೆ ಈ ನದಿಯು ಶ್ರೀ ಕ್ಷೇತ್ರ ಹಂಪಿ ಹಾಗು ಮಂತ್ರಾಲಯ ಮಾರ್ಗವಾಗಿ ಆಂಧ್ರ ಪ್ರದೇಶವನ್ನು ಪ್ರವೇಶಿಸಿ, ಬಂಗಾಳಕೊಲ್ಲಿ ಸಮುದ್ರವನ್ನು ಸೇರುತ್ತದೆ.

**ಶರಾವತಿ:** ಶರಾವತಿ ನದಿಯು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಅಂಬುತೀರ್ಥದ ಬಳಿ ಪಶ್ಚಿಮಘಟ್ಟಗಳಲ್ಲಿ ಜನಿಸುತ್ತದೆ. ಶ್ರೀರಾಮನ ಶರ(ಬಾಣ)ದಿಂದ ಈ ನದಿ ಹುಟ್ಟಿದೆ ಎಂಬ ಪೌರಾಣಿಕ ಕಥೆ ಇದೆ. ಮುಂದೆ ಇದೇ ನದಿ ಸಾಗರ ತಾಲ್ಲೂಕಿನ ಜೋಗ ಎಂಬಲ್ಲಿ ೨೫೩ ಮೀ (ಸುಮಾರು ೯೫೦ ಅಡಿ) ಎತ್ತರದಿಂದ ಧುಮುಕುವ ಈ ನದಿಯ ಜಲಪಾತವು ಜಗತ್‌ಪ್ರಸಿದ್ಧ ಜೋಗ ಜಲಪಾತವಾಗಿದೆ. ಈ ನದಿಗೆ ಲಿಂಗನಮಕ್ಕಿಯಲ್ಲಿ ವಿಶ್ವವಿಖ್ಯಾತ ಸರ್. ಎಂ.ವಿಶ್ವೇಶ್ವರಯ್ಯನವರ ನೇತೃತ್ವದಲ್ಲಿ ಆಣೆಕಟ್ಟನ್ನು ಕಟ್ಟಿದ್ದು ಕರ್ನಾಟಕದ ಬಹುಪಾಲು ಪ್ರದೇಶಕ್ಕೆ ಈ ಜಲವಿದ್ಯುತ್ ಕೇಂದ್ರದಿಂದ ವಿದ್ಯುತ್ ಸರಬರಾಜು ಆಗುತ್ತಿದೆ. ಜೋಗದ ಕಣಿವೆಗೆ ಧುಮುಕಿದ ನಂತರ ಈ ಶರಾವತಿ ನದಿಯು ಮುಂದೆ ಸಾಗಿ, ಅರಬ್ಬೀ ಸಮುದ್ರವನ್ನು ಸೇರುತ್ತದೆ.

**ವರದಾ:** ಸಾಗರ ತಾಲ್ಲೂಕಿನ ವರದಾಮೂಲ ಎಂಬಲ್ಲಿ ವರದಾ ನದಿಯು ಜನಿಸುತ್ತದೆ. ಪೌರಾಣಿಕ ಹಿನ್ನೆಲೆಯ ಪ್ರಕಾರ ವರದಾ ಮೂಲದ ದೇವಿಯ ಕಾಲಿನ ಬೆರಳಿನಿಂದ ಈ ನದಿ ಹುಟ್ಟಿದೆ ಎಂಬ ಕಥೆ ಇದೆ. ಈ ನದಿಯು ಸಾಗರ ಸುತ್ತಮುತ್ತಲಿನ ರೈತಾಪಿ ಜನರ ಜೀವನದಿ ಆಗಿದ್ದು, ಈ ನದಿಯು ಮುಂದೆ ಕದಂಬರ ರಾಜಧಾನಿ ಬನವಾಸಿ ಮಾರ್ಗವಾಗಿ ಹರಿದು ಕೃಷ್ಣಾನದಿಗೆ ಸೇರಿಕೊಂಡು ಮುಂದೆ ಅರಬ್ಬೀ ಸಮುದ್ರವನ್ನು ಸೇರುತ್ತದೆ.

## ಜಿಲ್ಲೆಯ ನೀರಾವರಿ ಜಲಾಶಯಗಳು

**ಲಿಂಗನಮಕ್ಕಿ ಜಲಾಶಯ:** ಈ ಜಲಾಶಯವು ಸಾಗರ ತಾಲ್ಲೂಕಿನ ಹಾಗೂ ಉತ್ತರ ಕನ್ನಡ ಜಿಲ್ಲೆಯ ಸಿದ್ಧಾಪುರ ತಾಲ್ಲೂಕಿನ ಗಡಿಭಾಗದಲ್ಲಿದ್ದು, ಶರಾವತಿ ನದಿಗೆ ಈ ಆಣೆಕಟ್ಟನ್ನು ಕಟ್ಟಿದ್ದು,

ಮಹಾತ್ಮಗಾಂಧಿ ಹೈಡ್ರೋ ಎಲೆಕ್ಟ್ರಿಕ್ ಪ್ರೊಜೆಕ್ಟ್ ಎಂಬ ಹೆಸರಿನಿಂದ ಕರ್ನಾಟಕದ ಬಹುಪಾಲು ಪ್ರದೇಶಕ್ಕೆ ವಿದ್ಯುತ್ ನೀಡುತ್ತದೆ.

ಲಿಂಗನಮಕ್ಕಿ ಜಲಾಶಯವು ಕರ್ನಾಟಕದ ಸಾಗರ ತಾಲೂಕಿನಲ್ಲಿ ಶರಾವತಿ ನದಿಗೆ ಅಡ್ಡವಾಗಿ ೧೯೬೪ರಲ್ಲಿ ನಿರ್ಮಿತವಾಗಿದೆ. ಕರ್ನಾಟಕ ರಾಜ್ಯಕ್ಕೆ ಅಗತ್ಯವಿರುವ ವಿದ್ಯುತ್ತಿನಲ್ಲಿ ಹೆಚ್ಚಿನ ಪ್ರಮಾಣದ ವಿದ್ಯುತ್ ಲಿಂಗನಮಕ್ಕಿಯಲ್ಲೇ ಉತ್ಪಾದನೆಯಾಗುತ್ತದೆ. ಈ ಅಣೇಕಟ್ಟಿನಲ್ಲಿ ಮಿಲಿಯನ್ ಕ್ಯೂಬಿಕ್ ಮೀಟರ್ನಷ್ಟು ನೀರನ್ನು ಸಂಗ್ರಹಿಸಿ ಇಡಬಹುದಾಗಿದೆ.

**ಭದ್ರಾವತಿ ಜಲಾಶಯ:** ಈ ಜಲಾಶಯವು ಭದ್ರಾವತಿ ತಾಲ್ಲೂಕಿನ ಲಕ್ಕವಳ್ಳಿ ಎಂಬಲ್ಲಿದ್ದು ಭದ್ರಾ ನದಿಗೆ ಈ ಆಣೆಕಟ್ಟನ್ನು ನಿರ್ಮಿಸಲಾಗಿದೆ. ವಿಶ್ವವಿಖ್ಯಾತ ಸರ್. ಎಂ.ವಿಶ್ವೇಶ್ವರಯ್ಯನವರ ನೇತೃತ್ವದಲ್ಲಿ ಈ ಜಲಾಶಯದ ಆಣೆಕಟ್ಟನ್ನು ನಿರ್ಮಿಸಲಾಗಿದೆ. ವ್ಯವಸಾಯಕ್ಕಾಗಿಯೇ ಈ ಜಲಾಶಯದ ನೀರನ್ನು ಬಳಸಲಾಗುತ್ತದೆ.

**ಗಾಜನೂರು ಜಲಾಶಯ:** ಈ ಜಲಾಶಯವು ಶಿವಮೊಗ್ಗ ತಾಲ್ಲೂಕಿನ ಗಾಜನೂರಿನಲ್ಲಿದ್ದು, ತುಂಗಾನದಿಗೆ ಈ ಆಣೆಕಟ್ಟನ್ನು ನಿರ್ಮಿಸಲಾಗಿದೆ. ವ್ಯವಸಾಯಕ್ಕಾಗಿಯೇ ಈ ಜಲಾಶಯದ ನೀರನ್ನು ಬಳಸಲಾಗುತ್ತದೆ.

### ೫.೨ ಐತಿಹಾಸಿಕ

**ಮೂಲನಾಮ**

ಶಿವಮೊಗ್ಗ ಈ ಹೆಸರು ಈ ಜಿಲ್ಲೆಗೆ ಬರಲು ಹಲವು ಪುರಾತನ ಕಥೆಗಳಿವೆ ಅದರ ಪ್ರಕಾರ

೧. ಶಿವಮೊಗ್ಗ – ಶಿವ + ಮುಖ = ಶಿವಮುಖ = ಶಿವನ ಮುಖ

೨. ಶಿವಮೊಗ್ಗ – ಶಿವ + ಮೂಗು = ಶಿವನ ಮೂಗು = ಶಿವನ ಮೂಗು

೩. ಶಿವಮೊಗ್ಗ – ಶಿವ + ಮೊಗ್ಗೆ = (ಶಿವನಿಗೆ ಅರ್ಪಿತವಾದ ಅಥವಾ ಶಿವನಿಗೆ ಅರ್ಪಿಸಿದ ಹೂವುಗಳ ಮೊಗ್ಗು) ಶಿವಮೊಗ್ಗೆ

೪. ಶಿವಮೊಗ್ಗ – ಸಿಹಿ+ಮೊಗೆ = ಸಿಹಿಯಾದ ನೀರಿನ ಬಟ್ಟಲು(ಇಲ್ಲಿ ಮೊಗ ಎಂದರೆ ಬಟ್ಟಲು ಎಂಬ ಅರ್ಥವಾಗುತ್ತದೆ.)

ಒಟ್ಟಿನಲ್ಲಿ ಶಿವಮೊಗ್ಗ ಎಂಬುದು ಶಿವನ ಮುಖ, ಶಿವನ ಮೂಗು, ಶಿವನಿಗೆ ಅರ್ಪಿತವಾದ ಹೂವು ಎಂಬರ್ಥ ಎಂದು ತಿಳಿಯಬಹುದಾಗಿದೆ.

### ಇತಿಹಾಸದಲ್ಲಿ ಶಿವಮೊಗ್ಗ ಜಿಲ್ಲೆ

**ಚಂದ್ರಗುತ್ತಿ**

ಜಗತ್‌ಪ್ರಸಿದ್ಧ ಪರಶುರಾಮ ತನ್ನ ತಂದೆಯ ಆಜ್ಞೆಯಂತೆ ತನ್ನ ಸ್ವಂತ ತಾಯಿಯಾದ ರೇಣುಕಾದೇವಿಯ ತಲೆಯನ್ನು ಕಡಿದದ್ದು ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಚಂದ್ರಗುತ್ತಿ ಎಂಬ ಹಳ್ಳಿಯ ಬೆಟ್ಟದ ಮೇಲೆ ಎಂಬ ಪುರಾತನ ಕಥೆ ಇದೆ. ಈಗಲೂ ಚಂದ್ರಗುತ್ತಿ ಗ್ರಾಮದಲ್ಲಿ ಆ ರೇಣುಕಾದೇವಿ ನೆಲೆಸಿದ್ದಾಳೆ, ಅವಳ ಆತ್ಮ ರೇಣುಕಾದೇವಿ ದೇವಸ್ಥಾನದಲ್ಲೇ ಇದೆ ಎಂದು ಇಲ್ಲಿಯ ಹಿರಿಯರು ಹೇಳುತ್ತಾರೆ.

ಪರಶುರಾಮ ತನ್ನ ತಾಯಿ ರೇಣುಕಾದೇವಿಯ ತಲೆಯನ್ನು ತನ್ನ ಕೊಡಲಿಯಲ್ಲಿ ಕಡಿದ ನಂತರ ಯಾವ ನದಿ ನೀರಿನಲ್ಲಿ ಆ ಕೊಡಲಿಯನ್ನು ತೊಳೆದರೂ ರಕ್ತದ ಕಲೆ ಹೋಗಲಿಲ್ಲವಂತೆ ನಂತರ ಪರಶುರಾಮ ಈಗಿನ ತೀರ್ಥಹಳ್ಳಿ ಪಟ್ಟಣದ ಹತ್ತಿರ ಹರಿಯುತ್ತಿರುವ ತುಂಗಾನದಿಯಲ್ಲಿ ತನ್ನ ಕೊಡಲಿಯನ್ನು ತೊಳೆದಾಗ ಆ ರಕ್ತದ ಕಲೆ ಹೋಯಿತು ಎಂಬ ಕಥೆಯನ್ನು ಇಲ್ಲಿಯ ಹಿರಿಯರು ಹೇಳುತ್ತಾರೆ. ಅಂದು ಪರಶುರಾಮ ತನ್ನ ಕೊಡಲಿ ತೊಳೆದ ಆ ಜಾಗವನ್ನು ಈಗ "ಪರಶುರಾಮ ತೀರ್ಥ" ಎಂದು ಕರೆಯಲಾಗುತ್ತದೆ.

ಚಂದ್ರಗುತ್ತಿಯು ರೇಣುಕಾಂಬಾ ದೇವಾಲಯ ಮತ್ತು ಬೆಟ್ಟದ ಮೇಲಿರುವ ಪುರಾತನವಾದ ಕೋಟೆ ಪ್ರಸಿದ್ಧವಾಗಿದೆ. ಇಲ್ಲಿ ಪುರಾಣ ಪ್ರಸಿದ್ಧವಾದ ಪರುಶುರಾಮನ ತಾಯಿಯಾದ ರೇಣುಕಾಂಬೆ ದೇವಾಲಯವಿದೆ. ಎದುರಿಗೆ ಪರಶುರಾಮ ಮತ್ತು ಏಳು ಹೆಡೆಯ ನಾಗೇಂದ್ರನ ದೇವಾಲಯವು

ಇದೆ. ಇಲ್ಲಿ ಎತ್ತರವಾದ ಗುಡ್ಡವಿರುವುದರಿಂದ ಕದಂಬರ ಕಾಲದಲ್ಲಿ ಇಲ್ಲಿ ಕೋಟೆ ನಿರ್ಮಾಣಮಾಡಿ ಯುದ್ಧಕಾಲದಲ್ಲಿ ಬಳಸುತ್ತಿದ್ದರು. ಇಲ್ಲಿಂದ ಬನವಾಸಿಗೆ ಸುರಂಗಮಾರ್ಗವಿತ್ತೆಂಬ ಪ್ರತೀತಿ ಇದೆ.

ದೇವಾಲಯದ ಬೆಟ್ಟ ಎತ್ತರವಾಗಿದ್ದು ಚಾರಣಪ್ರಿಯರೂ ಕೂಡ ಭೇಟಿ ನೀಡಬಹುದಾದ ಸ್ಥಳ ಇದಾಗಿದೆ. ಬೆಟ್ಟ ಹತ್ತಲು ಕಾಲು ದಾರಿಯಿದ್ದು, ಉತ್ತಮ ಚಾರಣದ ಅನುಭವ ನೀಡುತ್ತದೆ. ಬೆಟ್ಟದ ಮೇಲೆ ಬಂಡೆಗಳಿಂದಾದ ಹೆಜ್ಜೆಯ ಆಕಾರದ ಕೊಳವೊಂದಿದ್ದು ಇದು ಭೀಮನ ಹೆಜ್ಜೆ ಎಂಬ ಪ್ರತೀತಿಯಿದೆ. ಇಲ್ಲಿಯೇ ಮದ್ದು ಗುಂಡುಗಳನ್ನು ಶೇಖರಿಸಿಡಲು ಬಳಸುತ್ತಿದ್ದ ಒಂದು ಮನೆಯೂ ಕೂಡ ಇದೆ. ಇದಲ್ಲದೆ ಹತ್ತುವಾಗ ದಾರಿಯಲ್ಲಿ ಆಗಿನ ಕಾಲದ ಕದಂಬರ ಕೋಟೆಗಳು ಹಾಗು ಯುದ್ಧದಲ್ಲಿ ಬಳಸುತ್ತಿದ್ದ ಫಿರಂಗಿಗಳನ್ನೂ ನೋಡಬಹುದು. ಇಲ್ಲಿ ಅಮವಾಸ್ಯೆ ಮತ್ತು ನವರಾತ್ರಿಗಳಲ್ಲಿ ಹೆಚ್ಚಾಗಿ ಜನಜಂಗುಳಿ ಕಂಡುಬರುತ್ತದೆ. ಸಾಮಾನ್ಯವಾಗಿ ಇಲ್ಲಿಗೆ ಉತ್ತರ ಕರ್ನಾಟಕದಿಂದ ಬರುವ ಭಕ್ತಾದಿಗಳು ಅಧಿಕ.

**ತಾಳಗುಂದ**

ಕರ್ನಾಟಕ ಇತಿಹಾಸದ ಕದಂಬರ ಮೊದಲ ರಾಜಧಾನಿ ಶಿವಮೊಗ್ಗ ಬಳಿಯ ತಾಳಗುಂದ ಗ್ರಾಮವಾಗಿತ್ತು. ನಂತರ ಇವರು ತಮ್ಮ ರಾಜಧಾನಿಯನ್ನು ಬನವಾಸಿಗೆ ಸ್ಥಳಾಂತರಿಸಿದರು. ಈಗಲೂ ತಾಳಗುಂದದಲ್ಲಿ ಕದಂಬರ ಆಳ್ವಿಕೆಯ ಹಲವು ಶಾಸನಗಳಿವೆ. ತಳಗುಂದ ಕದಂಬರ ಮೊದಲ ರಾಜಧಾನಿ ಎಂಬುದಕ್ಕೆ ಇವೇ ಸಾಕ್ಷಿಯಾಗಿವೆ.

**ಬಳ್ಳಿಗಾವಿ**

ಬಳ್ಳಿಗಾವಿ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನಲ್ಲಿರುವ ಒಂದು ಐತಿಹಾಸಿಕ ಸ್ಥಳ. ಇದು ದಕ್ಷಿಣದ ಕೇದಾರನಾಥವೆಂದೂ ಕರೆಯಲ್ಪಡುತ್ತದೆ. ಶಿಕಾರಿಪುರ ಪಟ್ಟಣದಿಂದ ಸುಮಾರು ೨೧ ಕಿ.ಮೀ ದೂರವಿರುವ ಈ ಪುಟ್ಟ ಹಳ್ಳಿ ಅಲ್ಲಮಪ್ರಭುಗಳ ಜನ್ಮಸ್ಥಳವೂ ಹೌದು. ಹೊಯ್ಸಳರ ವಿಷ್ಣುವರ್ಧನನ ರಾಣಿ ಶಾಂತಲಾದೇವಿಯ ತವರುಮನೆ. ಹೊಯ್ಸಳ ಶೈಲಿಯ ಕೇದಾರೇಶ್ವರ ದೇವಾಲಯದ ನಿರ್ಮಾಣ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಪ್ರಾರಂಭವಾಗಿ ಹೊಯ್ಸಳರ ಕಾಲದಲ್ಲಿ ಪೂರ್ಣಗೊಂಡಿತು.

ಬಳ್ಳಿಗಾವಿ ಕಲ್ಯಾಣ ಚಾಲುಕ್ಯರ ದಕ್ಷಿಣ ಭಾಗದ ನಾಡಿನ ರಾಜಧಾನಿಯಾಗಿತ್ತು. ಶಿರಾಳಕೊಪ್ಪದಿಂದ ೩ ಕಿ.ಮಿ. ದೂರದಲ್ಲಿರುವ ಈ ಪುಟ್ಟ ಊರು ಚಾಲುಕ್ಯ ಮತ್ತು ಹೊಯ್ಸಳ ಕಾಲದ ಹಲವು ದೇವಾಲಯಗಳನ್ನು ಹೊಂದಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಪ್ರಮುಖ ಸಾಂಸ್ಕೃತಿಕ ಕೇಂದ್ರ ಇದಾಗಿತ್ತು.

ಶಿರಾಳಕೊಪ್ಪದಿಂದ ಕೆರೆಯ ಬದಿಯಲ್ಲೇ ಬರುವಾಗ ಮೊದಲಿಗೆ ಗೋಚರಿಸುವುದು ಕೇದಾರೇಶ್ವರ ದೇವಸ್ಥಾನ. ಈ ದೇವಸ್ಥಾನದಲ್ಲಿರುವ ಲಿಂಗವನ್ನು ಚಾಲುಕ್ಯರು ಪ್ರತಿಷ್ಠಾಪಿಸಿದರೆ, ನಂತರ ೧೦೫೯ರಲ್ಲಿ ಈ ದೇವಾಲಯವನ್ನು ತ್ರಿಕೂಟಾಚಲ ಶೈಲಿಯಲ್ಲಿ ನಿರ್ಮಿಸಿ ಪೂರ್ಣಗೊಳಿಸಿದವರು ಹೊಯ್ಸಳರು. ನಳ ಮಹಾರಾಜ ಹುಲಿ ಕೊಲ್ಲುವ ದೃಶ್ಯದ ಕೆತ್ತನೆ ಪ್ರಮುಖ ಗರ್ಭಗುಡಿಯ ಗೋಪುರದ ಮುಂಭಾಗದಲ್ಲಿ ರಾರಾಜಿಸುತ್ತಿದೆ. ಈ ದೇವಾಲಯದ ಮುಖಮಂಟಪ ದೇವಾಲಯಕ್ಕೆ ತಾಗಿಕೊಂಡು ಇಲ್ಲ. ಮುಖಮಂಟಪ ಮತ್ತು ದೇವಾಲಯಕ್ಕೆ ಸುಮಾರು ೧೫ ಅಡಿಗಳ ಅಂತರವಿದೆ. ಸಾಧಾರಣ ವಾಗಿರುವ ೧೬ ಕಂಬಗಳ ಮುಖಮಂಟಪವನ್ನು ದಾಟಿ ಬಂದರೆ ದೇವಾಲಯದ ಸುಖನಾಸಿಯೊಳಗೆ ಪ್ರವೇಶ. ಸುಖನಾಸಿಯ ಆರಂಭದಲ್ಲೇ ನಂದಿ ಆಸೀನನಾಗಿದ್ದಾನೆ. ಹೆಚ್ಚಾಗಿ ನಂದಿ ಮುಖಮಂಟಪದ ಆಸುಪಾಸಿನಲ್ಲಿ ಇರುತ್ತದೆ. ಆದರೆ ಇಲ್ಲಿ ಆರಂಭದಲ್ಲಿರುವುದೇ ಈ ದೇವಾಲಯಕ್ಕಿರುವ ಒಂದು ಅಪವಾದ.

ಸುಖನಾಸಿಯ ನಂತರ ೪೪ ಕಂಬಗಳ ನವರಂಗ. ನಂತರ ಅಂತರಾಳ ಮತ್ತು ಪ್ರಮುಖ ಗರ್ಭಗುಡಿ ಇದೆ. ಗರ್ಭಗುಡಿಯಲ್ಲಿ ಕೇದಾರೇಶ್ವರ ಲಿಂಗವಿದೆ. ಎಡಕ್ಕಿರುವ ಗರ್ಭಗುಡಿಯಲ್ಲಿ ವಿಷ್ಣುವಿನ ವಿಗ್ರಹ ಮತ್ತು ಬಲಕ್ಕಿರುವ ಗರ್ಭಗುಡಿಯಲ್ಲಿ ಬ್ರಹ್ಮೇಶ್ವರ ಲಿಂಗವಿದೆ. ನವರಂಗದಲ್ಲಿ ೨೫ಕ್ಕೂ ಅಧಿಕ ಚಾಲುಕ್ಯ ಶೈಲಿಯ ಪ್ರತಿಬಿಂಬ ನೇರವಾಗಿಯೂ ತಲೆಕೆಳಗಾಗಿಯೂ ಕಾಣುವ ಕಂಬಗಳು ಇವೆ. ಹತ್ತಿರ ಹತ್ತಿರವಾಗಿ ನಿಲ್ಲಿಸಲಾಗಿರುವ ಈ ಕಂಬಗಳ ಸಮೂಹವನ್ನು ನೋಡುವುದೇ ಚಂದ. ಈ ದೇವಾಲಯವು ಆ ಕಾಲದ ಪ್ರಸಿದ್ಧ ಶಿಕ್ಷಣ ಕೇಂದ್ರವಾಗಿತ್ತು.

ಕೇದಾರೇಶ್ವರ ದೇವಾಲಯದ ಪಕ್ಕದಲ್ಲಿರುವುದೇ ಅಲ್ಲಮ ಪ್ರಭು ದೇವಾಲಯ. ಬಳ್ಳಿಗಾವಿ ಅಲ್ಲಮ ಪ್ರಭು ಜನಿಸಿದ ಸ್ಥಳ. ಈ ಗುಡಿಯಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿದ್ದರೂ, ಪ್ರಖ್ಯಾತ ವಚನಕಾರ ಅಲ್ಲಮ ಪ್ರಭು ತನ್ನ ಹೆಚ್ಚಿನ ಸಮಯವನ್ನು ಇದೇ ಗುಡಿಯಲ್ಲಿ ಕಳೆಯುತ್ತಿದ್ದರಿಂದ ಆತನ ಹೆಸರಿಂದಲೇ ಈ ಗುಡಿಯನ್ನು ಗುರುತಿಸಲಾಗುತ್ತದೆ. ಅಲ್ಲಮ ಪ್ರಭು ದೇವಾಲಯ ಎಂದು ಕರೆಯುವ ಮೊದಲು, ಗೋಪುರರಹಿತ ತ್ರಿಕೂಟಾಚಲ ರಚನೆಯುಳ್ಳ ಈ ದೇವಾಲಯವನ್ನು ನಗರೇಶ್ವರ ದೇವಾಲಯವೆಂದು ಕರೆಯಲಾಗುತ್ತಿತ್ತು . ಮತ್ತು ಬಳ್ಳಿಗಾವೆಯ ಮೂಲ ದೇವಸ್ಥಾನವೂ ಇದೇ ಆಗಿತ್ತು. ಪಟ್ಟದಕಲ್ಲಿನ ವ್ಯಾಪಾರಿ ಸಮುದಾಯದವರಾದ ವೀರ ಬಣಂಜರು ೧೨ನೇ ಶತಮಾನದಲ್ಲಿ ನಗರೇಶ್ವರ ದೇವಾಲಯವನ್ನು ನಿರ್ಮಿಸಿದರು ಎಂದು ಶಾಸನಗಳು ತಿಳಿಸುತ್ತವೆ. ಪುಟ್ಟದಾಗಿರುವ ಈ ದೇಗುಲ ಮುಖಮಂಟಪ, ನವರಂಗ ಮತ್ತು ೩ ಗರ್ಭಗುಡಿಗಳನ್ನು ಹೊಂದಿದೆ.

ಬಳ್ಳಿಗಾವಿ ಊರಿನ ಮಧ್ಯದಲ್ಲಿರುವುದು ತ್ರಿಪುರಾಂತಕೇಶ್ವರ ದೇವಾಲಯ. ಹೊರಗಿನಿಂದ ನೋಡಿದರೆ ಏನೂ ವಿಶೇಷವಿಲ್ಲದಂತೆ ತೋರುವ ಈ ದೇವಸ್ಥಾನ ಒಳಹೊಕ್ಕರೆ ವಿಸ್ಮಯಗಳ

ರಾಶಿಯನ್ನೇ ಕಣ್ಣೆದುರಿಗೆ ಇಡುತ್ತದೆ. ಸಂಪೂರ್ಣವಾಗಿ ಕುಸಿದಿದ್ದ ಈ ದೇವಸ್ಥಾನವನ್ನು ಭಾರತೀಯ ಪುರಾತತ್ವ ಇಲಾಖೆ ಮೂಲ ರಚನೆಗೆ ತಕ್ಕಂತೆ ಪುನಃ ನಿರ್ಮಿಸಿದೆ.

ತ್ರಿಪುರಾಂತಕೇಶ್ವರ ದೇವಾಲಯವನ್ನು ೧೦೭೦ರಲ್ಲಿ ನಿರ್ಮಿಸಲಾಗಿತ್ತು. ಹೊಯ್ಸಳ ಶೈಲಿಯ ನಕ್ಷತ್ರಾಕಾರದ ಅಡಿಪಾಯ ಈ ದೇವಾಲಯಕ್ಕಿದೆ. ೨ ದ್ವಾರಗಳಿರುವ ಈ ದೇವಸ್ಥಾನದ ಪ್ರಮುಖ ದ್ವಾರ ಯಾವುದೆಂದು ತಿಳಿದುಕೊಳ್ಳುವುದೇ ಸಮಸ್ಯೆಯಾಗಿ, ನಂತರ ನಂದಿ ಇರುವ ದ್ವಾರವೇ ಪ್ರಮುಖ ದ್ವಾರ ಎಂದು ತಿಳಿದುಬರುತ್ತದೆ. ಇದೊಂದು ವಿಚಿತ್ರ ಶೈಲಿಯ ತ್ರಿಕೂಟಾಚಲ ದೇವಸ್ಥಾನ. ಎಲ್ಲಾ ತ್ರಿಕೂಟಾಚಲ ದೇವಸ್ಥಾನಗಳು ಆಂಗ್ಲ ಅಕ್ಷರಮಾಲಿಕೆಯ 'ವಿ' ಆಕಾರದಲ್ಲಿದ್ದರೆ, ಈ ದೇವಾಲಯ 'ಎಲ್' ಆಕಾರದಲ್ಲಿದೆ.

ನಂದಿ ಮುಖ ಮಾಡಿ ನಿಂತಿರುವ ಪ್ರಮುಖ ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಇದರ ಬಲಕ್ಕೆ ತ್ರಿಕೂಟಾಚಲ ಶೈಲಿಗೆ ತಕ್ಕಂತೆ ಇರುವ ಗರ್ಭಗುಡಿಯಲ್ಲಿ ವಿಷ್ಣುವಿನ ವಿಗ್ರಹವಿದೆ. ತ್ರಿಕೂಟಾಚಲ ರಚನೆಯಂತೆ ಪ್ರಮುಖ ಗರ್ಭಗುಡಿಯನ್ನು ಹೊರತುಪಡಿಸಿ ಉಳಿದೆರಡು ಗರ್ಭಗುಡಿಗಳು ಎದುರುಬದುರಾಗಿರಬೇಕು. ಆದರೆ ಈ ೩ನೇ ಗರ್ಭಗುಡಿ, ವಿಷ್ಣು ಇರುವ ಗರ್ಭಗುಡಿಗೆ ಮುಖ ಮಾಡಿರುವುದರ ಬದಲಾಗಿ ಪ್ರಮುಖ ಗರ್ಭಗುಡಿಗೆ ತಾಗಿಕೊಂಡೇ ಇದೆ. ಮತ್ತು ನಂದಿ ಇರುವ ದಿಕ್ಕಿಗೇ ಮುಖಮಾಡಿಕೊಂಡು ಇದೆ. ಇಷ್ಟೇ ಅಲ್ಲದೇ ಈ ೩ನೇ ಗರ್ಭಗುಡಿಗೆ ಬೇರೆಯೇ ಆದ ನವರಂಗ ಮತ್ತು ಉಳಿದ ೨ ಗರ್ಭಗುಡಿಗಳಿಗೆ ಬೇರೆಯೇ ನವರಂಗವಿದೆ. ಈ ದೇವಾಲಯದಲ್ಲಿ ೨ ನವರಂಗಗಳು ಇವೆ. ಪ್ರಮುಖ ಶಿವಲಿಂಗ ಮತ್ತು ವಿಷ್ಣು ಇರುವ ಗರ್ಭಗುಡಿಗಳ ನವರಂಗವನ್ನು ನಾಟ್ಯರಂಗವೆಂದೂ, ೩ನೇ ಗರ್ಭಗುಡಿಯ ಮುಂದಿರುವ ನವರಂಗವನ್ನು ಸಭಾರಂಗವೆಂದೂ ಕರೆಯುತ್ತಾರೆ. ದೇವಾಲಯದ ಪ್ರಮುಖ ದ್ವಾರ ತೆರೆದುಕೊಳ್ಳುವುದು ನಾಟ್ಯರಂಗಕ್ಕೆ. ನಾಟ್ಯರಂಗದಿಂದ ಸಭಾರಂಗಕ್ಕೆ ಬರಲು ದ್ವಾರವಿದೆ. ಈ ದ್ವಾರದಲ್ಲಿ ಸುಂದರವಾಗಿ ಕೆತ್ತಲಾಗಿರುವ 'ದ್ವಾರಪಾಲಕಿ' ಯರಿದ್ದಾರೆ. ದ್ವಾರಪಾಲಕಿಯರ ಬದಿಯಲ್ಲಿರುವ ಕಿಟಕಿಗಳ ಮೇಲೆ ಕೆತ್ತನೆ ಅದ್ಭುತವಾಗಿದೆ. ನಾಟ್ಯರಂಗದಿಂದ ೨ ಗರ್ಭಗುಡಿಗಳಿಗೆ ಮತ್ತು ಸಭಾರಂಗಕ್ಕೆ ತೆರೆದುಕೊಳ್ಳುವ ದ್ವಾರಗಳು ೫ ತೋಳಿನವುಗಳಾಗಿದ್ದು, ಪ್ರತಿ ತೋಳಿನಲ್ಲೂ ಉನ್ನತ ಮಟ್ಟದ ಕೆತ್ತನೆ ಕೆಲಸವಿದೆ.

ಇದೊಂದು ಮೂಲತಃ ದ್ವಿಕೂಟ ರಚನೆಯಾಗಿದ್ದು, ೩ನೇ ಗರ್ಭಗುಡಿಯನ್ನು ನಂತರ ಸೇರಿಸಲಾಗಿದೆ ಎಂಬ ಮಾತೂ ಇದೆ. ದೇವಾಲಯದ ವಿಚಿತ್ರ ತ್ರಿಕೂಟ ರಚನೆಯನ್ನು ಗಮನಿಸಿದರೆ ಈ ವಾದವನ್ನು ತಳ್ಳಿಹಾಕುವಂತಿಲ್ಲ. ಸಾಮಾನ್ಯವಾಗಿ ತ್ರಿಕೂಟ ರಚನೆಯಲ್ಲಿ ಒಂದೇ ನವರಂಗವಿರುತ್ತದೆ ಮತ್ತು ೩ ಗರ್ಭಗುಡಿಗಳು ಈ ನವರಂಗಕ್ಕೇ ತೆರೆದುಕೊಳ್ಳುತ್ತವೆ. ಇಲ್ಲಿ ೨ ಗರ್ಭಗುಡಿಗಳು ಮಾತ್ರ ನವರಂಗಕ್ಕೆ ತೆರೆದುಕೊಳ್ಳುತ್ತವೆ. ನಂತರ ನಿರ್ಮಿಸಲಾದ ೩ನೇ ಗರ್ಭಗುಡಿಗೆ ಬೇರೆ ನವರಂಗವನ್ನು ನಿರ್ಮಿಸಿರುವಂತೆ

ಕಾಣಬರುತ್ತದೆ ಮತ್ತು ದ್ವಿಕೂಟ ದೇವಾಲಯದ ಎರಡನೇ ದ್ವಾರವನ್ನು ಈ ನವರಂಗಕ್ಕೆ ತೆರೆದುಕೊಳ್ಳುವಂತೆ ಮಾಡಲಾಗಿದೆ. ಪ್ರಾಚೀನ ದೇವಾಲಯಗಳಲ್ಲಿ ಆಸಕ್ತಿ ಇರುವವರಿಗೆ ಬಳ್ಳಿಗಾವಿಯ ಈ ತ್ರಿಪುರಾಂತಕೇಶ್ವರ ದೇವಾಲಯ ಒಂದು ಸೋಜಿಗವೇ ಸರಿ.

ತ್ರಿಪುರಾಂತಕೇಶ್ವರ ದೇವಾಲಯದ, ಪ್ರಮುಖ ಗರ್ಭಗುಡಿಯ ಅಂತರಾಳಕ್ಕೆ ತೆರೆದುಕೊಳ್ಳುವ ದ್ವಾರದ ಮೇಲೆ ಅತ್ಯದ್ಭುತ ಕೆತ್ತನೆ ಮತ್ತು ನಾಟ್ಯರಂಗದಲ್ಲಿ ೪ ಬೃಹತ್ ಪ್ರತಿಬಿಂಬ ನೇರವಾಗಿಯೂ ತಲೆಕೆಳಗಾಗಿಯೂ ಕಾಣುವ ಕಂಬಗಳಿವೆ. ನಾಲ್ಕು ಕಂಬಗಳಲ್ಲೂ ಪ್ರಭಾವಳಿಯಂತೆ ಬೇರೆ ಬೇರೆ ಕೆತ್ತನೆಗಳು ಇವೆ. ಒಂದರಲ್ಲಿ ವಿಷ್ಣುವಿನ ಅವತಾರಗಳಿಗೆ ಸಂಬಂಧಿಸಿದ ಕೆತ್ತನೆಗಳು, ಇನ್ನೊಂದರಲ್ಲಿ ಶ್ರೀಕೃಷ್ಣನ ವಿವಿಧ ಲೀಲೆಗಳು, ಮತ್ತೊಂದರಲ್ಲಿ ಶಿವ, ಪಾರ್ವತಿ ಮತ್ತು ಷಣ್ಮುಖರ ಕೆತ್ತನೆಗಳು ಹಾಗೂ ಕೊನೆಯದರಲ್ಲಿ ಜೈನ ತೀರ್ಥಂಕರರ ಕೆತ್ತನೆಗಳು ಇವೆ.

ಈ ದೇವಾಲಯದ ನಾಟ್ಯರಂಗದಲ್ಲೇ ಹೊಯ್ಸಳ ದೊರೆ ಬಿಟ್ಟಿದೇವ ತನ್ನ ಪ್ರಮುಖ ರಾಣಿ ಶಾಂತಲಾದೇವಿಯನ್ನು ಪ್ರಥಮ ಬಾರಿಗೆ ನೋಡಿದ್ದು ಎನ್ನಲಾಗಿದೆ. ಅದೊಂದು ದಿನ ಬೇಲೂರಿಗೆ ಹಿಂತಿರುಗುತ್ತಿದ್ದ ಬಿಟ್ಟಿದೇವ, ಬಳ್ಳಿಗಾವಿಯಲ್ಲಿ ತಂಗಿದ್ದನು. ಮುಂಜಾನೆ ತ್ರಿಪುರಾಂತಕೇಶ್ವರ ದೇವಾಲಯದಿಂದ ಕೇಳಿಬರುತ್ತಿದ್ದ ತಾಳ, ರಾಗಗಳ ಸದ್ದಿಗೆ ದೇವಸ್ಥಾನದ ಕಡೆಗೆ ಬಂದ ಬಿಟ್ಟಿದೇವ ನಾಟ್ಯರಂಗದಲ್ಲಿ ನೃತ್ಯ ಮಾಡುತ್ತಿದ್ದ ಶಾಂತಲಾದೇವಿಯನ್ನು ಕಂಡು ಅವಳಲ್ಲಿ ಮೋಹಿತನಾದ. ಶಾಂತಲಾದೇವಿ ಬಳ್ಳಿಗಾವಿಯ ನಿವಾಸಿಯಾಗಿದ್ದಳು. ಮತ್ತು ಆಕೆ ಒಬ್ಬ ಜೈನ ಧರ್ಮದವಳಾಗಿದ್ದಳು. ಬಿಟ್ಟಿದೇವ ಹಿಂದೂ ಧರ್ಮದವನಾಗಿದ್ದ. ತನ್ನನ್ನು ವರಿಸಬೇಕಾದರೆ ಜೈನ ಧರ್ಮಕ್ಕೆ ಮತಾಂತರ ಗೊಳ್ಳಬೇಕೆಂದು ಶಾಂತಲಾದೇವಿ ಬಿಟ್ಟಿದೇವನಲ್ಲಿ ಹೇಳಿದಾಗ, ಬಿಟ್ಟಿದೇವ ವಿಷ್ಣುವರ್ಧನನಾದ ಮತ್ತು ಶಾಂತಲಾದೇವಿ ಹೊಯ್ಸಳ ರಾಜ್ಯದ ಪ್ರಮುಖ ರಾಣಿಯಾದಳು.

ಸಭಾರಂಗದಲ್ಲೂ ಮತ್ತದೇ ಚಾಲುಕ್ಯರ ಶೈಲಿಯ ೪ ಕಂಬಗಳಿವೆ. ಛಾವಣಿಯಲ್ಲಿ ಬೆರಗುಗೊಳಿಸುವ ಕೆತ್ತನೆಗಳಿವೆ. ತ್ರಿಪುರಾಂತಕೇಶ್ವರ ದೇವಾಲಯದ ಎದುರಿಗೇ ಸಭಾಮಂಟಪವಿದೆ. ಅಲ್ಲಿಂದ ಸ್ವಲ್ಪ ಮುಂದೆ ವೀರಭದ್ರಸ್ವಾಮಿ ದೇವಸ್ಥಾನವಿದೆ. ಇದು ಇತ್ತೀಚೆಗಿನ ದೇವಸ್ಥಾನ. ಆದರೆ, ಇಲ್ಲಿ ಹಸಿರು ಬಣ್ಣದ ಶಿವಲಿಂಗವೊಂದಿದೆ. ಈ ಶಿವಲಿಂಗ, ಪಚ್ಚೆ ನೀಲಕಂಠೇಶ್ವರ ದೇವಾಲಯದಲ್ಲಿತ್ತು. ಯಾರೋ ಅದನ್ನು ಕದ್ದೊಯ್ಯುತ್ತಿರುವಾಗ ಸಿಕ್ಕುಬಿದ್ದು, ಈಗ ಅದನ್ನು ಊರಿನ ದೇವಸ್ಥಾನದಲ್ಲಿ ಜೋಪಾನವಾಗಿ ಇಡಲಾಗಿದೆ. ತ್ರಿಪುರಾಂತಕೇಶ್ವರ ದೇವಾಲಯದಿಂದ ಸ್ವಲ್ಪ ಮುಂದೆ ಭೇರುಂಡೇಶ್ವರ ಸ್ತಂಭ ಅಥವಾ ವಿಜಯ ಸ್ತಂಭ ಇರುವುದು. ೩ ಮೀಟರ್ ಎತ್ತರದ ಪೀಠದ ಮೇಲೆ ಇರುವ ಈ ಸ್ತಂಭ ೯.೭೫ ಮೀಟರ್ ಎತ್ತರವಿದೆ. ಇದನ್ನು ಚಾಲುಕ್ಯ ದೊರೆ ತ್ರಿಲೋಕಮಲ್ಲನ ದಂಡನಾಯಕನಾಗಿದ್ದ ಚಾವುಂಡರಾಯ ಅರಸನು ತನ್ನ ವಿಜಯದ ಸ್ಮರಣಾರ್ಥ ನಿರ್ಮಿಸಿದ್ದಾನೆ.

**ಕೆಳದಿ**

ಸಾಗರ ತಾಲ್ಲೂಕಿನ ಕೆಳದಿ ಹಾಗೂ ಇಕ್ಕೇರಿಯ ದೇವಾಲಯಗಳು ಅತ್ಯುತ್ತಮ ಶಿಲ್ಪಗಳನ್ನು ಒಳಗೊಂಡಿದೆ. ಕೆಳದಿ-ಇಕ್ಕೇರಿ ಸಂಸ್ಥಾನದ ಶಿವಪ್ಪನಾಯಕ ಅಂದಿನ ಕಾಲದಲ್ಲೇ ತೆರಿಗೆ ಪದ್ಧತಿಯನ್ನು ತನ್ನ ರಾಜ್ಯದಲ್ಲಿ ಪರಿಚಯಿಸಿದ್ದ ಮೊದಲಿಗ ಎಂಬ ಹೆಗ್ಗಳಿಕೆಯೂ ಇದೆ.

ಹನ್ನೆರಡನೆಯ ಶತಮಾನದಲ್ಲಿ ಕೆಳದಿ ಸಂಸ್ಥಾನ ಶಾಂತರಸರ ಅಧೀನದಲ್ಲಿತ್ತು. ಪೊಂಬುಚ್ಚ ಪುರವರಾಧೀಶ್ವರನಾಗಿದ್ದ ಮಹಾಮಂಡಳೇಶ್ವರ ತ್ರಿಭುವನಮಲ್ಲ ಭುಜಬಲ ಪ್ರತಾಪ ಶಾಂತರಸನ ತೃಟಿತ ಶಾಸನವೊಂದು ಇಲ್ಲಿ ದೊರೆತಿದೆ. ಈ ಊರು ಪ್ರಬುದ್ಧಮಾನಕ್ಕೆ ಬಂದದ್ದು ೧೬ನೆಯ ಶತಮಾನದ ಆರಂಭದಲ್ಲಿ. ವಿಜಯನಗರದ ಕೃಷ್ಣದೇವರಾಯನ ಆಳ್ವಿಕೆಯಲ್ಲಿ. ಇಲ್ಲಿಯೇ ಹುಟ್ಟಿ ಬೆಳೆದ ಸಾಮಾನ್ಯ ಮನೆತನವೊಂದಕ್ಕೆ ಸೇರಿದ್ದ ಚೌಡಗೌಡನೆಂಬ ರೈತನಿಗೆ ನಿಕ್ಷೇಪವೊಂದು ದೊರೆತುದಾಗಿಯೂ ಅದರ ಸಹಾಯದಿಂದ ಸಣ್ಣ ಪಾಳೆಯ ಪಟ್ಟೊಂದನ್ನು ಅವನು ಕಟ್ಟಿಕೊಂಡು ಮುಂದೆ ತನ್ನ ಪ್ರಭಾವವನ್ನು ಬೆಳೆಸಿಕೊಂಡನೆಂದೂ ಇತಿಹಾಸವಿದೆ. ಇವನ ಪರಾಕ್ರಮಕ್ಕೆ ಮೆಚ್ಚಿ ಕೃಷ್ಣದೇವರಾಯ ಎಂಟು ಮಾಗಣೆಗಳ ನಾಯಕತ್ವವನ್ನು ಕೊಟ್ಟು ಇವನನ್ನು ನಾಯಕನನ್ನಾಗಿ ಮಾಡಿದ. ಹೀಗೆ ಕೆಳದಿ ೧೫೦೦ರಲ್ಲಿ ಒಂದು ಪುಟ್ಟ ಸಂಸ್ಥಾನದ ರಾಜಧಾನಿಯಾಯಿತು. ಈ ಊರು ಬಹುಬೇಗ ಬೆಳೆಯಿತು. ಅರಮನೆ, ಕೋಟೆ, ಕೆರೆಗಳನ್ನು ಚೌಡಪ್ಪ ನಾಯಕ ಇಲ್ಲಿ ಕಟ್ಟಿಸಿದ. ಜೊತೆಗೆ ಸುಂದರವಾದ ರಾಮೇಶ್ವರ ದೇವಾಲಯವನ್ನೂ ಕಟ್ಟಿಸಿದ. ಮುಂದೆ ೬೦ ವರ್ಷಗಳ ಕಾಲ ಇವನ ವಂಶದವರ ರಾಜಧಾನಿಯಾಗಿ ಅನಂತರ ರಾಜಧಾನಿ ಮೊದಲು ಇದರ ಸಮೀಪ ದಲ್ಲಿಯೇ ಇರುವ ಇಕ್ಕೇರಿಗೂ ಆನಂತರ ಬಿದನೂರಿಗೂ ಬದಲಾಯಿಸಲಾಯಿತಾದರೂ ಈ ಊರು ನಾಯಕರ ಆಳ್ವಿಕೆ ಕೊನೆಗೊಳ್ಳುವವರೆಗೂ ಆ ರಾಜ್ಯದ ಒಂದು ಪ್ರಮುಖ ನಗರವಾಗಿಯೇ ಮುಂದುವರೆಯಿತು. ಆದರೆ ಅನಂತರ ಇದರ ಪ್ರಾಮುಖ್ಯತೆ ಇಳಿಮುಖವಾಗಿ ಕಡೆಗೆ ಒಂದು ಸಾಮಾನ್ಯವಾದ ಹಳ್ಳಿಯಾಗಿ ಉಳಿಯಿತು. ಇಲ್ಲಿ ವಿಸ್ತಾರವಾಗಿ ಹರಡಿರುವ ಹಳೆಯ ಊರಿನ ನಿವೇಶನಗಳೂ ದೇವಾಲಯಗಳೂ, ಕೆರೆ, ಮಠಗಳೂ ಅದರ ಹಿಂದಿನ ವೈಭವಕ್ಕೆ ತೋರುಬೆರಳಾಗಿ ನಿಂತಿವೆ. ಇಲ್ಲಿ ಹೊಯ್ಸಳ-ದ್ರಾವಿಡ ಶೈಲಿಯಲ್ಲಿರುವ ರಾಮೇಶ್ವರ ದೇವಾಲಯ ಪ್ರಖ್ಯಾತವಾಗಿದೆ.

ಹದಿನಾರನೆಯ ಶತಮಾನದ ಆರಂಭದಿಂದ ಹದಿನೆಂಟನೆಯ ಶತಮಾನದ ಉತ್ತರಾರ್ಧದ ವರೆಗೂ ಸಮೃದ್ಧಿಯ ತಾಣವಾಗಿ ಮೆರೆದದ್ದು ಕೆಳದಿ ಸಂಸ್ಥಾನ. ಈ ಪ್ರಾಂತ್ಯದ ಅರಸರು ಕರ್ನಾಟಕದ ಮಲೆನಾಡು ಮತ್ತು ಕರಾವಳಿಯ ಭಾಗಗಳೆರಡನ್ನೂ ತಮ್ಮ ಆಳ್ವಿಕೆಯಡಿಯಲ್ಲಿ ಇಟ್ಟುಕೊಂಡಿದ್ದರು. ಕೆಳದಿ ಸಂಸ್ಥಾನವನ್ನು ಆಳಿದ ಅರಸರು ಮೊದಲಿಗೆ ವಿಜಯನಗರದ ಅರಸರ ಸಾಮಂತರಾಗಿದ್ದು ಅವರ ಪತನದ ನಂತರ ತಮ್ಮದೇ ಆದ ಸ್ವತಂತ್ರ ಅಸ್ತಿತ್ವವನ್ನು ಇಲ್ಲಿ ರೂಢಿಸಿಕೊಂಡರು. ಗಂಡಭೇರುಂಡ ಇವರ ಲಾಂಛನವಾಯಿತು.

ಕೆಳದಿ ಸಂಸ್ಥಾನದ ರಾಜಧಾನಿಗಳು ಕ್ರಮವಾಗಿ ಶಿವಮೊಗ್ಗ ಜಿಲ್ಲೆಯ ಸಾಗರದಿಂದ ೮ ಕಿ.ಮೀ. ದೂರದ ಕೆಳದಿ, ೫ ಕಿ.ಮೀ. ದೂರದ ಇಕ್ಕೇರಿ, ಹೊಸನಗರ ತಾಲ್ಲೂಕಿನಲ್ಲಿರುವ ಬಿದನೂರು(ನಗರ) ಮತ್ತು ತೀರ್ಥಹಳ್ಳಿಗೆ ೧೫ ಕಿ.ಮೀ. ದೂರದಲ್ಲಿರುವ ಕವಲೆದುರ್ಗವಾಗಿತ್ತು. ಆರಂಭದಲ್ಲಿ ಕೇವಲ ಚಂದ್ರಗುತ್ತಿ, ಕೆಳದಿ, ಇಕ್ಕೇರಿ, ಪೆರ್ಬಯಲು, ಎಲಗಳಲೆ, ಮೇದೂರು, ಕಲಸೆ, ಲಾತವಾಡಿ ಸೇರಿದಂತೆ ಎಂಟು ವಿಭಾಗಗಳನ್ನು ಒಳಗೊಂಡಿದ್ದ ಈ ಸಂಸ್ಥಾನವು ತನ್ನ ಉಚ್ಚ ಸ್ಥಿತಿಯಲ್ಲಿ ಈಗಿನ ಶಿವಮೊಗ್ಗ ಜಿಲ್ಲೆ, ಚಿಕ್ಕಮಗಳೂರು ಜಿಲ್ಲೆ, ಹಾಸನ ಜಿಲ್ಲೆ, ದಕ್ಷಿಣ ಕನ್ನಡ ಜಿಲ್ಲೆಗಳ ಬಹುಭಾಗ ಮತ್ತು ಧಾರವಾಡ ಜಿಲ್ಲೆ, ಚಿತ್ರದುರ್ಗ ಜಿಲ್ಲೆ, ಉತ್ತರಕನ್ನಡ ಜಿಲ್ಲೆಗಳ ಕೆಲವು ಭಾಗಗಳ ಪ್ರಭುತ್ವವನ್ನು ಸಾಧಿಸಿದ್ದಲ್ಲದೇ ಕೇರಳ ರಾಜ್ಯದ ಕೆಲವು ಭಾಗಗಳನ್ನೂ ಒಳಗೊಂಡಿತ್ತು.

ಕೆಳದಿಯ ಪ್ರಸಿದ್ಧ ಅರಸನಾದ ಶಿವಪ್ಪನಾಯಕನು ಜಾರಿಗೆ ತಂದಿದ್ದ ಕಂದಾಯ ವ್ಯವಸ್ಥೆಯಿಂದಾಗಿ ಕೃಷಿಕರೂ ನ್ಯಾಯವಾದ ಕಂದಾಯವನ್ನು ಸಲ್ಲಿಸುವಂತಾಗಿತ್ತು. ಇಲ್ಲಿಯ ಪ್ರಮುಖ ಉತ್ಪನ್ನಗಳಾದ ಮೆಣಸು, ಅಡಿಕೆ, ತಂಬಾಕು, ಶ್ರೀಗಂಧ, ಏಲಕ್ಕಿ, ಜೀರಿಗೆ, ಇಂಗು, ಸಾಸಿವೆ, ತೆಂಗು, ಅರಿಸಿನ ಮುಂತಾದ ನೈಸರ್ಗಿಕ ವಸ್ತುಗಳ ಜೊತೆಗೆ ರೇಷ್ಮೆ, ಬೆಲ್ಲ, ಹತ್ತಿಯಬಟ್ಟೆ ಮುಂತಾದ ಉತ್ಪನ್ನಗಳನ್ನು ಇಲ್ಲಿನ ಕರಾವಳಿಯ ಬಂದರಿನ ಮೂಲಕ ಮಾರಾಟ ಮಾಡಲಾಗುತ್ತಿತ್ತು. ಇದಕ್ಕೆ ಬದಲಾಗಿ ಅರಬ್ಬೀ ಕುದುರೆಗಳು, ಅನೇಕ ಬೆಲೆಬಾಳುವ ವಿದೇಶಿ ಪದಾರ್ಥಗಳು ಆಮದಾಗುತ್ತಿದ್ದವು. ಇದರೊಂದಿಗೆ ಪಶ್ಚಿಮಸಮುದ್ರದ ಮೂಲಕ ವಿದೇಶಗಳಿಗೆ ಹೋಗಬೇಕಿದ್ದ ಎಲ್ಲ ಸರಕುಗಳೂ ಇಲ್ಲಿಯ ಸುಂಕದಕಟ್ಟೆಯ ಮೂಲಕವೇ ಹಾದು ಹೋಗಬೇಕಾಗಿದ್ದಿದ್ದರಿಂದ ಅಪಾರವಾದ ಸುಂಕವು ಸಂಗ್ರಹವಾಗುತ್ತಿತ್ತು.

ಕೆಳದಿ ಅರಸರ ಕಾಲದಲ್ಲಿ ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಡಲಾಗಿತ್ತು. ಶಿವಮೊಗ್ಗದಲ್ಲಿರುವ ಶಿವಪ್ಪನಾಯಕನ ಅರಮನೆ, ಕೆಳದಿಯ ರಾಮೇಶ್ವರ ದೇವಾಲಯ, ವೀರಭದ್ರ ದೇವಾಲಯ, ಬಿದನೂರಿನ ಆಂಜನೇಯ ದೇವಾಲಯ, ಕೋಟೆಗಳು, ಗುಡ್ಡೆ ವೆಂಕಟರಮಣ ದೇವಾಲಯ, ನೀಲಕಂಠೇಶ್ವರ ದೇವಾಲಯ, ಇಕ್ಕೇರಿಯ ಅಘೋರೇಶ್ವರ ದೇವಾಲಯ, ನಗರದ ಬಳಿ ಇರುವ ದೇವಗಂಗೆ ಮುಂತಾದವು ಕೆಳದಿ ಅರಸರ ವಾಸ್ತುಶಿಲ್ಪ ಚಾತುರ್ಯವನ್ನು ಹೇಳುತ್ತವೆ.

ಈ ಅರಸರು ಕನ್ನಡ ಮತ್ತು ಸಂಸ್ಕೃತ ಎರಡೂ ಭಾಷೆಯ ಕವಿ–ವಿದ್ವಾಂಸರಿಗೆ ಆಶ್ರಯವನ್ನಿತ್ತಿದ್ದರು. ಅರಸರೂ ಸಹ ಕವಿ–ವಿದ್ವಾಂಸರುಗಳಾಗಿದ್ದು ಅನೇಕ ಕೃತಿಗಳನ್ನು ರಚಿಸಿದ್ದಾರೆ. ವೆಂಕಟಪ್ಪನಾಯಕನು ಶಿವಗೀತಾವ್ಯಾಖ್ಯಾ, ವೀರಮಾಹೇಶ್ವರ ಸುಧಾವಾರ್ಧಿ ಹಾಗೂ ತತ್ವಾಧಿಕಾರ ನಿರ್ಣಯಂ ಎಂಬ ಮೂರು ಕೃತಿಗಳನ್ನು ಬರೆದಿದ್ದಾನೆ. ಬಸವಪ್ಪನಾಯಕನು ಶಿವತತ್ವರತ್ನಾಕರ, ಸುಭಾಷಿತ ಸುರದ್ರುಮ, ಸೂಕ್ತಿ ಸುಧಾಕರ ಮುಂತಾದ ಕೃತಿಗಳನ್ನು ರಚಿಸಿದ್ದಾನೆ. ಲಿಂಗಣ್ಣ ಕವಿಯ ಕೆಳದಿ ನೃಪವಿಜಯಂ, ಗಂಗಾದೇವಿಯ ಕೆಳದಿ ರಾಜ್ಯಾಭ್ಯುದಯಂ, ತಿರುಮಲ ಭಟ್ಟನ ಕರ್ನಾಟಕ ಶಿವಗೀತೆ, ಪರಮದೇವನ ತುರಂಗ ಭಾರತ ಮುಂತಾದವು ಈ ಕಾಲದ ಪ್ರಸಿದ್ಧ ಕೃತಿಗಳು.

ಕೆಳದಿ ಅರಸರ ಕಾಲದ ಸಾಹಿತ್ಯ ಮತ್ತು ಅಂದಿನ ಶಾಸನಗಳ ವಿಚಾರಗಳನ್ನು ಅನುಸರಿಸಿ ಕೆಳದಿ ನಾಯಕರ ಕಾಲವನ್ನು ಈ ರೀತಿ ಅಂದಾಜಿಸಲಾಗಿದೆ.

**ಚೌಡಪ್ಪ ನಾಯಕ**(ಸುಮಾರು ೧೫೦೦-೧೫೩೦)

ಚೌಡಪ್ಪನಾಯಕ ಎಂದೂ ಹೆಸರಾದ ಈತ ಪಳ್ಳಿಬೈಲು ಎಂಬ ಹಳ್ಳಿಯಲ್ಲಿ ರೈತ ದಂಪತಿಗಳ ಮಗನಾಗಿ ಜನಿಸುತ್ತಾನೆ. ಸ್ವಸಾಮರ್ಥ್ಯದಿಂದ ತನ್ನದೇ ಪಾಳೆಯಪಟ್ಟನ್ನು ಕಟ್ಟಿಕೊಂಡು ನಾಯಕನಾಗಿ ಬೆಳೆಯುತ್ತಾನೆ.

**ಸದಾಶಿವ ನಾಯಕ**(ಸುಮಾರು ೧೫೩೦-೧೫೬೭)

ಚೌಡಪ್ಪನಾಯಕನ ಇಬ್ಬರು ಗಂಡು ಮಕ್ಕಳಲ್ಲಿ ಹಿರಿಯವನು ಸದಾಶಿವ ನಾಯಕ. ಕಿರಿಯವನು ಭದ್ರಪ್ಪನಾಯಕ. ಸದಾಶಿವ ನಾಯಕನು ವಿಜಯನಗರದ ವಿರೋಧಿಗಳನ್ನು ಹಿಮ್ಮೆಟ್ಟಿಸಿ ಕೇರಳ ರಾಜ್ಯದ ಹಲವು ಭಾಗಗಳನ್ನು ವಶಪಡಿಸಿಕೊಳ್ಳುತ್ತಾನೆ. ಸದಾಶಿವ ನಾಯಕನಿಗೆ ಮೂವರು ಮಕ್ಕಳಿದ್ದು ಅವರುಗಳು ತಂದೆಯ ನಂತರ ಸುಮಾರು ಮೂವತ್ತು(೧೫೬೭-೧೫೮೨) ವರುಷಗಳ ಕಾಲ ರಾಜ್ಯಭಾರ ಮಾಡುತ್ತಾರೆ.

**ವೆಂಕಟಪ್ಪ ನಾಯಕ**(೧೫೮೨-೧೬೨೯)

ಸಮರ್ಥ ಅರಸನಾಗಿದ್ದ ವೆಂಕಟಪ್ಪನ ಕಾಲದಲ್ಲಿ ಕೆಳದಿ ಸಂಸ್ಥಾನವು ಸಂಪೂರ್ಣ ಸ್ವತಂತ್ರವಾಗುತ್ತದೆ. ಕೆಳದಿಯ ಮೇಲೆ ದಂಡೆತ್ತಿ ಬರುವ ಬಿಜಾಪುರದ ಸುಲ್ತಾನನನ್ನು ಸೋಲಿಸಿ ಅದರ ಸಂಕೇತವಾಗಿ ಹಾನಗಲ್‌ನಲ್ಲಿ ವಿಜಯಸ್ತಂಭವನ್ನು ಈತ ಸ್ಥಾಪಿಸುತ್ತಾನೆ. ಈತನ ಮೊಮ್ಮಗನಾದ ವೀರಭದ್ರ ನಾಯಕನ(೧೬೨೯-೧೬೪೫) ಕಾಲದಲ್ಲಿ ರಾಜ್ಯವು ಪದೇಪದೆ ಅನ್ಯರ ದಾಳಿಗೆ ತುತ್ತಾಗುತ್ತದೆ. ಪೋರ್ಚುಗೀಸರು ಮತ್ತು ಆದಿಲ್ ಶಾಹಿಗಳು ಕೆಳದಿಯನ್ನು ಕಬಳಿಸಲು ಯತ್ನಿಸುತ್ತಾರೆ.

**ಶಿವಪ್ಪನಾಯಕ** (೧೬೪೫-೧೬೬೦)

ಕೆಳದಿ ಸಂಸ್ಥಾನವು ಉತ್ತಮ ಸ್ಥಿತಿಯನ್ನು ಮುಟ್ಟಿದ್ದು ಈತನ ಕಾಲದಲ್ಲಿ. ರಾಜಧಾನಿಯಾಗಿದ್ದ ಬಿದನೂರು ನಗರವನ್ನು ಅಭಿವೃದ್ಧಿಪಡಿಸಿ ಕೋಟೆಗಳನ್ನು ಈತ ನಿರ್ಮಿಸಿದನು. ದೇಶದ ನಾನಾ ಭಾಗಗಳ ವ್ಯಾಪಾರಿಗಳನ್ನೂ ಕುಶಲಕರ್ಮಿಗಳನ್ನೂ ಆಕರ್ಷಿಸಿ ವ್ಯಾಪಾರ-ವಾಣಿಜ್ಯವನ್ನು ಈತ ಉತ್ತಮ ಪಡಿಸಿದನು. ಈತನ ಆಡಳಿತ ವ್ಯವಸ್ಥೆಯು 'ಶಿವಪ್ಪನಾಯಕನ ಶಿಸ್ತು' ಎಂದು ಪ್ರಸಿದ್ಧವಾಯಿತು. ಪೋರ್ಚುಗೀಸರನ್ನೂ ಸೋಲಿಸಿದ ಹೆಗ್ಗಳಿಕೆ ಇವನದು. ಇವನ ನಂತರ ೧೨ ವರುಷಗಳ ಕಾಲ ಕೆಳದಿಯ ವೈಭವವು ಕೊಂಚ ಮಂಕಾಯಿತು.

**ಎರಡನೆಯ ವೆಂಕಟಪ್ಪ ನಾಯಕ (೧೬೬೦-೧೬೬೧), ಭದ್ರಪ್ಪ ನಾಯಕ (೧೬೬೧-೧೬೬೩), ಹಿರಿಯ ಸೋಮಶೇಖರ ನಾಯಕ(೧೬೬೩-೧೬೭೧)**

ಈ ಮೂವರು ಅರಸರು ಶಿವಪ್ಪನಾಯಕನ ಆಳ್ವಿಕೆಯ ನಂತರ ಕೆಳದಿ ಸಂಸ್ಥಾನದ ಚುಕ್ಕಾಣಿಯನ್ನು ಹಿಡಿದಿದ್ದು, ಇವರ ಆಳ್ವಿಕೆಯ ಕಾಲದಲ್ಲಿ(ಸುಮಾರು ೧೧ವರ್ಷ) ಅಂತಹ ಪ್ರಗತಿಯನ್ನೇನು ಕಾಣದೇ ಇತಿಹಾಸದಲ್ಲಿ ಕೆಳದಿ ಸಂಸ್ಥಾನ ತುಸು ಮರೆಯಾಗಿತ್ತು.

**ಚೆನ್ನಮ್ಮ**(೧೬೭೧-೧೬೯೭)

ಹಿರಿಯ ಸೋಮಶೇಖರ ನಾಯಕನ ಪತ್ನಿಯಾದ ಈಕೆಯು ಮಂಕಾಗಿದ್ದ ಕೆಳದಿ ಸಂಸ್ಥಾನವನ್ನು ತನ್ನ ಸಾಹಸ ಹಾಗು ಸಾಮರ್ಥ್ಯಗಳಿಂದ ಉತ್ತಮಗೊಳಿಸಿದಳು. ಹುಲಿಕೆರೆ ಎಂಬಲ್ಲಿ ಕೋಟೆಯನ್ನು ಕಟ್ಟಿಸಿ, ಅದಕ್ಕೆ ಚೆನ್ನಗಿರಿ ಎಂದು ಹೆಸರಿಟ್ಟಳು. ಶಿವಾಜಿಯ ಮಗನಾದ ರಾಜಾರಾಮನಿಗೆ ಆಶ್ರಯವನ್ನು ನೀಡಿ ಔರಂಗಜೇಬನಂತಹ ಪ್ರಬಲನನ್ನು ಎದುರಿಸಿದ ದಿಟ್ಟ ಮಹಿಳೆ ಇವಳು.

**ಇಮ್ಮಡಿ ಬಸವಪ್ಪನಾಯಕ** (೧೬೯೭-೧೭೧೪)

ಇಮ್ಮಡಿ ಸೋಮಶೇಖರ ನಾಯಕ (೧೭೧೪-೧೭೩೧), ಇಮ್ಮಡಿ ಬಸವಪ್ಪ ನಾಯಕ (೧೭೩೧-೧೭೫೪)- ಇವರ ಕಾಲದಲ್ಲಿ ಕೆಳದಿ ಸಂಸ್ಥಾನ ಬೆಳವಣಿಗೆಯನ್ನು ಕಾಣದೇ ಬರಡಾಗಿತ್ತು.

**ವೀರಮ್ಮಾಜಿ-ಚೆನ್ನಬಸವನಾಯಕ**

ಇಮ್ಮಡಿ ಬಸವಪ್ಪ ನಾಯಕನ ಕಾಲದವರೆವಿಗೂ ಉತ್ತಮವಾಗಿಯೇ ಇದ್ದ ಆಡಳಿತವು ವೀರಮ್ಮಾಜಿಯ ಕಾಲದಲ್ಲಿ ಹಿಡಿತ ತಪ್ಪಿ ಗೊಂದಲಗಳ ಗೂಡಾಗುತ್ತದೆ. ಈಕೆಯ ಮಗನಾದ ಚೆನ್ನಬಸವ ನಾಯಕ(೧೭೫೪-೧೭೫೬)ನು ಸಮರ್ಥನಾಗಿದ್ದರೂ ಸಹ ಅಧಿಕಾರವನ್ನು ಬಿಟ್ಟುಕೊಡದ ತಾಯಿ ಮತ್ತು ಆಂತರಿಕ ಹಿತಾಸಕ್ತಿಗಳ ದೆಸೆಯಿಂದ ಈತನಿಗೆ ಯಾವುದೇ ಪ್ರಮುಖ ನಿರ್ಧಾರಗಳನ್ನು ತೆಗೆದುಕೊಳ್ಳಲಾಗುವುದಿಲ್ಲ. ಈ ದೌರ್ಬಲ್ಯವನ್ನು ಅರಿಯುವ ಹೈದರಾಲಿಯು ಕೆಳದಿಯ ಮೇಲೆ ೧೭೬೩ರಲ್ಲಿ ಆಕ್ರಮಣ ಮಾಡುವುದರೊಂದಿಗೆ ಸಂಸ್ಥಾನವು ಅವನತಿಯ ಹಾದಿಯನ್ನು ಹಿಡಿಯುತ್ತದೆ.

## ಇಕ್ಕೇರಿ

ಇಕ್ಕೇರಿ ಸಾಗರ ತಾಲ್ಲೂಕಿನ ಒಂದು ಪುಟ್ಟ ಗ್ರಾಮವಾಗಿದ್ದು, ಕರ್ನಾಟಕದ ಸುಪ್ರಸಿದ್ಧ ಕೆಳದಿ ಸಂಸ್ಥಾನದ ರಾಜಧಾನಿ ಇದಾಗಿತ್ತು. ಇಕ್ಕೇರಿ ಮತ್ತು ಕೆಳದಿಯು ೧೬ನೆಯ ಶತಮಾನಗಳಲ್ಲಿ ಕೆಳದಿ ಅರಸರ ವೈಭವಾನ್ವಿತ ರಾಜಧಾನಿಯಾಗಿ ಮೆರೆಯಿತು. ವೀರಭದ್ರನಾಯಕನ ಆಡಳಿತ ಕಾಲದಲ್ಲಿ ಇಕ್ಕೇರಿ ವಿಜಯನಗರ ಅರಸರ ಅಧೀನತೆಯಿಂದ ಬೇರೆಯಾಗಿ ಸ್ವತಂತ್ರ ಸಂಸ್ಥಾನವೆನಿಸಿತು. ಅನಂತರ ತಮ್ಮ ರಾಜಧಾನಿಯನ್ನು ಇಕ್ಕೇರಿಯಿಂದ ಬಿದನೂರಿಗೆ ಬದಲಾಯಿಸಿದರು. ಆದರೂ ಇಕ್ಕೇರಿ, ಕೆಳದಿ ಅರಸರ ರಾಜಧಾನಿ ಎಂಬ ಗೌರವವನ್ನು ಬಹಳ ಕಾಲ ಪಡೆದಿತ್ತು. ಇಕ್ಕೇರಿಯಿಂದ ಟಂಕಸಾಲೆಯ ವರ್ಗವಾದರೂ ಇಕ್ಕೇರಿ ಪಗೋಡ, ಇಕ್ಕೇರಿ ಪಣಗಳು ಚಲಾವಣೆಯಲ್ಲಿದ್ದವು.

ಇಕ್ಕೇರಿ ನಗರದ ಸುತ್ತಲೂ ಮೂರು ಸುತ್ತುಕಟ್ಟು ಆವರಣಗಳ ವಿಶಾಲವಾದ ಕೋಟೆ ಗೋಡೆಗಳಿದ್ದುವು. ಕೋಟೆಯಲ್ಲಿ ಅರಮನೆ ಮತ್ತು ಭವ್ಯ ಕಟ್ಟಡಗಳಿದ್ದುವು. ಗತವೈಭವದ ಕುರುಹಾಗಿ ಈಗ ಅಲ್ಲಿ ಉಳಿದಿರುವುದು ಅಘೋರೇಶ್ವರ ದೇವಾಲಯ ಮಾತ್ರ. ಈ ದೇವಾಲಯದಲ್ಲಿನ ಮಧ್ಯದ ಕಂಬಗಳ ಪರಸ್ಪರ ದೂರವನ್ನು ಬಾಗಾಯತಿನ ಪ್ರಮಾಣಬದ್ಧ ಅಳತೆ ಎಂದು ಪರಿಗಣಿಸ ಲಾಗುತ್ತಿತ್ತು. ಈ ಮಾನವನ್ನು ದಾಯ ಎಂದು ಕರೆಯುತ್ತಿದ್ದರು.

ಇಕ್ಕೇರಿಯ ಅಘೋರೇಶ್ವರ ದೇವಸ್ಥಾನವು ಹೊಯ್ಸಳ–ಕದಂಬ ಶೈಲಿಯಲ್ಲಿದೆ. ಕೆಳದಿ ಅರಸರ ಆಳ್ವಿಕೆಯ ಕಾಲದಲ್ಲಿ ಇದನ್ನು ಹೊಂಬುಚದ ವೆಂಕಟಯ್ಯ ಎಂಬ ಶಿಲ್ಪಿ ಕಟ್ಟಿದನೆಂದು ದೇಗುಲದಲ್ಲಿನ ಕಲ್ಲಿನ ಹಳೆಗನ್ನಡದ ಬರಹವೊಂದು ಹೇಳುತ್ತದೆ. ಉತ್ತರ–ದಕ್ಷಿಣ ದಿಕ್ಕಿನಲ್ಲಿರುವ ಈ ದೇಗುಲವು ಗರ್ಭಗೃಹ, ಅರ್ಧಮಂಟಪ, ಮುಖಮಂಟಪ ಮತ್ತು ಎದುರಿಗೆ ನಂದಿಗೆ ಪ್ರತ್ಯೇಕ ಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಕಲ್ಲಿನ ಶಿವಲಿಂಗವಿದೆ. ಈ ದೇವಾಲಯದಲ್ಲಿ ೩೨ ಕೈಗಳ ಅಘೋರೇಶ್ವರನ ಉತ್ಸವ ಮೂರ್ತಿಯಿದೆ. ಅರ್ಧಮಂಟಪದಲ್ಲಿ ಬಿಳಿ ಕಲ್ಲಿನಿಂದ(ಅಮೃತ ಕಲ್ಲಿನಿಂದ) ಕೆತ್ತಿದ ಸಣ್ಣ ನಂದಿಯಿದೆ. ಅರ್ಧಮಂಟಪದ ದ್ವಾರದಲ್ಲಿ ಎರಡೂ ಬದಿಯಲ್ಲಿ ಅಘೋರೇಶ್ವರನ ಪರಿವಾರದ ಕೆತ್ತನೆಗಳಿವೆ. ಎಡಭಾಗದಲ್ಲಿ ಮಹಿಷಮರ್ದಿನಿ, ಭೈರವನ ಕೆತ್ತನೆಗಳಿದ್ದರೆ ಬಲಭಾಗದಲ್ಲಿ ಗಣಪತಿ, ಷಣ್ಮುಖನ ಕೆತ್ತನೆಗಳಿವೆ. ಎದುರಿನ ಮುಖಮಂಟಪ ಕೆತ್ತನೆಯಿರುವ ಕಂಬಗಳ ಆಧಾರದ ಮೇಲೆ ನಿಂತಿದೆ. ದೇಗುಲವು ದ್ರಾವಿಡ ಶೈಲಿಯ ಕಳಸವನ್ನು ಹೊಂದಿದೆ. ದೇಗುಲದ ಪಶ್ಚಿಮದಲ್ಲಿ ಇದೇ ಶೈಲಿಯ ಆದರೆ ಸ್ವಲ್ಪ ಸಣ್ಣದಾದ ಅಖಿಲಾಂಡೇಶ್ವರಿಯ ದೇಗುಲವಿದೆ. ದೇವಸ್ಥಾನದ ಎದುರು ಕಲ್ಲಿನ ಬೃಹತ್ ಬಸವನ ವಿಗ್ರಹವಿದ್ದು, ಅದರ ಒಂದು ಕಾಲಿನ ಕೆಳಭಾಗದಲ್ಲಿ ಚಿಕ್ಕ ಮಕ್ಕಳು ನುಸುಳುವಷ್ಟು ಜಾಗವಿದ್ದು, ಅದರಲ್ಲಿ ನುಸುಳಿದರೆ ಇಷ್ಟಾರ್ಥ ಪ್ರಾಪ್ತವಾಗುತ್ತದೆ ಎಂಬ ಪ್ರತೀತಿಯಿದೆ. ದೇವಸ್ಥಾನದ ಹೊರ ಆವರಣವು ಹಚ್ಚ ಹಸುರಿನ ಹುಲ್ಲು ಹಾಸಿನಿಂದ ಕಂಗೊಳಿಸುತ್ತದೆ.

ಇಲ್ಲಿನ ದೇವಸ್ಥಾನದಲ್ಲಿ ಒಂದು ಗೆರೆಯಿಂದ ಬೇರ್ಪಟ್ಟಿರುವ ಎರಡು ಹಲ್ಲಿಗಳನ್ನು ಜೊತೆಗೆ ಒಂದು ಚೇಳನ್ನೂ ಕೆತ್ತಲಾಗಿದ್ದು, ಆ ಹಲ್ಲಿಗಳು ಒಂದಕ್ಕೊಂದು ಮುಟ್ಟಿದಾಗ ಪ್ರಳಯವಾಗುತ್ತದೆ, ಆದರೆ ಅಲ್ಲಿರುವ ಚೇಳು ಅವನ್ನು ತಡೆಯುತ್ತದೆ ಎಂಬ ಪುರಾತನ ನಂಬಿಕೆ ಈಗಲೂ ಇದೆ. ದೇವಾಲಯದ ಎರಡೂ ಬದಿಗಳಲ್ಲಿ ಕೆರೆಗಳಿದ್ದು, ಅವುಗಳಿಂದಲೇ ಈ ಊರಿಗೆ ಇಕ್ಕೇರಿ(ಎರೆಡು + ಕೆರೆ = ಇಕ್ಕೆರೆ) ಎಂಬ ಹೆಸರು ಬಂದಿದೆ ಎಂಬ ಊಹೆ ಇದೆ.

**ಉಡಗಣಿ** (ಉಡುತಡಿ ಅಥವಾ ಉಡಗಣಿ): ಶಿವಶರಣೆ ಅಕ್ಕಮಹಾದೇವಿಯವರು ಜನಿಸಿದ್ದು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ-ಶಿರಾಳಕೊಪ್ಪದ ನಡುವೆ ಇರುವ ಉಡುತಡಿ ಅಥವಾ ಉಡಗಣಿ ಇಲ್ಲವೆ ಉಡುಗಣಿ ಎಂದೇ ಪ್ರಸಿದ್ಧವಾಗಿರುವ ಪುಟ್ಟ ಗ್ರಾಮ. ಇದೀಗ ಇದು ಪ್ರವಾಸಿ ತಾಣವಾಗಿಯೂ ಪ್ರಸಿದ್ಧವಾಗಿದೆ.

ಅಕ್ಕಮಹಾದೇವಿಯು ವಚನ ಸಾಹಿತ್ಯದ ಪ್ರಮುಖರಲ್ಲಿ ಒಬ್ಬರು. ಅಕ್ಕಮಹಾದೇವಿ ಕನ್ನಡದ ಪ್ರಥಮ ಮಹಿಳಾ ಕವಿಯತ್ರಿಯಾಗಿದ್ದಾರೆ. ಅಕ್ಕಮಹಾದೇವಿಯವರನ್ನು ಶರಣ ಚಳುವಳಿಯ ಪ್ರಮುಖರಾಗಿ, ಸ್ವಾಭಿಮಾನದ ಪ್ರತೀಕವಾಗಿ, ಸ್ತ್ರೀವಾದಿ ಚಳವಳಿಯ ನಿಜವಾದ ಪ್ರತಿಪಾದಕಿಯಾಗಿ, ಅಕ್ಕರೆಯ ಅಕ್ಕನಾಗಿ, ಹೀಗೆ ಹಲವು ರೀತಿ ಗುರುತಿಸಬಹುದಾಗಿದೆ. ಚಿಕ್ಕ ವಯಸ್ಸಿನಲ್ಲೇ ಸಕಲ ಸುಖವನ್ನು ತ್ಯಜಿಸಿದ ಅಕ್ಕ, ಎದುರಿಸಿದ ಪರೀಕ್ಷೆಗಳು ಬಹಳಷ್ಟು ಇವೆ. ಸಾಕ್ಷಾತ್ ಶಿವ (ಮಲ್ಲಿಕಾರ್ಜುನ)ನನ್ನು ಪತಿ ಎಂದು ಸ್ವೀಕರಿಸಿ, ಲೌಕಿಕ ಜಗತ್ತನ್ನು ಧಿಕ್ಕರಿಸಿ, ಕೇಶಾಂಬರೆಯಾಗಿ ನಡೆದ ಅಕ್ಕ, ಹಲವಾರು ಭಕ್ತರಿಗೆ ಮಾದರಿಯಾಗಿದ್ದಾಳೆ.

ಉಡುತಡಿಯಿಂದ ಎಲ್ಲವನ್ನೂ ತ್ಯಜಿಸಿ ಹೊರಟ ಅಕ್ಕಮಹಾದೇವಿಯವರು ಮುಂದೆ ಬಸವ ಕಲ್ಯಾಣದ ಅನುಭವ ಮಂಟಪದಲ್ಲಿ ಅಲ್ಲಮಪ್ರಭು, ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ ಮೊದಲಾದ ಶಿವ ಶರಣರೊಡನೆ ಕಲ್ಯಾಣದ ಕ್ರಾಂತಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರಲ್ಲದೇ, "ಚನ್ನಮಲ್ಲಿಕಾರ್ಜುನ" ಎಂಬ ಅಂಕಿತನಾಮದಲ್ಲಿ ವಚನ ಸಾಹಿತ್ಯಕ್ಕೆ(ಶರಣ ಸಾಹಿತ್ಯ) ತಮ್ಮದೇ ಆದ ಸಾಹಿತ್ಯ ಸೇವೆಯನ್ನು ಸಲ್ಲಿಸಿದ್ದಾರೆ.

ಅಕ್ಕಮಹಾದೇವಿ ಶರಣ ಚಳುವಳಿಯಲ್ಲಿ ಎತ್ತರದ ಚೇತನವಾಗಿ ಮೂಡಿ ಬಂದ ವ್ಯಕ್ತಿತ್ವ. ಅವರ ಇಡೀ ಜೀವನ ಕಥನ, ಐತಿಹ್ಯ, ವಿಸ್ಮಯ, ಪ್ರಭಾವಗಳಿಂದ ತುಂಬಿದ್ದರೂ ಸಹ, ಅವರ ಬಗ್ಗೆ ಅವರ ಸಮಕಾಲೀನ ವಚನಕಾರರೂ, ಅಕ್ಕನ ಕಾಲಕ್ಕೆ ತುಂಬಾ ಹತ್ತಿರದವನಾದ ಹರಿಹರ ಮಹಾಕವಿಯು ರಚಿಸಿರುವ 'ಮಹಾದೇವಿಯಕ್ಕಗಳ ರಗಳೆ' ಮತ್ತು ಸ್ವತಃ ಅಕ್ಕಮಹಾದೇವಿಯವರೇ ರಚಿಸುವ ವಚನಗಳೂ, ಅವರ ವ್ಯಕ್ತಿತ್ವವನ್ನು ಕಟ್ಟಿ ಕೊಡುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಈ ಎಲ್ಲವನ್ನೂ ಗಮನಿಸಿದಾಗ ಅಕ್ಕಮಹಾದೇವಿಯವರ ಜೀವನ ಅಸಾಮಾನ್ಯವಾದ, ವೈಶಿಷ್ಟ್ಯ

ತೆಯಿಂದ, ವೈಚಾರಿಕವಾದ, ಅನುಭಾವ ಪೂರ್ಣವಾದ, ನುಡಿ, ನಡೆಗಳೊಂದಾದ ಪರಿಯಲ್ಲಿರುವುದು ಕಂಡುಬರುತ್ತದೆ. ವಚನ ಚಳುವಳಿಯ ಸಮಯದಲ್ಲಿ, ಸಾಹಿತ್ಯದ ದೃಷ್ಟಿಯಿಂದ ಗಮನಿಸುವುದಾದರೆ, ಅಲ್ಲಮ ಮತ್ತು ಅಕ್ಕ ಅಂದಿನ ಅತ್ಯಂತ ವಿಶಿಷ್ಟ ಸಂವೇದನೆಯ ವ್ಯಕ್ತಿತ್ವದವರಾಗಿ ಗಮನ ಸೆಳೆಯುತ್ತಾರೆ. ಅನುಭಾವಿಯೂ, ಕವಯಿತ್ರಿಯೂ ಆಗಿದ್ದ ಅಕ್ಕಮಹಾದೇವಿಯವರ ವಚನಗಳು, ಕನ್ನಡ ಸಾಹಿತ್ಯದ ಮೌಲಿಕ ಬರವಣಿಗೆಗಳಾಗಿವೆ. ವಚನಕಾರರಲ್ಲಿಯೇ ಅತ್ಯಂತ ಕಿರಿಯ ವಯಸ್ಸಿನ ಅನುಭಾವಿಯಾಗಿದ್ದರೂ ಸಹ, ವಿಶಿಷ್ಟ ಜೀವನಾನುಭವವನ್ನು ಹೊಂದಿದ ಕಾರಣದಿಂದ, ಅವರ ಬರಹಗಳು ಗಮನಾರ್ಹ ವಾಗಿವೆ. ಉದಾ: 'ಲೋಕದ ಚೇಷ್ಟೆಗೆ ರವಿ ಬೀಜವಾದಂತೆ, ಕರಣಂಗಳ ಚೇಷ್ಟೆಗೆ ಮನಸ್ಸು ಬೀಜ', 'ಬೆಟ್ಟದಾ ಮೇಲೊಂದು ಮನೆಯ ಮಾಡಿ, ಮೃಗಗಳಿಗೆ ಅಂಜಿದೊಡೆಂತಯ್ಯಾ', 'ಹಸಿವಾದರೆ ಭಿಕ್ಷಾನ್ನಗಳುಂಟು, ತೃಷೆಯಾದರೆ ಕೆರೆ ಹಳ್ಳಗಳುಂಟು', ಹಾಗು ಸುಪ್ರಸಿದ್ಧ 'ಅಕ್ಕ ಕೇಳವ್ವ ನಾನೊಂದು ಕನಸ ಕಂಡೆ' ಮುಂತಾದ ವಚನಗಳು ಅವರ ಲೋಕಾನುಭವ, ಜ್ಞಾನ ಸಂಪನ್ನತೆ, ಅಭಿವ್ಯಕ್ತಿ, ಸಾಮರ್ಥ್ಯಕ್ಕೆ ನಿದರ್ಶನಗಳಾಗಿವೆ.

## ೫.೩ ಸಾಂಸ್ಕೃತಿಕ ಹಿನ್ನೆಲೆ

### ಸಾಂಸ್ಕೃತಿಕ ಹಿನ್ನೆಲೆಯ ಒಂದು ಅವಲೋಕನ

**ಶಾಸ್ತ್ರೀಯ ಸಂಗೀತ:** ಜಿಲ್ಲೆಯ ಹೆಚ್ಚು ಭಾಗದಲ್ಲಿ ಮೊದಲು ಕರ್ನಾಟಕ ಶಾಸ್ತ್ರೀಯ ಸಂಗೀತವಿದ್ದು, ಕಳೆದ ಆರು–ಏಳು ದಶಕಗಳಿಂದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ತನ್ನ ಇರುವಿಕೆಯನ್ನು ಸಾಬೀತುಪಡಿಸುತ್ತಾ ಬಂದಿದೆ. ಹಾಗೇ ದಿನೇ ದಿನೇ ಇದು ಬೆಳೆದು, ಈಗ ಜಿಲ್ಲೆಯ ಎಲ್ಲಾ ಭಾಗದಲ್ಲೂ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಕಲಾವಿದರನ್ನು ಹಾಗೂ ಕೇಳುಗರನ್ನು ಹುಟ್ಟು ಹಾಕಿದೆ.

**ಸುಗಮ ಸಂಗೀತ:** ಶಾಸ್ತ್ರೀಯ ಸಂಗೀತದಂತೆ ಸುಗಮ ಸಂಗೀತವೂ ಜಿಲ್ಲೆಯ ಗರಿಷ್ಠ ಪ್ರದೇಶದಲ್ಲಿ ತನ್ನ ಇರುವಿಕೆಯನ್ನು ಸಾಬೀತುಪಡಿಸಿದೆ. ಶಾಸ್ತ್ರೀಯ ಸಂಗೀತದ ಕಲಾವಿದರಲ್ಲದೇ ನಿರ್ದಿಷ್ಟ ಸುಗಮ ಸಂಗೀತಗಾರರು ಸುಗಮ ಸಂಗೀತವನ್ನೇ ನಂಬಿ ತಮ್ಮ ಜೀವನ ನಡೆಸುತ್ತಿದ್ದಾರೆ.

**ಡೊಳ್ಳು ಕುಣಿತ:** ಜಾನಪದ ಮೂಲದಿಂದ ಬಂದ ಈ ಡೊಳ್ಳುಕುಣಿತ ಗ್ರಾಮೀಣ ಪ್ರದೇಶದವರ ಪ್ರಸಿದ್ಧ ನೃತ್ಯವಾಗಿದ್ದು, ಹಬ್ಬ ಹರಿದಿನಗಳಲ್ಲಿ, ಸರ್ಕಾರಿ ಉತ್ಸವಗಳಲ್ಲಿ, ಸರ್ಕಾರಿ ದಿನಾಚರಣೆಗಳಲ್ಲಿ ಈ ನೃತ್ಯವನ್ನು ನೋಡಬಹುದಾಗಿದೆ. ಪುರುಷರಿಗೆ ಹೇಳಿ ಮಾಡಿಸಿದ ಈ ನೃತ್ಯದಲ್ಲಿ ಹಲವು ರೀತಿಯ ಕಷ್ಟಕರ ಭಂಗಿಗಳನ್ನು ನಿಂತು, ಕುಣಿದು ಮಾಡಲಾಗುತ್ತದೆ. ಕಳೆದ ಒಂದೆರಡು ದಶಕಗಳಿಂದ ಮಹಿಳೆಯರೂ ಈ ಡೊಳ್ಳುಕುಣಿತದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದು, ಯುವಜನೋತ್ಸವ, ಯುವಜನಮೇಳದಲ್ಲಿ ಪಾಲ್ಗೊಂಡು, ದೇಶದ ರಾಜಧಾನಿ ದೆಹಲಿಯನ್ನು ಸೇರಿ ಹಲವೆಡೆ ತಮ್ಮ ನೃತ್ಯ ಪ್ರದರ್ಶಿಸಿದ್ದಾರೆ.

**ಯಕ್ಷಗಾನ:** ಯಕ್ಷಗಾನವು ಶಿವಮೊಗ್ಗ ಹಾಗೂ ನೆರೆ ಜಿಲ್ಲೆಗಳಾದ ಉಡುಪಿ ಹಾಗೂ ಉತ್ತರ ಕನ್ನಡದ ಮೂಲಕಲೆಯಾಗಿದ್ದು, ಈ ಕಲೆಯನ್ನು ಹೆಚ್ಚಾಗಿ ಉನ್ನತವರ್ಗದವರೇ ಉಳಿಸಿ ಬೆಳೆಸುವವ ರಾಗಿದ್ದಾರೆ. ಆದರೆ ಆಧುನಿಕ ಕಾಲಮಾನದಲ್ಲಿ ಅಂದರೆ ಪ್ರಸ್ತುತದಲ್ಲಿ ಎಲ್ಲಾ ಪಂಗಡದವರು ಈ ಕಲೆಯನ್ನು ಕಲಿಯಲಾರಂಭಿಸಿದ್ದಾರೆ.

ಪೌರಾಣಿಕ ಕಥಾನಕದ ಸತ್ವದಿಂದಾಗಿ ಶ್ರೇಷ್ಠವಾದ ಮಾತುಗಾರಿಕೆ, ಭಾಗವತಿಕೆ, ಮದ್ದಳೆ, ಚಂಡೆಗಳಿಂದ ಈ ಕಲೆಯು ಕಲಾರಸಿಕರ ಕಣ್ಮನಗಳನ್ನು ತಣಿಸುತ್ತದೆ. ದೇಶ ವಿದೇಶಗಳಲ್ಲಿ ಈ ಕಲೆಗೆ ಇಂದು ಕಲಾಗೌರವ ಸಲ್ಲುತ್ತಿದೆ. ಯಕ್ಷಗಾನವು ಸಂಗೀತ ಪ್ರಧಾನವಾದ ರಂಗಕಲೆಯಾಗಿದ್ದು, ಇದನ್ನು ಬಯಲಿನಲ್ಲಿ ನಡೆಯುವ ಬಯಲಾಟ ಎಂದು ಹೇಳಬಹುದು. ಈ ಯಕ್ಷಗಾನದಲ್ಲಿ ಎರಡು ರೀತಿಯ ಬೇಧಗಳಿದ್ದು ಬಡಗುತಿಟ್ಟು ಎಂಬ ಪ್ರಕಾರವನ್ನು ಶಿವಮೊಗ್ಗ, ಉತ್ತರ ಕನ್ನಡ ಹಾಗೂ ಉಡುಪಿ ಜಿಲ್ಲೆಯ ಕೆಲವು ಭಾಗಗಳಲ್ಲಿ ಕಾಣಬಹುದಾಗಿದೆ. ಈ ಪ್ರಕಾರದಲ್ಲಿ ಕುಣಿತಕ್ಕೆ

ಹೆಚ್ಚು ಪ್ರಾಶಸ್ತ್ಯ ನೀಡಲಾಗಿದೆ. ಹಾಗೂ ಇಲ್ಲಿ ಚಂಡೆಯನ್ನು ಕುಳಿತು ನುಡಿಸಲಾಗುತ್ತದೆ. ಹಾಗೇ ತೆಂಕುತಿಟ್ಟು ಎಂಬ ಪ್ರಕಾರವು ಕರ್ನಾಟಕದ ಕರಾವಳಿ ಪ್ರದೇಶದಲ್ಲಿದ್ದು ಈ ಪ್ರಕಾರದ ಯಕ್ಷಗಾನದಲ್ಲಿ ವೇಷಭೂಷಣಗಳು ತುಂಬಾ ಇದ್ದು, ಇಲ್ಲಿ ಮಾತಿನ ಮೇಲೆ ಹೆಚ್ಚು ಪ್ರಾಶಸ್ತ್ಯ ನೀಡಲಾಗಿದೆ. ಹಾಗೂ ಇಲ್ಲಿ ಚಂಡೆಯನ್ನು ನಿಂತುಕೊಂಡೇ ನುಡಿಸುತ್ತಾರೆ.

**ಭರತನಾಟ್ಯ:** ದಕ್ಷಿಣ ಭಾರತದ ಸುಪ್ರಸಿದ್ಧ ನಾಟ್ಯ ಪ್ರಕಾರವಾದ ಭರತನಾಟ್ಯವು ಶಿವಮೊಗ್ಗದ ಪ್ರತಿ ಹಳ್ಳಿ, ನಗರ, ಪಟ್ಟಣಗಳಲ್ಲಿರುವ ಸಾಮಾನ್ಯವಾದ ಕಲೆಯಾಗಿದೆ. ಶಾಸ್ತ್ರೀಯ ಸಂಗೀತದಂತೆ ಭರತನಾಟ್ಯದಲ್ಲೂ ಹಲವು ಕಲಾವಿದರು ತಮ್ಮ ಪ್ರತಿಭೆಯಿಂದ ದೇಶಾದ್ಯಂತ ಹಾಗು ರಾಜ್ಯಾದ್ಯಂತ ಕಾರ್ಯಕ್ರಮಗಳನ್ನು ನೀಡಿ, ಶಿವಮೊಗ್ಗ ಜಿಲ್ಲೆಯ ಗೌರವವನ್ನು ಇಮ್ಮಡಿಗೊಳಿಸಿದ್ದಾರೆ.

**ಜಿಲ್ಲೆಯ ಉತ್ಸವಗಳು**

**ದಸರಾ ಉತ್ಸವಗಳು:** ಪ್ರತಿವರ್ಷವು ದಸರ ವೇಳೆಯಲ್ಲಿ ಜಿಲ್ಲೆಯ ಎಲ್ಲಾ ತಾಲ್ಲೂಕು ಕೇಂದ್ರಗಳಲ್ಲಿ ಕರ್ನಾಟಕ ರಾಜ್ಯ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಹತ್ತು ದಿನಗಳ ಸಾಂಸ್ಕೃತಿಕ ಕಲಾ ಪ್ರದರ್ಶನ, ಸಂಗೀತ, ನಾಟ್ಯ, ನಾಟಕಗಳನ್ನು ಆಯಾ ಭಾಗದ ಸ್ಥಳೀಯ ಕಲಾವಿದರಿಂದ ನಡೆಸುತ್ತಾ ಬಂದಿರುತ್ತದೆ. ಸುಪ್ರಸಿದ್ಧ ಮೈಸೂರು ದಸರಾ ಉತ್ಸವದಲ್ಲಿ ಶಿವಮೊಗ್ಗ ಜಿಲ್ಲೆಯ ಹಲವು ಕಲಾವಿದರು ತಮ್ಮ ಪ್ರತಿಭೆಯ ಕಾರ್ಯಕ್ರಮಗಳನ್ನು ನೀಡಿ ಜನಮನ್ನಣೆ ಗಳಿಸಿ, ಜಿಲ್ಲೆಗೆ ಹೆಸರು ತಂದಿರುತ್ತಾರೆ.

**ಮಾರಿಕಾಂಬಾ ಜಾತ್ರಾ ಉತ್ಸವ:** ಪ್ರತಿ ಮೂರು ವರ್ಷಕ್ಕೊಮ್ಮೆ ಸಾಗರದಲ್ಲಿ ಕರ್ನಾಟಕದಲ್ಲೇ ಅತೀ ದೊಡ್ಡ ಜಾತ್ರೆ ಎಂದೇ ಖ್ಯಾತಿ ಪಡೆದ ಮಾರಿಕಾಂಬಾ ಜಾತ್ರಾ ಉತ್ಸವ ನಡೆಯುತ್ತದೆ. ಸುಮಾರು ಏಳು ದಿನಗಳವರೆಗೆ ರಾಜ್ಯಾದ್ಯಂತ ಎಲ್ಲಾ ಭಾಗಗಳ ಕಲಾವಿದರನ್ನು ಸಂಗೀತ ಮತ್ತು ನೃತ್ಯ ಅಕಾಡೆಮಿ ಹಾಗೂ ಕನ್ನಡ ಸಂಸ್ಕೃತಿ ಇಲಾಖೆಯು ಇಲ್ಲಿಗೆ ಕರೆಸಿ, ಮನರಂಜನೆ ಕಾರ್ಯಕ್ರಮ ನಡೆಸಿಕೊಡುತ್ತಾರೆ.

**ನಾಟಕ ಹಾಗೂ ಸಿನಿಮಾ ಕ್ಷೇತ್ರ:** ನಾಟಕ ಹಾಗೂ ಸಿನಿಮಾ ಕ್ಷೇತ್ರಕ್ಕೆ ಶಿವಮೊಗ್ಗ ಜಿಲ್ಲೆ ತನ್ನ ಅತ್ಯಮೂಲ್ಯವಾದ ಹಲವಾರು ಕಲಾವಿದರನ್ನು ನೀಡಿದೆ.

**ನೀನಾಸಂ:** ನೀಲಕಂಠೇಶ್ವರ ನಾಟ್ಯ ಕಲಾಸಂಘ ಹೆಗ್ಗೋಡು(ನೀನಾಸಂ) ೧೯೪೯ರಲ್ಲಿ ಖ್ಯಾತ ರಂಗಕರ್ಮಿ ಮ್ಯಾಗ್ಸಸ್ಸೆ ಪ್ರಶಸ್ತಿ ವಿಜೇತರಾದ ಶ್ರೀ ಕೆ.ವಿ.ಸುಬ್ಬಣ್ಣನವರಿಂದ ಸ್ಥಾಪಿಸಲ್ಪಟ್ಟಿತು. ೧೯೫೮ರಿಂದ ಇದು ತನ್ನ ನಾಟಕಗಳ ಪ್ರದರ್ಶನ ಪ್ರಾರಂಭಿಸಿತು. ಪ್ರತಿವರ್ಷ ರಾಜ್ಯದಾದ್ಯಂತ ಹಾಗೂ ಹೊರ ರಾಜ್ಯಗಳಲ್ಲೂ ನೀನಾಸಂನ ತಿರುಗಾಟದ ನಾಟಕಗಳು ಯಶಸ್ವಿಯಾಗಿ ಪ್ರದರ್ಶನಗೊಳ್ಳುತ್ತಾ ಬಂದಿದೆ. ರಾಜ್ಯದ ಮೂಲೆ ಮೂಲೆಗಳಿಂದ ರಂಗಕಲೆಯ ಆಸಕ್ತರು ಇಲ್ಲಿ ರಂಗಕಲೆಯನ್ನು ಕಲಿತು ದೂರದರ್ಶನ

ಹಾಗೂ ಸಿನಿಮಾ ರಂಗಗಳಲ್ಲಿನ ಕಲಾವಿದರಾಗಿದ್ದಾರೆ. ಉದಾ: ದರ್ಶನ್, ಮಂಡ್ಯ ರಮೇಶ್, ನೀನಾಸಂ ಸತೀಶ, ಇತ್ಯಾದಿ.

ನೀಲಕಂಠೇಶ್ವರ ನಾಟ್ಯಸೇವಾ ಸಂಘ(ನೀನಾಸಂ) ಕೆ.ವಿ.ಸುಬ್ಬಣ್ಣ ಅವರು ಸ್ಥಾಪಿಸಿದ ಒಂದು ರಂಗಕಲಾ ಸಂಘ. ಇದು ಶಿವಮೊಗ್ಗ ಜಿಲ್ಲೆಯ ಸಾಗರದ ಬಳಿಯ ಹೆಗ್ಗೋಡಿನಲ್ಲಿದೆ. ಸುಬ್ಬಣ್ಣನವರ ಮಗ ಕೆ.ವಿ.ಅಕ್ಷರ ಇದರ ಈಗಿನ ಮುಖ್ಯಸ್ಥರು. ತಿರುಗಾಟ ಎಂಬ ಹೆಸರಿನ ತಂಡ ಎಲ್ಲೆಡೆ ಸಂಚರಿಸಿ ಪ್ರದರ್ಶನ ನೀಡುತ್ತದೆ.

ಸುಬ್ಬಣ್ಣನವರು ೧೯೪೯ರಲ್ಲಿ ಸ್ಥಾಪಿಸಿದ ನೀನಾಸಂ ಒಂದು ಅನನ್ಯ ಸಂಸ್ಥೆ. ಹೆಗ್ಗೋಡಿನ ಸುತ್ತು-ಮುತ್ತಲಿನ ರಂಗಾಸಕ್ತರನ್ನು ಒಟ್ಟುಗೂಡಿಸಿ, ಅವರ ಆಸಕ್ತಿಗೆ ಉತ್ತೇಜನ ಕೊಡುವ ಒಂದು ನಮ್ರ ಉದ್ದೇಶದಿಂದ ಪ್ರಾರಂಭಿಸಿದ ಈ ಸಂಸ್ಥೆಯ ಚಟುವಟಿಕೆಗಳು ಈಗ ಹಲವಾರು ಕ್ಷೇತ್ರಗಳಲ್ಲಿ ಹಬ್ಬಿಕೊಂಡು ಒಂದು ಹೆಮ್ಮೆಯ ಸಂಸ್ಥೆಯಾಗಿ ಬೆಳೆದು ಬಂದಿದೆ. ಕರ್ನಾಟಕ ನಾಟಕ ಚಳವಳಿಗೆ ಹೆಗ್ಗೋಡಿನ ನೀನಾಸಂ ಚುಕ್ಕಾಣಿಯಾಗಿ ಕೆಲಸ ಮಾಡಿದೆ. ಅಲ್ಲಿಯ ಜನರು ಪ್ರಚುರಪಡಿಸುತ್ತಿರುವ ರಂಗಚಟುವಟಿಕೆಗಳು ಸುಬ್ಬಣ್ಣನವರ ಶ್ರಮಕ್ಕೆ ಸಾಕ್ಷಿಯಾಗಿ ನಿಂತಿವೆ.

**ನೀನಾಸಂ ಸಂಸ್ಥೆಯು ನಡೆಸುತ್ತಿರುವ ಹಲವಾರು ಚಟುವಟಿಕೆಗಳಲ್ಲಿ ಕೆಲವು ಮುಖ್ಯವಾದವು**

೧. ಒಂದು ವಿಶಿಷ್ಟ ರಂಗತಂಡವನ್ನು ಸ್ಥಾಪಿಸಿ, ಹಲವಾರು ನಾಟಕಗಳನ್ನು ರಚಿಸಿ, ಅವುಗಳನ್ನು ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಪ್ರದರ್ಶಿಸುವ ತಿರುಗಾಟವೆಂಬ ರಂಗ ಸಂಚಾರದ ವ್ಯವಸ್ಥೆ

೨. ಶಿವರಾಮ ಕಾರಂತ ರಂಗಮಂದಿರವೆಂಬ ಒಂದು ಸುಸಜ್ಜಿತ ರಂಗಮಂದಿರ ಸ್ಥಾಪನೆ.

೩. ನೀನಾಸಂ ರಂಗ ಶಿಕ್ಷಣ ಕೇಂದ್ರ

೪. ನೀನಾಸಂ ಚಿತ್ರ ಸಮಾಜ

೫. ನೀನಾಸಂ ಜನಸ್ಪಂದನ

೬. ನೀನಾಸಂ ಮಾತುಕತೆ

೭. ನೀನಾಸಂ ಪ್ರತಿಷ್ಠಾನವೆಂಬ ಸಂಸ್ಥೆಯ ಸ್ಥಾಪನೆ. ಈಗ ಈ ಸಂಸ್ಥೆಯ ಚಟುವಟಿಕೆಗಳು ಹಲವು ಹತ್ತಾರು, ಅಲ್ಲದೆ ಅದು ಕರ್ನಾಟಕದ ಗ್ರಾಮೀಣ ಭಾಗಗಳಲ್ಲಿ ಸಮಾಜ ಸೇವೆ ಸಲ್ಲಿಸುವ ಹಿರಿಯ ಉದ್ದೇಶವಿಟ್ಟುಕೊಂಡು ದುಡಿಯುತ್ತಿರುವ ಒಂದು ಹಿರಿಮೆಯ ಸಂಸ್ಥೆ ಎಂದು ಗುರುತಿಸಿ ಕೊಂಡಿದೆ.

೮. ಅಕ್ಷರ ಪ್ರಕಾಶನ

**ನೀನಾಸಂ ಸಂಸ್ಕೃತಿ ಶಿಬಿರ**

ನೀನಾಸಂ ಸ್ಥಾಪಿತವಾದಂದಿನಿಂದ ಈ ವರೆಗೆ ನೂರಾರು ನಾಟಕಗಳನ್ನೂ, ಅಭ್ಯಾಸ ಪ್ರಯೋಗಗಳನ್ನೂ ನೀನಾಸಂ ರಂಗದ ಮೇಲೆ ತಂದಿದೆ. ಅಂಥ ಪಟ್ಟಿಯಲ್ಲಿ, ಹಲವು ಪಾಶ್ಚಾತ್ಯ, ಸಂಸ್ಕೃತ, ಹಿಂದಿ ಮತ್ತು ಕನ್ನಡ ನಾಟಕಗಳು ಸೇರಿಕೊಂಡಿವೆ. ತುಘಲಕ್, ಸ್ಮಶಾನ ಕುರುಕ್ಷೇತ್ರಂ, ಪೋಲಿ ಕಿಟ್ಟಿ, ಅಶ್ವತ್ಥಾಮನ್ ಅಹಲ್ಯೆ ಯಾರೋ ಅಂದರು ಮುಂತಾದ ಜನಪ್ರಿಯ ಕನ್ನಡ ನಾಟಕಗಳನ್ನು ರಂಗದ ಮೇಲೆ ತಂದ ಖ್ಯಾತಿ ನೀನಾಸಂಗೆ ಸಲ್ಲುತ್ತದೆ. ತಿರುಗಾಟ, ತಂಡದವರು ಹೆಸರಾಂತ ರಂಗಕರ್ಮಿಗಳು ನಿರ್ದೇಶಿಸಿದ ಹಲವಾರು ನಾಟಕಗಳನ್ನು ಕರ್ನಾಟಕದ ವಿವಿಧ ಭಾಗಗಳಲ್ಲಿ ಪ್ರದರ್ಶಿಸಿದ್ದಾರೆ. ತದ್ರೂಪಿ, ಆಲಿಬಾಬ, ಈ ಕೆಳಗಿನವರು, ಚಿದಂಬರ ರಹಸ್ಯ, ಸೆಜುವಾನ್ ನಗರದ ಸಾಧ್ವಿ, ಪಂಜರ ಶಾಲೆ, ತುಕ್ರನ ಕನಸು, ಹೂ ಹುಡುಗಿ, ಗೋಕುಲ ನಿರ್ಗಮನ, ಅಗ್ನಿ ಮತ್ತು ಮಳೆ- ಇವುಗಳಲ್ಲಿ ಕೆಲವು. ಸಂಸ್ಕೃತ ಮಹಾ ಕವಿ, ಕಾಳಿದಾಸನ ಅಭಿಜ್ಞಾನ ಶಾಕುಂತಲಂ ನಾಟಕದ ಅದ್ಭುತ ಪ್ರಯೋಗವನ್ನು ನಡೆಸುತ್ತಿದ್ದಾರೆ. ಇವೆಲ್ಲವೂ ಹೆಗ್ಗೋಡಿನ ನೀನಾಸಂ ಚಟುವಟಿಕೆಗಳ ಅಂಗವಾಗಿ ರಂಗ ಶಿಕ್ಷಣ ಕೇದ್ರ ಗಳಿಸಿದ ಸಾಧನೆಗಳಲ್ಲಿ ಕೆಲವು.

ಕೆ.ವಿ.ಸುಬ್ಬಣ್ಣನವರು ಸ್ಥಾಪಿಸಿದ ನೀಲಕಂಠೇಶ್ವರ ನಾಟಕ ಸಂಸ್ಥೆ (ನೀನಾಸಂ), ರಾಜ್ಯದ ಅತ್ಯುನ್ನತ ರಂಗ ತರಬೇತಿ ಕೇಂದ್ರಗಳಲ್ಲಿ ಪ್ರಮುಖ ಸ್ಥಾನ ಪಡೆದಿದೆ. ಪ್ರತಿ ವರ್ಷವೂ ನೀನಾಸಂ ರಂಗ ಶಿಕ್ಷಣ ಕೇಂದ್ರದಲ್ಲಿ ತರಬೇತಾದ ನಟ, ನಟಿಯರು, ಪ್ರತಿ ವರ್ಷ ಜುಲೈಯಿಂದ ಅಕ್ಟೋಬರ್ ವರೆಗೆ ನಾಟಕಗಳನ್ನು ಸಿದ್ಧಪಡಿಸಿ, ರಾಜ್ಯದಾದ್ಯಂತ, ಎಲ್ಲ ಜಿಲ್ಲೆಗಳಲ್ಲೂ ಪ್ರದರ್ಶನ ನೀಡುತ್ತದೆ.

ಪ್ರಪಂಚದ ಶ್ರೇಷ್ಠ ನಾಟಕ ಕೃತಿಗಳನ್ನು ನಮ್ಮ ರಂಗಭೂಮಿಗೆ ತರುವುದು; ಶಾಸ್ತ್ರೀಯ ಸಂಸ್ಕೃತ ಮತ್ತು ಭಾರತೀಯ ನಾಟಕಗಳನ್ನು ಕನ್ನಡಕ್ಕೆ ಪರಿಚಯಿಸುವುದು; ಹೊಸ ನಾಟಕಗಳ ರಚನೆಯನ್ನು ಪ್ರೇರೇಪಿಸುವುದು ಮತ್ತು ಹೊಸ ಪ್ರಯೋಗಗಳ ಮೂಲಕ ಹಳೆಯ ನಾಟಕಗಳ ಪುನರ್ ಮೌಲ್ಯಮಾಪನವಾಗುವಂತೆ ಪ್ರಯತ್ನಿಸುವುದು ನೀನಾಸಂ ತಿರುಗಾಟದ ಮುಖ್ಯ ಉದ್ದೇಶವಾಗಿದೆ.

ಪ್ರತಿ ವರ್ಷವೂ ನೀನಾಸಂ ರಂಗ ಶಿಕ್ಷಣ ಕೇಂದ್ರದಲ್ಲಿ ತರಬೇತಾದ ನಟ, ನಟಿಯರು ಮತ್ತು ಹಿಂದಿನ ವರ್ಷದ ತಿರುಗಾಟದಲ್ಲಿ ಪಾಲ್ಗೊಂಡ ಕೆಲ ನಟ, ನಟಿಯರ ತಂಡವನ್ನು ಆರಿಸಲಾಗುತ್ತದೆ. ಕರ್ನಾಟಕದ ವಿವಿಧ ಭಾಗಗಳಲ್ಲಿ ಲಭ್ಯವಾಗುವ ರಂಗ ಸೌಲಭ್ಯಗಳನ್ನು ಗಮನದಲ್ಲಿಟ್ಟುಕೊಂಡು ತಿರುಗಾಟ ತಂಡದ ಶಕ್ತಿ-ಸಾಮರ್ಥ್ಯದ ಮಿತಿಯಲ್ಲಿ ಸಾಧ್ಯವಾಗುವಷ್ಟು ವ್ಯವಸಾಯಿ ಶಿಸ್ತಿನ ರಂಗ ಪ್ರದರ್ಶನವನ್ನು ಕೊಡುವುದು ತಂಡದ ಗುರಿ.

ಮಲೆನಾಡಿನ ಹೆಗ್ಗೋಡು ಎಂಬ ಪುಟ್ಟ ಹಳ್ಳಿ ಕೊಳಲಾಗಿದ್ದು, ಎಂದೆಂದಿಗೂ ಬತ್ತದ ಚೈತನ್ಯದ ಚಿಲುಮೆ ಕೆ.ವಿ.ಸುಬ್ಬಣ್ಣನವರು ಆ ಕೊಳಲೂದಿದ ಮಾಂತ್ರಿಕನಾಗಿದ್ದು, ಆ ಕೊಳಲ ಗಾನದಿಂದ

ಹುಟ್ಟಿದ ರಂಗ ಪ್ರಯೋಗಗಳು, ಚಲನಚಿತ್ರಲೋಕದ ದಿಗ್ಗಜರು ಈ ಪ್ರಪಂಚಕ್ಕೆ ಕೊಟ್ಟ ಅಪರೂಪದ ರತ್ನಗಳನ್ನ ಅವರು ನಮಗೆಲ್ಲಾ ಉಣ ಬಡಿಸಿದ ಪರಿ, ಸಾಹಿತ್ಯದ ಮಾತುಕತೆಗಳು, ಕಲೆ ಮತ್ತು ಸಂಸ್ಕೃತಿ ಸಂಭ್ರಮಗಳು, ಜೀವನ ಸಮಷ್ಟಿ, ದೃಷ್ಟಿಕೋನಗಳ ಕ್ರಿಯಾವಾದಗಳು ಒಂದೇ ಎರಡೇ! ಆ ಸಣ್ಣ ಹಳ್ಳಿ ಹೆಗ್ಗೋಡಿನಲ್ಲಿ ಸುಬ್ಬಣ್ಣನವರು ಮತ್ತವರ ಗೆಳೆಯರು ಸೃಷ್ಟಿಸಿದ ಲೋಕಕ್ಕೆ ಯಾವ ಹೆಸರನ್ನು ತಾನೇ ಇಡುವುದು? ಆ ಲೋಕಕ್ಕೆ ನೀನಾಸಂ ಮತ್ತು ಹೆಗ್ಗೋಡು ಎಂಬ ಎರಡೇ ಪದಗಳು ಸಾಕಲ್ಲವೇ! ಮತ್ತೇನು ಗುರುತು, ಲಾಂಛನ ಬೇಕು? ಎಲ್ಲವೂ ತನ್ನಷ್ಟಕ್ಕೆ ತಾನೇ ಅನಾವರಣ ಗೊಳ್ಳುತ್ತದೆ.

೧೯೪೯ರಲ್ಲಿ ಹೆಗ್ಗೋಡಿನ ಸುತ್ತ ಮುತ್ತಲಿನ ಹಳ್ಳಿಗಳ ಕೃಷಿಕರಲ್ಲಿ ಕೆಲವರು ತಮಗಿದ್ದ ರಂಗಾಸಕ್ತಿಗೆ, ನಾಟಕಗಳ ಬಗ್ಗೆ ತಮಗಿರುವ ತುಂಬು ಪ್ರೀತಿಗೆ ಒಂದು ಖಚಿತ ಸಾಂಸ್ಥಿಕ ರೂಪ ಕೊಟ್ಟು ಶ್ರೀ ನೀಲಕಂಠೇಶ್ವರ ನಾಟ್ಯ ಸಂಘವೆಂಬ ಸಂಸ್ಥೆಯನ್ನು ಆರಂಭಿಸಿದರು. ಸ್ಥಳೀಯ ದೇವರಾದ ನೀಲಕಂಠೇಶ್ವರನ ಹೆಸರೇ ಸಂಸ್ಥೆಗೂ ಕೂಡ. ಕೃಷಿ ಕೆಲಸ ಮುಗಿಸಿ ಬಂದು ಸಂಜೆ, ರಾತ್ರಿ ಹೊತ್ತಿನಲ್ಲಿ ನಾಟಕಗಳನ್ನು ಬೆಳೆಸಿ ಹಳ್ಳಿಗರಿಗೆ ಅವುಗಳ ರಸದೌತಣವನ್ನು ಬಡಿಸುತ್ತಿದ್ದರು. ಅವರುಗಳ ಮೇಲೆ ಭಾರತದ ಸ್ವಾತಂತ್ರ್ಯ ಹೋರಾಟದ ಚಳವಳಿಗಳ ಪ್ರಭಾವವೂ ಸಾಕಷ್ಟಿತ್ತು. ಅವರಲ್ಲಿ ಒಬ್ಬರು ಕೆ.ವಿ. ಸುಬ್ಬಣ್ಣ. ಸಂಸ್ಥೆ ಬೆಳೆಯುತ್ತ ಹೋದ ಹಾಗೆ ಸುಬ್ಬಣ್ಣನವರು ನಾಟಕಗಳು ಕನ್ನಡಿಗಳ ಹಾಗೆ– ಜನರ ಜೀವನದ ದಿನನಿತ್ಯದ ಆಗುಹೋಗುಗಳನ್ನು, ನಮ್ಮೆಲ್ಲರ ಬದುಕುಗಳ ಮೇಲೆ ನಾನಾ ರೀತಿಯ ಪ್ರಭಾವಗಳನ್ನು ಬೀರುವ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಮತ್ತು ಧಾರ್ಮಿಕ ಅಂಶಗಳನ್ನು ಅವಲೋಕಿಸುವ ಶಕ್ತಿ ನಾಟಕಗಳಿಗೆ ಇದೆ ಎಂದು ಗುರುತಿಸಿದ್ದರು. ಜನಸಾಮಾನ್ಯರಿಗೆ ಸುಲಭವಾಗಿ ಎಟುಕುವ ನಾಟಕಗಳಿಂದ ಸಾಮಾಜಿಕ ಬದಲಾವಣೆ, ನ್ಯಾಯ, ಅರಿವು, ಜಾಗೃತಿಗಳನ್ನ ಅವರಿಗೆ ತಲುಪಿಸಬಹುದು ಅನ್ನುವ ಆಶಯವೂ ಇತ್ತು. ಆ ಹಂತದಲ್ಲಿ ನಾಟಕಗಳ, ಅವುಗಳ ಕಥಾ ಹಂದರಗಳ, ಅದರ ಮೂಲಕ ಹಾಗೇ ಜೀವನದೃಷ್ಟಿಗಳನ್ನು ಸುತ್ತುವರಿದ ಹಲವಾರು ಬೌದ್ಧಿಕ ಚರ್ಚೆಗಳು, ಕಮ್ಮಟಗಳು, ಸಾಹಿತ್ಯಸಂಬಂಧ ಕೆಲಸಗಳು ನಡೆಯಲಾರಂಭಿಸಿದ್ದು ಆಶ್ಚರ್ಯವೇನಿಲ್ಲ. ೧೯೬೦ರಲ್ಲಿ ಅಕ್ಷರ ಪ್ರಕಾಶನ ಹುಟ್ಟಿಕೊಂಡಿತು. ಕರ್ನಾಟಕದ ಸಾಹಿತ್ಯ ಪ್ರಿಯರಿಗೆ ಅಕ್ಷರ ಪ್ರಕಾಶನ ಕೊಟ್ಟಿರುವ ಕೊಡುಗೆ ಅಮೂಲ್ಯ.

೧೯೮೦ ರ ಆದಿಯಲ್ಲಿ ಆರಂಭವಾದ ನೀನಾಸಂ ರಂಗಶಾಲೆ ಪ್ರತಿ ವರ್ಷ ಆಯ್ದ ಅಭ್ಯರ್ಥಿಗಳಿಗೆ ಹತ್ತು ತಿಂಗಳುಗಳ ಕಾಲ ರಂಗಕಲಿಕೆಯನ್ನು ನೀಡಿ ಅವರನ್ನು ರಂಗಕೃಷಿಕರಾಗಿ ತಿದ್ದಿ ತೀಡುತ್ತಿದೆ. ತಮ್ಮ ರಂಗಕಲೆಯ ವಿದ್ಯಾಭ್ಯಾಸದ ಸಮಯದಲ್ಲಿ ಅವರುಗಳು ೨, ೩ ನಾಟಕಗಳನ್ನು ಕೈಗೆತ್ತಿಕೊಂಡು, ತಯಾರಿ ಮಾಡಿಕೊಂಡು ಕರ್ನಾಟಕದಾದ್ಯಂತ ತಿರುಗಾಟವೆಂಬ ಹೆಸರಿನಲ್ಲಿ ಆ ನಾಟಕಗಳನ್ನು

ಪ್ರದರ್ಶಿಸುತ್ತಾರೆ. ೧೯೮೬ರಿಂದ ೧೯೯೨ರವರೆಗೆ ಪ್ರತಿ ವರ್ಷ ನಾನು ಕೂಡ ತಿರುಗಾಟದ ಕೆಲ ನಾಟಕಗಳನ್ನು ನೋಡಿ ಆನಂದಿಸಿದ್ದೇನೆ. ಆಗ ನೀನಾಸಂನ ಕನ್ನಡ ರಂಗಭೂಮಿಯ ಹೆಸರಾಂತ ನಟರನ್ನು, ನಾಟಕಕಾರರನ್ನು, ನಿರ್ದೇಶಕರನ್ನು, ರಂಗಸಜ್ಜಿಕೆಯ ವಿನ್ಯಾಸದಲ್ಲಿ, ವೇಷಭೂಷಣಗಳ ವಿನ್ಯಾಸದಲ್ಲಿ, ಬೆಳಕಿನ ವಿನ್ಯಾಸದಲ್ಲಿ ಆಗಲೇ ಹೆಸರು ಮಾಡಿದ್ದ, ನಂತರ ಪ್ರಸಿದ್ಧಿಗೆ ಬಂದ ಹಲವರನ್ನು ನೋಡಿದ್ದು ಭಾರಿ ರೋಮಾಂಚನವನ್ನು ಉಂಟುಮಾಡಿತ್ತು. ನೀನಾಸಂನ ಅಂದಿನ ವಿದ್ಯಾರ್ಥಿಗಳಲ್ಲಿ ಎಷ್ಟೋ ಮಂದಿ ಇಂದು ಕರ್ನಾಟಕದಾದ್ಯಂತ ಹೆಸರು ಮಾಡಿರುವ ಕಲಾವಿದರು.

**ಮಾಲ್ಗುಡಿ ಡೇಸ್**(ದೂರದರ್ಶನದ ಧಾರವಾಹಿ): ಶ್ರೀ ಆರ್.ಕೆ.ನಾರಾಯಣರವರ ಕಾದಂಬರಿಯ ಆಧಾರಿತ 'ಮಾಲ್ಗುಡಿಡೇಸ್' ಎಂಬ ಧಾರಾವಾಹಿಯು ಕನ್ನಡ ಸಿನಿಮಾ ಕ್ಷೇತ್ರದ ಶ್ರೇಷ್ಠ ನಟರಾದ ಶ್ರೀ ಶಂಕರನಾಗ್‌ರವರ ನಿರ್ದೇಶನದಲ್ಲಿ ಶಿವಮೊಗ್ಗ ಜಿಲ್ಲೆಯ ಆಗುಂಬೆ ಹಾಗೂ ತೀರ್ಥಹಳ್ಳಿ ತಾಲ್ಲೂಕಿನ ಹಲವು ಪ್ರದೇಶಗಳಲ್ಲಿ ಚಿತ್ರೀಕರಣಗೊಂಡಿದೆ.

**ಕಾನೂರು ಹೆಗ್ಗಡತಿ:** ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ರಾಷ್ಟ್ರಕವಿ ಕುವೆಂಪುರವರ ಕಾದಂಬರಿಯ ಆಧಾರಿತ "ಕಾನೂರು ಹೆಗ್ಗಡತಿ" ಎಂಬ ಚಿತ್ರವು ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಶ್ರೀ ಗಿರೀಶ್ ಕಾರ್ನಾಡ್‌ರವರ ನಿರ್ದೇಶನದಲ್ಲಿ ಹಾಗೂ ಶ್ರೀ ಬಿ.ವಿ.ಕಾರಂತರ ಸಂಗೀತ ನಿರ್ದೇಶನದಲ್ಲಿ ತೀರ್ಥಹಳ್ಳಿಯ ಸುತ್ತಮುತ್ತಲಿನ ಪ್ರದೇಶದಲ್ಲಿ ಚಿತ್ರೀಕರಣಗೊಂಡಿದೆ.

**ಸಂಸ್ಕಾರ:** ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಶ್ರೀ ಯು.ಆರ್.ಅನಂತಮೂರ್ತಿಯವರ ಕಾದಂಬರಿಯ ಆಧಾರಿತ "ಸಂಸ್ಕಾರ" ಚಿತ್ರವು ಬಹುಪಾಲು ಶಿವಮೊಗ್ಗ ಜಿಲ್ಲೆಯಲ್ಲೇ ಚಿತ್ರೀಕರಣಗೊಂಡಿದೆ.

**ದ್ವೀಪ:** ಖ್ಯಾತ ಚಲನಚಿತ್ರ ನಟಿ, ದಿವಂಗತ ಸೌಂದರ್ಯರವರು ನಟಿಸಿದ "ದ್ವೀಪ" ಚಿತ್ರವು ಶಿವಮೊಗ್ಗ ಜಿಲ್ಲೆಯ ಶರಾವತಿ ನದಿಯ ಹಿನ್ನೀರಿನ ಪ್ರದೇಶವಾದ ತುಮರಿ ಹಾಗೂ ಸುತ್ತಮುತ್ತಲಿನ ಪ್ರದೇಶದ ನೈಜ ಕಥೆಯನ್ನಾಧರಿಸಿದ ಚಿತ್ರವಾಗಿದ್ದು, ಮಳೆಗಾಲದ ಸಮಯದಲ್ಲಿ ಲಿಂಗನಮಕ್ಕಿ ಜಲಾಶಯದಲ್ಲಿ ಮಳೆನೀರು ತುಂಬಿದಾಗ ಹಿನ್ನೀರಿನ ಪ್ರದೇಶದಲ್ಲಿರುವ ಜನಸಾಮಾನ್ಯರಿಗೆ ಬಂದೊದಗುವ ಕಷ್ಟಗಳನ್ನು ನೈಜವಾಗಿ ಈ ಚಿತ್ರದಲ್ಲಿ ಚಿತ್ರಿಸಲಾಗಿದೆ. ಈ ಚಿತ್ರಕ್ಕೆ ಹಾಗೂ ಈ ಚಿತ್ರದ ನಟನೆಗಾಗಿ ಸೌಂದರ್ಯರವರಿಗೆ ರಾಷ್ಟ್ರ ಪ್ರಶಸ್ತಿ ಲಭಿಸಿದೆ.

**ಸುಪ್ರಸಿದ್ಧ ಕವಿಗಳು, ನಾಟಕಕಾರರು, ಸಾಹಿತಿಗಳು**

**ಕುವೆಂಪು:** 'ರಾಷ್ಟ್ರಕವಿ' ಎಂದೇ ಖ್ಯಾತ ನಾಮರಾದ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ(ಕುವೆಂಪು) ಅವರು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಕುಪ್ಪಳ್ಳಿಯವರು ಎಂಬುದು ಈ ಜಿಲ್ಲೆಗೆ ಅತೀ ಹೆಮ್ಮೆಯ ವಿಷಯವಾಗಿದೆ.

'ಕುವೆಂಪು' ಎಂಬ ಕಾವ್ಯನಾಮದಿಂದಲೇ ಪ್ರಸಿದ್ಧರಾಗಿರುವ ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪನವರು ಕನ್ನಡದ ಶ್ರೇಷ್ಠ ಕವಿಗಳಲ್ಲೊಬ್ಬರು. ಇಂಗ್ಲೀಷಿನ ನವೋದಯ ಕಾಲದ ರಮ್ಯ ಕವಿಗಳ ಪ್ರಭಾವಕ್ಕೊಳಗಾಗಿ 'ಬಿಗಿನರ್ಸ್ ಮ್ಯೂಸ್' ಎಂಬ ಆರು ಕವನಗಳ ಕವನ ಸಂಕಲನವನ್ನು ೧೯೨೨ರಲ್ಲಿ ರಚಿಸಿದರು. ನಂತರ ಜೇಮ್ಸ್ ಕಸಿನ್ರವರ ಸಲಹೆಯಂತೆ ಕನ್ನಡದಲ್ಲಿಯೇ ಕೃತಿ ರಚನೆಯಲ್ಲಿ ತೊಡಗಿದರು.

ಕುವೆಂಪುರವರು ಕಾವ್ಯ, ಕವನ, ಕಥೆ, ಕಾದಂಬರಿ, ವಿಮರ್ಶೆ, ಅನುವಾದ, ನಾಟಕ ಹೀಗೆ ಎಲ್ಲಾ ಬಗೆಯ ಸಾಹಿತ್ಯ ರೂಪಗಳಲ್ಲಿಯೂ ತಮ್ಮ ಛಾಪು ಮೂಡಿಸಿದ್ದಾರೆ. ಇವರು ಕನ್ನಡದಲ್ಲಿ ಸುಮಾರು ೮೦ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. 'ಶ್ರೀ ರಾಮಾಯಣ ದರ್ಶನಂ' ಇವರ ಜ್ಞಾನಪೀಠ ಪ್ರಶಸ್ತಿ ಪಡೆದ ಕೃತಿಯಾಗಿದೆ. ಈ ಮಹಾಕಾವ್ಯಕ್ಕೆ ಮೂಲ ಆಕರಗ್ರಂಥ ವಾಲ್ಮೀಕಿ ರಾಮಾಯಣವಾದರು ಇದರಲ್ಲಿ ಬರುವ ಸನ್ನಿವೇಶಗಳು, ಪಾತ್ರಗಳ ಚಿತ್ರಣ ವಿಭಿನ್ನವಾಗಿ ಮೂಡಿಬಂದಿದೆ. ಈ ಕೃತಿಯು ಕುವೆಂಪುರವರ ಒಂಬತ್ತು ವರ್ಷಗಳ ಸತತ ಪ್ರಯತ್ನದ ಫಲವಾಗಿದೆ. ಇದನ್ನು ಅವರು ತಮ್ಮದೇ ಆದ ವಿಶಿಷ್ಟ ಛಂದಸ್ಸಿನಲ್ಲಿ ರೂಪುಗೊಳಿಸಿದ್ದಾರೆ.

ಕುವೆಂಪುರವರು ಇಪ್ಪತ್ತನೆಯ ಶತಮಾನ ಕಂಡ ದೈತ್ಯ ಪ್ರತಿಭೆ. ವರಕವಿ ಬೇಂದ್ರೆಯವರಿಂದ ಇವರು 'ಯುಗದ ಕವಿ ಜಗದ ಕವಿ' ಎನಿಸಿಕೊಂಡವರು. ವಿಶ್ವಮಾನವ ಸಂದೇಶ ನೀಡಿದವರು. ಕನ್ನಡ ಸಾಹಿತ್ಯ ಪ್ರಪಂಚದ ರಾಷ್ಟ್ರಕವಿಯಾದ ಇವರಿಗೆ ಕರ್ನಾಟಕ ಸರ್ಕಾರ ಕೊಡಮಾಡುವ 'ಕರ್ನಾಟಕ ರತ್ನ' ಪ್ರಶಸ್ತಿ ಹಾಗೂ 'ಪಂಪ' ಪ್ರಶಸ್ತಿಗಳು ಮೊದಲ ಬಾರಿಗೆ ದೊರೆತಿದೆ. ಇದಲ್ಲದೇ ಜ್ಞಾನಪೀಠ ಪ್ರಶಸ್ತಿಯನ್ನೂ, ಹಾಗು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನೂ ಮೊದಲ ಬಾರಿಗೆ ಕನ್ನಡಕ್ಕೆ ತಂದುಕೊಟ್ಟವರು ಇವರೇ.

ಕುವೆಂಪು ಅವರು ತಮ್ಮ ತಾಯಿಯ ತವರೂರಾದ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನ ಹಿರೇಕೊಡಿಗೆ ಎಂಬಲ್ಲಿ ೨೯ ಡಿಸೆಂಬರ್ ೧೯೦೪ರಲ್ಲಿ ಜನಿಸಿದರು. ತಂದೆ ವೆಂಕಟಪ್ಪಗೌಡ, ತಾಯಿ ಸೀತಮ್ಮ. ಅವರ ಬಾಲ್ಯ ತಮ್ಮ ತಂದೆಯ ಊರಾದ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಕುಪ್ಪಳಿಯಲ್ಲಿ ಕಳೆಯಿತು. ಬೆಳೆಯುವ ಸಿರಿ ಮೊಳಕೆಯಲ್ಲಿ ಎನ್ನುವಂತೆ ಕುವೆಂಪು ಬಾಲ್ಯದಲ್ಲಿಯೇ ಸಾಹಿತ್ಯದ ಸಹವಾಸ ಮಾಡಿದರು, ಮುಂದೆ ಅದೇ ಅವರನ್ನು ರಾಷ್ಟ್ರಕವಿಯನ್ನಾಗಿಸಿತು.

ಕುವೆಂಪು ಅವರ ಆರಂಭಿಕ ವಿದ್ಯಾಭ್ಯಾಸ ಕೂಲಿಮಠದಲ್ಲಿ ಆಯಿತು. ಮಾಧ್ಯಮಿಕ ಶಿಕ್ಷಣ ತೀರ್ಥಹಳ್ಳಿಯಲ್ಲಿ ನಡೆಯಿತು. ನಂತರ ಮೈಸೂರಿನ ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲಿ ತಮ್ಮ ಶಿಕ್ಷಣ ಮುಂದುವರಿಸಿದರು. ಮೈಸೂರಿನ ಮಹಾರಾಜ ಕಾಲೇಜಿನಿಂದ ಬಿ.ಎ. ಪದವಿಯನ್ನೂ, ಕನ್ನಡದಲ್ಲಿ ಎಂ.ಎ. ಪದವಿಯನ್ನೂ ಪಡೆದರು. ಟಿ.ಎಸ್.ವೆಂಕಣ್ಣಯ್ಯನವರು ಇವರಿಗೆ ಗುರುಗಳಾಗಿದ್ದರು. ಕುವೆಂಪುರವರ ಜೀವನದಲ್ಲಿ ಬಹುದೊಡ್ಡ ಪಾತ್ರ ಅವರ ಗುರುಗಳಾದ ಟಿ.ಎಸ್.ವೆಂಕಣ್ಣಯ್ಯನವರು.

ಗುರುವಿನ ಬಗ್ಗೆ ಅಪಾರ ಗೌರವ ಹೊಂದಿದ್ದ ಕುವೆಂಪುರವರು ತಮ್ಮ ಜ್ಞಾನಪೀಠ ಕೃತಿಯನ್ನು ವೆಂಕಣ್ಣಯ್ಯನವರಿಗೆ ಅರ್ಪಿಸಿದ್ದಾರೆ.

ಕುವೆಂಪು ಅವರು ಮೈಸೂರಿನ ಮಹಾರಾಜ ಕಾಲೇಜಿನ ಪ್ರಾಧ್ಯಾಪಕರೂ, ಪ್ರಾಂಶುಪಾಲರೂ ಆಗಿದ್ದರು. ನಂತರ ಕುಲಪತಿಗಳಾದರು. ತಮ್ಮ ಕಲ್ಪನೆಯ ಕೂಸಾದ ಮಾನಸ ಗಂಗೋತ್ರಿಯನ್ನು ಕಟ್ಟಿ ಬೆಳೆಸಿದರು. ವಿಶ್ವವಿದ್ಯಾನಿಲಯವನ್ನು ಅಧ್ಯಯನಾಂಗ, ಸಂಶೋಧನಾಂಗ ಹಾಗೂ ಪ್ರಸಾರಾಂಗ ಎಂಬುದಾಗಿ ವಿಭಾಗಿಸಿದರು. ಕಡಿಮೆ ಅವಧಿಯಲ್ಲಿ ಕನ್ನಡದಲ್ಲಿ ಪಠ್ಯಪುಸ್ತಕಗಳನ್ನು ಬರೆಸಿ ಕನ್ನಡ ಮಾಧ್ಯಮದ ತರಗತಿಗಳನ್ನು ಆರಂಭಿಸಿದರು.

ಕುವೆಂಪು ಅವರು ಹೇಮಾವತಿ ಅವರನ್ನು ವಿವಾಹವಾದರು. ಪೂರ್ಣಚಂದ್ರ ತೇಜಸ್ವಿ, ಕೋಕಿಲೋದಯ ಚೈತ್ರ, ಇಂದುಕಲಾ ಹಾಗೂ ತಾರಿಣಿ ಇವರ ಮಕ್ಕಳು. ಪೂರ್ಣಚಂದ್ರ ತೇಜಸ್ವಿ ಅವರು ಕನ್ನಡದ ಅಗ್ರಮಾನ್ಯ ಸಾಹಿತಿಗಳಲ್ಲಿ ಒಬ್ಬರಾಗಿದ್ದಾರೆ. ಕೋಕಿಲೋದಯ ಚೈತ್ರ ಅವರು ಇಂಜಿನಿಯರ್ ಆಗಿ ಆಸ್ಟ್ರೇಲಿಯಾದಲ್ಲಿ ನೆಲೆಸಿದ್ದಾರೆ. ಚಿದಾನಂದಗೌಡ ಅವರು ಕುವೆಂಪು ಇವರ ಅಳಿಯ.

ಕುವೆಂಪು ಅವರು೨೦ ನೆಯ ಶತಮಾನ ಕಂಡ ದೈತ್ಯ ಪ್ರತಿಭೆ. ಅವರೊಬ್ಬ ರಸಋಷಿ. ತಮ್ಮ ಮೇರು ಕೃತಿ 'ಶ್ರೀ ರಾಮಾಯಣ ದರ್ಶನಂ'ನಲ್ಲಿ ಈ ಕಾಲಕ್ಕೆ ಅಗತ್ಯವಾದ ದರ್ಶನವನ್ನು ನೀಡಿದ್ದಾರೆ. ಅವರ ಎರಡು ಬೃಹತ್ ಕಾದಂಬರಿಗಳಾದ 'ಕಾನೂರು ಹೆಗ್ಗಡತಿ' ಹಾಗೂ 'ಮಲೆಗಳಲ್ಲಿ ಮದುಮಗಳು' ಅವರನ್ನು ಜಗತ್ತಿನ ಮಹಾನ್ ಕಾದಂಬರಿಕಾರರ ಸಾಲಿನಲ್ಲಿ ನಿಲ್ಲುವಂತೆ ಮಾಡಿವೆ. ಅವರ ನಾಟಕಗಳಿಗೆ ವೈಚಾರಿಕತೆಯ ಸ್ಪರ್ಶವಿದೆ.

ಕರ್ನಾಟಕ ಸರ್ಕಾರವು ೨೦೧೫ರ ಡಿಸೆಂಬರ್‌ನಲ್ಲಿ ಕುವೆಂಪು ಜನ್ಮ ದಿನವಾದ ಡಿಸೆಂಬರ್ ೨೯ ಅನ್ನು "ವಿಶ್ವ ಮಾನವ" ದಿನವನ್ನಾಗಿ ಆಚರಿಸುವುದಾಗಿ ಆದೇಶ ಹೊರಡಿಸಿತು. ಈ ಮೂಲಕ ವಿಶ್ವಮಾನವ ಸಂದೇಶ ಸಾರಿದ ಕವಿಗೆ ಮತ್ತೊಂದು ಗೌರವ ಸಂದಾಯವಾದಂತಾಯಿತು.

'ಕನ್ನಡ ಎನೆ ಕುಣಿದಾಡುವುದೆನ್ನೆದೆ ಕನ್ನಡ ಎನೆ ಕಿವಿ ನಿಮಿರುವುದು' ಎಂದು ಹೇಳಿದ ರಾಷ್ಟ್ರಕವಿ ಹೆಸರನ್ನು ಕೇಳಿದರೆ ಪ್ರತಿ ಕನ್ನಡಿಗನ ಎದೆಯು ಹರುಷಗೊಳ್ಳುವುದು. ಏಕೆಂದರೆ ಕುವೆಂಪು ಎಂದರೆ ಕೇವಲ ಕನ್ನಡ ಸಾಹಿತ್ಯವಲ್ಲ, ಅವರು ಕನ್ನಡದ ಉಸಿರು.

ವಿಶ್ವಮಾನವ ಸಂದೇಶ ನೀಡಿದ ಮಹಾಕವಿ ಕುವೆಂಪು ಅವರ ಸರಳ ಜೀವನ ಸರ್ವರಿಗೂ ಮಾದರಿ. ಕುವೆಂಪು ಸಾಹಿತ್ಯ ಲೋಕಕ್ಕೆ ನೀಡಿರುವ ಕೊಡುಗೆ ಅಪಾರ. ಕಾದಂಬರಿಗಳು, ವಿಮರ್ಶೆ/ ಕಾವ್ಯ ಮೀಮಾಂಸೆ–ಕಾವ್ಯ, ಶಿಶುಸಾಹಿತ್ಯ ಹೀಗೆ ಎಲ್ಲ ಪ್ರಕಾರಗಳಲ್ಲೂ ಕುವೆಂಪು ಸಾಹಿತ್ಯ ಸೇವೆ ಕಾಣಬಹುದು.

ಬೊಮ್ಮನಹಳ್ಳಿ ಕಿಂದರಿ ಜೋಗಿ, ಕೊಳಲು, ಕಥನ ಕವನಗಳು, ಕಲಾ ಸುಂದರಿ, ನವಿಲು, ಪಕ್ಷಿಕಾಶಿ, ಶ್ರೀರಾಮಾಯಣ ದರ್ಶನಂ ಮಹಾಕಾವ್ಯವೂ ಸೇರಿ ೧೦೦ಕ್ಕೂ ಹೆಚ್ಚು ಕಾವ್ಯ ಕೃತಿಗಳು. ಜಲಗಾರ, ಯಮನಸೋಲು, ವಾಲ್ಮೀಕಿ ಭಾಗ್ಯ ಸ್ಮಶಾನ ಕುರುಕ್ಷೇತ್ರ, ಮಹಾರಾತ್ರಿ, ರಕ್ತಾಕ್ಷಿ, ಬಿರುಗಾಳಿ, ಬೆರಳ್‌ಗೆ ಕೊರಳ್, ಶೂದ್ರ ತಪಸ್ವಿ, ಇತರೆ ನಾಟಕಗಳು, ಕಾನೂರು ಹೆಗ್ಗಡತಿ, ಮಲೆಗಳಲ್ಲಿ ಮದುಮಗಳು ಪ್ರಸಿದ್ಧ ಕಾದಂಬರಿಗಳು.

**ಕುವೆಂಪುರವರಿಗೆ ಸಂದ ಗೌರವ ಪ್ರಶಸ್ತಿ, ಪುರಸ್ಕಾರಗಳು:** ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ-(ಶ್ರೀರಾಮಾಯಣ ದರ್ಶನಂ), ಮೈಸೂರು ವಿಶ್ವವಿದ್ಯಾನಿಲಯದಿಂದ ಗೌರವ ಡಿ.ಲಿಟ್., ಪದ್ಮಭೂಷಣ, ರಾಷ್ಟ್ರಕವಿ ಪುರಸ್ಕಾರ, ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಿ.ಲಿಟ್., ಜ್ಞಾನಪೀಠ ಪ್ರಶಸ್ತಿ (ಶ್ರೀ ರಾಮಾಯಣ ದರ್ಶನಂ), ಬೆಂಗಳೂರು ವಿಶ್ವವಿದ್ಯಾಲಯದಿಂದ ಗೌರವ ಡಿ.ಲಿಟ್., ಕೇಂದ್ರ ಸಾಹಿತ್ಯ ಅಕಾಡೆಮಿಯು ಫೆಲೋಷಿಪ್, ಪಂಪ ಪ್ರಶಸ್ತಿ, ಪದ್ಮವಿಭೂಷಣ, ಕರ್ನಾಟಕ ರತ್ನ, ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಸದಸ್ಯತ್ವ, ಕನ್ನಡ ವಿಶ್ವವಿದ್ಯಾಲಯ, ಹಂಪಿಯ ನಾಡೋಜ ಪ್ರಶಸ್ತಿ (ಮರಣೋತ್ತರ), ಇತ್ಯಾದಿಗಳು.

**ಕುವೆಂಪುರವರ ಹೆಸರಿನಲ್ಲಿರುವ ಸ್ಮಾರಕಗಳು**

* ಕುಪ್ಪಳಿಯಲ್ಲಿರುವ ಕುವೆಂಪು ಅವರು ಹುಟ್ಟಿದ ಮನೆ ವಸ್ತು ಸಂಗ್ರಹಾಲಯವಾಗಿದೆ.
* ಅಲ್ಲೇ ಇರುವ ಅವರ ಸಮಾಧಿ ಸ್ಥಳ ಒಂದು ವಿಶಿಷ್ಟ ಸ್ಮಾರಕವಾಗಿದೆ.
* ಶಿವಮೊಗ್ಗದ ಬಳಿ ಶಂಕರಘಟ್ಟದಲ್ಲಿರುವ ವಿಶ್ವವಿದ್ಯಾಲಯಕ್ಕೆ ಕುವೆಂಪು ಅವರ ಹೆಸರಿಡಲಾಗಿದೆ.
* ಮೈಸೂರು ವಿಶ್ವವಿದ್ಯಾನಿಲಯದಲ್ಲಿರುವ ಕನ್ನಡ ಅಧ್ಯಯನ ಸಂಸ್ಥೆಗೆ ಕುವೆಂಪು ಅವರ ಹೆಸರಿಡಲಾಗಿದೆ.
* ಅನುವಾದ ಕಾರ್ಯವನ್ನು ಪ್ರೋತ್ಸಾಹಿಸಲು ಬೆಂಗಳೂರಿನಲ್ಲಿ ಸ್ಥಾಪಿಸಲಾಗಿರುವ ಭಾಷಾ ಭಾರತಿ ಸಂಸ್ಥೆಗೆ ಕುವೆಂಪು ಅವರ ಹೆಸರಿಡಲಾಗಿದೆ.
* ಮೈಸೂರಿನ ಕುವೆಂಪು ನಗರದಲ್ಲಿರುವ ರಸ್ತೆಗಳಿಗೆ ಕುವೆಂಪು ಅವರ ಪರಿಕಲ್ಪನೆಗಳ, ಪಾತ್ರಗಳ ಹೆಸರುಗಳನ್ನು ಇಡಲಾಗಿದೆ.

**ಕುವೆಂಪು ಕುರಿತ ಕೃತಿಗಳು**

* ಮಗಳು ಕಂಡ ಕುವೆಂಪು- ಲೇ: ತಾರಿಣಿ ಚಿದಾನಂದ, ಪ್ರಕಾಶಕರು, ಪುಸ್ತಕ ಪ್ರಕಾಶನ
* ಅಣ್ಣನ ನೆನಪು- ಲೇ: ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಪ್ರಕಾಶಕರು, ಪುಸ್ತಕ ಪ್ರಕಾಶನ
* ಕುವೆಂಪು- ಲೇ: ದೇಜಗೌ

* ಯುಗದ ಕವಿ– ಲೇ: ಡಾ. ಕೆ.ಸಿ.ಶಿವಾರೆಡ್ಡಿ
* ಹೀಗಿದ್ದರು ಕುವೆಂಪು– ಲೇ: ಪ್ರಭುಶಂಕರ
* ಕುವೆಂಪು– ಲೇ: ಎಸ್.ವಿ.ಪರಮೇಶ್ವರಭಟ್ಟ
* ಶ್ರೀ ಕುವೆಂಪು ಸಂಭಾಷಣೆ ಮತ್ತು ಸಂದರ್ಶನ– ಲೇ: ಎಸ್.ವೃಷಭೇಂದ್ರಸ್ವಾಮಿ
* ತರಗತಿಗಳಲ್ಲಿ ಕುವೆಂಪು– ಲೇ: ಎಸ್.ವೃಷಭೇಂದ್ರಸ್ವಾಮಿ
* ಕುವೆಂಪು ಕಾವ್ಯಯಾನ– ಲೇ: ಬಿ.ಆರ್.ಸತ್ಯನಾರಾಯಣ
* ಕುವೆಂಪು ನುಡಿತೋರಣ– ಸಂ: ಬಿ.ಆರ್.ಸತ್ಯನಾರಾಯಣ

**ಕುವೆಂಪುರವರ ನಾಟಕ, ಚಲನಚಿತ್ರ, ಧಾರಾವಾಹಿಗಳು**

"ಬೆರಳ್ಗೆ ಕೊರಳ್" ನಾಟಕವು ಚಲನಚಿತ್ರವಾಗಿದೆ.

"ಕಾನೂರು ಹೆಗ್ಗಡತಿ" ಕಾದಂಬರಿ ಚಲನಚಿತ್ರವಾಗಿದೆ.

"ಮಲೆಗಳಲ್ಲಿ ಮದುಮಗಳು" ಕಾದಂಬರಿ ಧಾರಾವಾಹಿಯಾಗಿದೆ ಹಾಗೂ ೯ ಗಂಟೆಗಳ ಅವಧಿಯ ನಾಟಕವಾಗಿಯೂ ಮೈಸೂರಿನ ರಂಗಾಯಣದಲ್ಲಿ ಮತ್ತು ಬೆಂಗಳೂರಿನ ಕಲಾಗ್ರಾಮದಲ್ಲಿ ಪ್ರದರ್ಶನಗೊಂಡಿದೆ.

ಕುವೆಂಪು ಅವರು 'ಶ್ರೀ ರಾಮಾಯಣ ದರ್ಶನಂ' ರಚಿಸುವ ಮೂಲಕ ಆಧುನಿಕ ಕಾಲದಲ್ಲಿ ಮಹಾಕಾವ್ಯ ರಚನೆಗೆ ನಾಂದಿ ಹಾಡಿದರು. ಹಾಗೆಯೇ ಈ ಮಹಾಕಾವ್ಯದಲ್ಲಿ ಹೊಸ ಕಾಲಕ್ಕೆ ಅಗತ್ಯವೆನ್ನಿಸಿದ ದರ್ಶನವನ್ನು ಕಟ್ಟಿಕೊಟ್ಟಿದ್ದಾರೆ. ಕುವೆಂಪು ಅವರು ಮಂತ್ರಮಾಂಗಲ್ಯ ಎಂಬ ಸರಳ ವಿವಾಹ ಪದ್ಧತಿಯನ್ನು ರೂಢಿಗೆ ತಂದರು. ಕುವೆಂಪು ಅವರು ೧೧ ನವೆಂಬರ್ ೧೯೯೪ ರಂದು ಮೈಸೂರಿನಲ್ಲಿ ನಿಧನರಾದರು. ಕುವೆಂಪು ಅವರ ಹುಟ್ಟೂರಾದ ಕುಪ್ಪಳಿಯಲ್ಲಿ ಅವರ ಅಂತ್ಯಸಂಸ್ಕಾರವನ್ನು ನೆರವೇರಿಸಲಾಯಿತು. ಕುಪ್ಪಳಿಯಲ್ಲಿರುವ ಅವರ ಸಮಾಧಿ ಈಗ ಒಂದು ಸ್ಮಾರಕವಾಗಿದೆ.

**ಶ್ರೀ ಜಿ.ಎಸ್.ಶಿವರುದ್ರಪ್ಪ:** ಜಿ.ಎಸ್.ಎಸ್. ಎಂದೇ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪ್ರಸಿದ್ಧರಾದ ಖ್ಯಾತ ಸಾಹಿತ್ಯಗಾರರಾದ ಶ್ರೀ ಜಿ.ಎಸ್.ಶಿವರುದ್ರಪ್ಪನವರು ಹುಟ್ಟಿ, ಬೆಳೆದದ್ದು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನಲ್ಲಿ. ಇವರು ಶಿಕಾರಿಪುರದ ಹತ್ತಿರವಿರುವ ಈಸೂರು ಗ್ರಾಮದಲ್ಲಿ ಫೆಬ್ರುವರಿ ೭, ೧೯೨೬ರಂದು ಜನಿಸಿದರು. ಇವರ ತಂದೆ ಶಾಂತವೀರಪ್ಪ ಇಲ್ಲಿನ ಮಾಧ್ಯಮಿಕ ಶಾಲೆಯಲ್ಲಿ ಶಿಕ್ಷಕರಾಗಿದ್ದರು. ಇವರ ತಾಯಿ ವೀರಮ್ಮನವರು.

ತಂದೆಯಿಂದ ಸಾಹಿತ್ಯದ ಗೀಳು ಹತ್ತಿಸಿಕೊಂಡ ಶಿವರುದ್ರಪ್ಪನವರು ಹೊನ್ನಾಳಿ, ಕೋಟೆಹಾಳಗಳಲ್ಲಿ ಪ್ರಾಥಮಿಕ ಶಿಕ್ಷಣವನ್ನು, ರಾಮಗಿರಿ, ಬೆಲಗೂರುಗಳಲ್ಲಿ ಮಾಧ್ಯಮಿಕ ಶಿಕ್ಷಣವನ್ನು, ದಾವಣಗೆರೆ,

ತುಮಕೂರುಗಳಲ್ಲಿ ಪ್ರೌಢಶಾಲಾ, ಇಂಟರ್ ಮೀಡಿಯಟ್ ಶಿಕ್ಷಣವನ್ನೂ ಮುಗಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಮಹಾರಾಜ ಕಾಲೇಜಿನಲ್ಲಿ ಬಿ.ಎ. ಆನರ್ಸ್(೧೯೪೯) ಪದವಿ ಪಡೆದರು.

ಕೆಲಕಾಲ ದಾವಣಗೆರೆಯ ಡಿ.ಆರ್.ಎಮ್. ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿದ್ದು ನಂತರ ಎಂ.ಎ.(೧೯೫೩) ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದಿ ಮೂರು ಸುವರ್ಣ ಪದಕಗಳನ್ನು ಪಡೆದರು. ೧೯೫೫ರಲ್ಲಿ ಭಾರತ ಸರಕಾರದ ಸಂಶೋಧನಾ ಶಿಷ್ಯ ವೇತನದ ಸಹಾಯದಿಂದ ಕುವೆಂಪುರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿದರು. ಮೈಸೂರು ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ದೊರಕಿಸಿ ಕೊಟ್ಟ ಇವರ ಪ್ರೌಢ ಪ್ರಬಂಧ– ಸೌಂದರ್ಯ ಸಮೀಕ್ಷೆಯಾಗಿದೆ. ಕುವೆಂಪುರವರ ಮೆಚ್ಚಿನ ಶಿಷ್ಯರಾಗಿ ಅವರ ಬರವಣಿಗೆ ಮತ್ತು ಜೀವನದಿಂದ ಪ್ರಭಾವಿತರಾಗಿದ್ದರು.

ಹಸ್ತಪ್ರತಿಗಳ ಸಂಗ್ರಹಣೆ, ಅವುಗಳ ರಕ್ಷಣೆಗಳ ಬಗ್ಗೆ ವಿಶೇಷ ಕಾಳಜಿ ಹೊಂದಿದ್ದ ಶಿವರುದ್ರಪ್ಪನವರು ೧೯೭೧ರಲ್ಲಿ ಕನ್ನಡ ಅಧ್ಯಯನ ಕೇಂದ್ರದಲ್ಲಿ 'ಹಸ್ತಪ್ರತಿ ವಿಭಾಗ'ವನ್ನು ಪ್ರಾರಂಭಿಸಿದರು. ಕೇವಲ ೪ ವರ್ಷಗಳಲ್ಲಿ ೩೦೦೦ಕ್ಕೂ ಹೆಚ್ಚು ಓಲೆಗರಿಯ ಹಾಗೂ ೧೦೦೦ಕ್ಕೂ ಹೆಚ್ಚು ಕಾಗದದ ಹಸ್ತ ಪ್ರತಿಗಳ ಸಂಗ್ರಹಣೆಯಾಯಿತು. ತಾವು ಓದಿದ ಮೈಸೂರು ವಿಶ್ವವಿದ್ಯಾನಿಲಯದಲ್ಲೇ ೧೯೪೯ರಲ್ಲಿ ಕನ್ನಡ ಅಧ್ಯಾಪಕರಾಗಿ ವೃತ್ತಿಯನ್ನು ಆರಂಭಿಸಿದರು.

ಡಾ. ಜಿ.ಎಸ್.ಶಿವರುದ್ರಪ್ಪನವರು ಮೈಸೂರು ವಿಶ್ವವಿದ್ಯಾಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ, ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಹಾಗೂ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ. ೧೯೬೩ರ ನವೆಂಬರ್‌ನಿಂದ ೨ ವರ್ಷಗಳ ಕಾಲ ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯದ ಆಹ್ವಾನದ ಮೇರೆಗೆ ಇಲ್ಲಿಯ ಕನ್ನಡ ವಿಭಾಗದ ಉಪ ಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ ೧೯೬೬ರವರೆಗೆ ಸೇವೆ ಸಲ್ಲಿಸಿದರು. ೧೯೭೧ರ ನವೆಂಬರಿನಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರಾದ ಇವರು, ಮುಂದೆ ಅದು "ಕನ್ನಡ ಅಧ್ಯಯನ ಕೇಂದ್ರ"ವಾಗಿ ಪರಿವರ್ತಿತವಾದಾಗ, ಇದರ ನಿರ್ದೇಶಕರಾಗಿಯೂ ಕಾರ್ಯ ನಿರ್ವಹಿಸಿದರು.

ನಿವೃತ್ತಿಯ ನಂತರವೂ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಕುವೆಂಪು ಪೀಠದ ಸಂದರ್ಶಕ ಪ್ರಾಧ್ಯಾಪಕರಾಗಿಯೂ ಇವರು ಗಣನೀಯ ಸೇವೆ ಸಲ್ಲಿಸಿರುತ್ತಾರೆ. ಕೇಂದ್ರ ಸಾಹಿತ್ಯ ಅಕಾಡೆಮಿ ಸದಸ್ಯರಾಗಿ, ರಾಜ್ಯ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿಯೂ ದುಡಿದಿದ್ದಾರೆ. ದೆಹಲಿಯ ರಾಷ್ಟ್ರೀಯ ಕವಿ ಸಮ್ಮೇಳನ, ತುಮಕೂರಿನ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷರಾಗಿ, ಮದರಾಸಿನ ಕನ್ನಡ ಸಮ್ಮೇಳನದ ಅಧ್ಯಕ್ಷರಾಗಿ, ೧೯೯೨ರಲ್ಲಿ ದಾವಣಗೆರೆಯಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿಯೂ ಗೌರವಿಸಲ್ಪಟ್ಟಿದ್ದಾರೆ.

ಜಿ.ಎಸ್.ಶಿವರುದ್ರಪ್ಪನವರು ೨೩ ಡಿಸೆಂಬರ್ ೨೦೧೩ ರಂದು ತಮ್ಮ ಬನಶಂಕರಿಯ ನಿವಾಸದಲ್ಲಿ ನಿಧನರಾದರು. ಜಿ.ಎಸ್.ಶಿವರುದ್ರಪ್ಪನವರ ಆಣತಿಯಂತೆಯೇ ಅವರ ದೇಹವನ್ನು ಮರಣಾನಂತರ ಮಣ್ಣು ಮಾಡದೇ ಸುಡಲಾಯಿತು. ಬೆಂಗಳೂರು ವಿಶ್ವವಿದ್ಯಾಲಯದ ಸಮೀಪವಿರುವ ಕಲಾಗ್ರಾಮದಲ್ಲಿ ಇವರ ಅಂತ್ಯ ಸಂಸ್ಕಾರದ ವಿಧಿ ವಿಧಾನವನ್ನು ಸಕಲ ಸರ್ಕಾರಿ ಗೌರವ ಮರ್ಯಾದೆಯೊಂದಿಗೆ ದಿ. ೨೪ ಡಿಸೆಂಬರ್ ೨೦೧೩ರಂದು ನೆರವೇರಿಸಲಾಯಿತು.

**ಡಾ. ಯು.ಆರ್.ಅನಂತಮೂರ್ತಿ:** ಡಾ. ಉಡುಪಿ ರಾಜಗೋಪಾಲಾಚಾರ್ಯ ಅನಂತಮೂರ್ತಿ ಅವರು ಹುಟ್ಟಿದ್ದು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ 'ಮೇಳಿಗೆ' ಎಂಬ ಪುಟ್ಟ ಹಳ್ಳಿಯಲ್ಲಿ. ೧೯೩೨ರ ಡಿಸೆಂಬರ್ ೨೧ರಂದು. ಇವರ ತಂದೆ ಉಡುಪಿ ರಾಜಗೋಪಾಲಾಚಾರ್ಯ ರವರು. ಇವರ ತಾಯಿ ಸತ್ಯಮ್ಮ(ಸತ್ಯಭಾಮ)ರವರು.

ಡಾ. ಅನಂತಮೂರ್ತಿಯವರು ಕನ್ನಡದ ಪ್ರಮುಖ ಸಾಹಿತಿಗಳಲ್ಲೊಬ್ಬರು. ಅವರು ಚಿಂತಕರೂ, ವಿಮರ್ಶಕರೂ ಆಗಿ ಪ್ರಸಿದ್ಧರಾಗಿದ್ದವರು. ಇಂಗ್ಲಿಷ್ ಪ್ರಾಧ್ಯಾಪಕರಾಗಿ ವೃತ್ತಿಜೀವನ ಪ್ರಾರಂಭಿಸಿದ ಇವರು ಅನಂತರ ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ಅನೇಕ ಮುಖ್ಯ ಹುದ್ದೆಗಳನ್ನು ನಿರ್ವಹಿಸಿದರು. ತಮ್ಮ ಸಮಗ್ರ ಸಾಹಿತ್ಯಕ್ಕಾಗಿ ೧೯೯೪ರಲ್ಲಿ ಅತ್ಯುತ್ತಮ ಜ್ಞಾನಪೀಠ ಪ್ರಶಸ್ತಿ ಪಡೆದರು.

ದೂರ್ವಾಸಪುರದ ಸಾಂಪ್ರದಾಯಿಕ ಸಂಸ್ಕೃತ ಪಾಠಶಾಲೆಯಲ್ಲಿ ವಿದ್ಯಾಭ್ಯಾಸವನ್ನು ಆರಂಭಿಸಿದ ಅನಂತಮೂರ್ತಿಯವರ ನಂತರದ ವಿದ್ಯಾಭ್ಯಾಸ ತೀರ್ಥಹಳ್ಳಿ, ಮೈಸೂರುಗಳಲ್ಲಿ ಮುಂದುವರೆಯಿತು. ಮೈಸೂರು ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಸಾಹಿತ್ಯದಲ್ಲಿ ಎಂ.ಎ. ಪದವಿ ಪಡೆದ ಇವರು ಹೆಚ್ಚಿನ ವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ಹೋದರು. ಕಾಮನ್ವೆಲ್ತ್ ವಿದ್ಯಾರ್ಥಿ ವೇತನ ಪಡೆದ ಇವರು ಬರ್ಮಿಂಗ್ಹ್ಯಾಮ್ ವಿಶ್ವವಿದ್ಯಾನಿಲಯದಿಂದ ಇಂಗ್ಲಿಷ್ ಮತ್ತು ತೌಲನಿಕ ಸಾಹಿತ್ಯ ಎಂಬ ವಿಷಯದಲ್ಲಿ ೧೯೬೬ರಲ್ಲಿ ಪಿಎಚ್.ಡಿ. ಪಡೆದರು. "ರುಜುವಾತು" ಪತ್ರಿಕೆಯನ್ನು ಪ್ರಾರಂಭಿಸಿದರು.

೧೯೭೦ರಿಂದ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್ ವಿಭಾಗದಲ್ಲಿ ಉಪನ್ಯಾಸಕರಾಗಿ, ಪ್ರಾಧ್ಯಾಪಕರಾಗಿ ಕೆಲಸ ಮಾಡಿದ ಅನಂತಮೂರ್ತಿಯವರು, ೧೯೮೭ರಲ್ಲಿ ಕೇರಳದ ಕೋಟ್ಟಯಂನ ಮಹಾತ್ಮಾಗಾಂಧಿ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದರು. ೧೯೯೨-೯೩ರ ಅವಧಿಯಲ್ಲಿ ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾದ ಅಧ್ಯಕ್ಷರಾಗಿದ್ದರು. ೧೯೯೩ರಲ್ಲಿ ಅವರು ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಆಯ್ಕೆಯಾದರು. ಗೋಕಾಕರ ಅನಂತರ ಈ ಸಂಸ್ಥೆಯ ಅಧ್ಯಕ್ಷರಾದ ಎರಡನೆಯ ಕನ್ನಡಿಗರು ಇವರು.

ಡಾ. ಅನಂತಮೂರ್ತಿಯವರು ದೇಶವಿದೇಶಗಳ ಹಲವು ವಿಶ್ವವಿದ್ಯಾಲಯಗಳಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿದ್ದರು. ಜವಾಹರಲಾಲ್ ನೆಹರೂ ವಿ.ವಿ., ಜರ್ಮನಿಯ ತೂಬಿಂಗೆನ್ ವಿ.ವಿ.,

ಅಮೇರಿಕ ದೇಶದ ಐಯೊವಾ ವಿ.ವಿ., ಟಫಟ್ಸ್ ವಿ.ವಿ., ಕೊಲ್ಲಾಪುರದ ಶಿವಾಜಿ ವಿ.ವಿ.ಗಳಲ್ಲಿ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸಿದ್ದರು.

ಬರಹಗಾರರಾಗಿ, ಭಾಷಣಕಾರರಾಗಿ ಅನಂತಮೂರ್ತಿಯವರು ದೇಶದ ಒಳಗೆ ಮತ್ತು ಹೊರಗೆ ಹಲವಾರು ಗೋಷ್ಠಿಗಳಲ್ಲಿ ಭಾಗವಹಿಸಿದ್ದಾರೆ, ಉಪನ್ಯಾಸ ನೀಡಿದ್ದಾರೆ. ೧೯೮೦ರಲ್ಲಿ ಸೋವಿಯತ್ ರಷ್ಯಾ, ಹಂಗೇರಿ, ಪಶ್ಚಿಮ ಜರ್ಮನಿ ಮತ್ತು ಫ್ರಾನ್ಸ್ ದೇಶಗಳಿಗೆ ಭೇಟಿ ನೀಡಿದ ಭಾರತೀಯ ಲೇಖಕರ ಬಳಗದ ಸದಸ್ಯರಾಗಿದ್ದರು. ಮಾರ್ಕ್ಸ್ವಾದದಿಂದ ತುಂಬ ಪ್ರಭಾವಿತರಾಗಿದ್ದ ಇವರು ತಮ್ಮ ಹಲವಾರು ಅಭಿಪ್ರಾಯಗಳನ್ನು ಪರೀಕ್ಷಿಸಿ ನೋಡಲು ಈ ಭೇಟಿ ನೆರವಾಯಿತು. ಸೋವಿಯತ್ ಪತ್ರಿಕೆಯೊಂದರ ಸಲಹಾ ಸಮಿತಿಯ ಸದಸ್ಯರಾಗಿ ೧೯೮೯ರಲ್ಲಿ ಮಾಸ್ಕೋಗೆ ಭೇಟಿ ನೀಡಿದರು. ೧೯೯೩ರಲ್ಲಿ ಚೀನಾ ದೇಶಕ್ಕೆ ಭೇಟಿ ನೀಡಿದ ಭಾರತೀಯ ಬರಹಗಾರರ ಬಳಗಕ್ಕೆ ಇವರು ನಾಯಕರಾಗಿದ್ದರು. ಇವಲ್ಲದೇ ದೇಶವಿದೇಶಗಳ ಹಲವಾರು ವೇದಿಕೆಗಳಿಂದ ನೂರಕ್ಕೂ ಹೆಚ್ಚು ಉಪನ್ಯಾಸ ಇವರು ನೀಡಿದ್ದಾರೆ.

ಇಷ್ಟೇ ಅಲ್ಲದೇ ಅನಂತಮೂರ್ತಿಯವರು ಕನ್ನಡದ ಹಲವಾರು ಸಾಹಿತ್ಯ ದಿಗ್ಗಜರನ್ನು ರೇಡಿಯೋ ಮತ್ತು ದೂರದರ್ಶನಗಳಲ್ಲಿ ಸಂದರ್ಶಿಸಿದ್ದಾರೆ. ಮೈಸೂರು ಆಕಾಶವಾಣಿಗಾಗಿ ಗೋಪಾಲಕೃಷ್ಣ ಅಡಿಗ, ಶಿವರಾಮ ಕಾರಂತ, ಆರ್.ಕೆ.ನಾರಾಯಣ್, ಆರ್.ಕೆ.ಲಕ್ಷ್ಮಣ್ ಮತ್ತು ಜನರಲ್ ಕಾರಿಯಪ್ಪ ಅವರನ್ನು ಸಂದರ್ಶಿಸಿದ್ದಾರೆ. ಶಿವರಾಮ ಕಾರಂತ, ಗೋಪಾಲಕೃಷ್ಣ ಅಡಿಗ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರುಗಳನ್ನು ಕುರಿತು ದೂರದರ್ಶನವು ನಿರ್ಮಿಸಿದ ಸಾಕ್ಷ್ಯ ಚಿತ್ರಗಳಲ್ಲಿ ಸಂದರ್ಶಕ ರಾಗಿ ಇವರು ಭಾಗವಹಿಸಿದ್ದಾರೆ.

ಎಲ್ಲರಿಗೂ ಅವರವರ ಮಾತೃಭಾಷೆಯಲ್ಲೇ ಪ್ರಾಥಮಿಕ ಶಿಕ್ಷಣ ಅತ್ಯಗತ್ಯ ಎಂದು ಬಲವಾಗಿ ಪ್ರತಿಪಾದಿಸುವ ಅನಂತಮೂರ್ತಿರವರು ವಿದೇಶಗಳ ಹಲವಾರು ಭಾಷೆ ತಿಳಿದಿರುವ ನಮಗೆ ನಮ್ಮ ಅಕ್ಕಪಕ್ಕದ ನಾಡಿನ ಭಾಷೆಗಳು ಗೊತ್ತೇ ಇಲ್ಲದ್ದರ ಬಗ್ಗೆ ಆಶ್ಚರ್ಯ ವ್ಯಕ್ತಪಡಿಸುತ್ತಾರೆ. ಜಗತ್ತಿನ ಬೇರೆ ಬೇರೆ ಭಾಷೆಗಳ ಹಲವು ಮಹತ್ವದ ಕೃತಿಗಳು ಇಂಗ್ಲಿಷಿಗೆ ಸಮರ್ಥವಾಗಿ ಅನುವಾದಗೊಳ್ಳಲು ಸಾಧ್ಯವಿಲ್ಲ ಎನ್ನುವುದು ಅವರ ಅಭಿಪ್ರಾಯವಾಗಿದೆ. ಕನ್ನಡ ಸಾಹಿತಿಯೂ ಮತ್ತು ಭಾರತೀಯ ಸಾಹಿತ್ಯದ ವಿಮರ್ಶಕರೂ ಆದ ಅನಂತಮೂರ್ತಿ ತಮ್ಮನ್ನು ಕನ್ನಡ ಸಂಸ್ಕೃತಿಯ ಕೂಸು ಎಂದು ಕರೆದುಕೊಳ್ಳುತ್ತಾರೆ.

೧೯೫೫ರಲ್ಲಿ "ಎಂದೆಂದೂ ಮುಗಿಯದ ಕತೆ" ಕಥಾ ಸಂಕಲನದಿಂದ ಅನಂತಮೂರ್ತಿಯವರ ಸಾಹಿತ್ಯ ಕೃಷಿ ಆರಂಭವಾಯಿತು. ಮೌನಿ, ಪ್ರಶ್ನೆ, ಆಕಾಶ ಮತ್ತು ಬೆಕ್ಕು ಇವರ ಕಥಾಸಂಕಲನಗಳು. ಈ ಎಲ್ಲ ಕತೆಗಳನ್ನೂ ಒಳಗೊಂಡ "ಮೂರು ದಶಕದ ಕಥೆಗಳು" ೧೯೮೯ರಲ್ಲಿ ಹೊರಬಂದಿದೆ.

ಹಿರಿಯ ಸಮಾಜವಾದಿ ರಾಜಕಾರಣಿ ಜೆ.ಎಚ್. ಪಟೇಲರ ಸಮೀಪವರ್ತಿಯಾಗಿದ್ದ ಅನಂತಮೂರ್ತಿ ಅವರು ಶಾಂತವೇರಿ ಗೋಪಾಲ ಗೌಡ ಮತ್ತು ಲೋಹಿಯಾ ಅವರ ಪ್ರಭಾವಕ್ಕೆ ಒಳಗಾದವರು. ಇವರ ಬರಹದಲ್ಲಿ ಈ ಇಬ್ಬರ ಪ್ರಭಾವಗಳು ಎದ್ದು ಕಾಣುತ್ತವೆ.

೧೯೬೫ರಲ್ಲಿ ಇವರ ಮೊದಲ ಕಾದಂಬರಿ "ಸಂಸ್ಕಾರ" ಪ್ರಕಟವಾಯಿತು. ಪ್ರಕಟವಾದಾಗ ಮತ್ತು ಚಲನಚಿತ್ರವಾದಾಗ ತುಂಬ ವಿವಾದವನ್ನುಂಟು ಮಾಡಿದ ಈ ಕಾದಂಬರಿ ಹಲವಾರು ದೇಶೀಯ ಮತ್ತು ವಿದೇಶಿಯ ಭಾಷೆಗಳಿಗೆ ಅನುವಾದಗೊಂಡಿದೆ. ಭಾರತೀಪುರ, ಅವಸ್ಥೆ ಮತ್ತು ಭವ ಇವರ ಇತರ ಕಾದಂಬರಿಗಳು. "ಆವಾಹನೆ" ಎಂಬ ಒಂದು ನಾಟಕವನ್ನು ಬರೆದಿರುವ ಅನಂತಮೂರ್ತಿ "೧೫ ಪದ್ಯಗಳು", "ಮಿಥುನ" ಮತ್ತು "ಅಜ್ಜನ ಹೆಗಲ ಸುಕ್ಕುಗಳು" ಎಂಬ ಮೂರು ಕವನ ಸಂಕಲನಗಳನ್ನೂ ಪ್ರಕಟಿಸಿದ್ದಾರೆ. ಪ್ರಜ್ಞೆ ಮತ್ತು ಪರಿಸರ, ಪೂರ್ವಾಪರ, ಸಮಕ್ಷಮ ಇವು ಇವರ ಪ್ರಬಂಧ ಸಂಕಲನಗಳು. ಇಷ್ಟಲ್ಲದೇ ಇಂಗ್ಲಿಷಿನಲ್ಲಿ ಇವರು ಬರೆದಿರುವ ಹಲವಾರು ಪ್ರಬಂಧಗಳು ದೇಶ-ವಿದೇಶಗಳ ಸಾಹಿತ್ಯಕ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ೧೯೮೧ರಲ್ಲಿ ರಾಜಕೀಯ, ಸಾಂಸ್ಕೃತಿಕ ಮತ್ತು ಸಾಹಿತ್ಯಕ ವಿಷಯಗಳಿಗೆಂದು "ರುಜುವಾತು" ಎಂಬ ತ್ರೈಮಾಸಿಕ ಪತ್ರಿಕೆಯನ್ನು ಇವರು ಪ್ರಾರಂಭಿಸಿದರು.

ಡಾ. ಅನಂತಮೂರ್ತಿಯವರ ಹಲವು ಕತೆಗಳು ಕನ್ನಡ ಸಾಹಿತ್ಯ ವಿಮರ್ಶಕರ ಗಮನ ಸೆಳೆದಿವೆ ಮತ್ತು ಚರ್ಚೆಗೂ ವಿವಾದಕ್ಕೂ ಒಳಗಾಗಿವೆ. ಸೂರ್ಯ ಕುದುರೆ, ನವಿಲುಗಳು, ಬರ, ಘಟಶ್ರಾದ್ಧ, ತಾಯಿ, ಹುಲಿಯ ಹೆಂಗರಳು ಈ ಸಾಲಿಗೆ ಸೇರುತ್ತವೆ. ಡಾ.ಅನಂತಮೂರ್ತಿಯವರ ಸಂಸ್ಕಾರ, ಅವಸ್ಥೆ ಕಾದಂಬರಿಗಳನ್ನು ಮತ್ತು ಬರ, ಘಟಶ್ರಾದ್ಧ ಕತೆಗಳನ್ನು ಆಧರಿಸಿ ಚಲನಚಿತ್ರಗಳು ನಿರ್ಮಾಣವಾಗಿವೆ. ಇವೆಲ್ಲವೂ ಮಹತ್ವದ ಚಿತ್ರಗಳಾಗಿದ್ದು, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರಶಸ್ತಿ ಪಡೆದಿವೆ. ಘಟಶ್ರಾದ್ಧ ಕತೆಯನ್ನು ಆಧರಿಸಿ "ದೀಕ್ಷಾ" ಎಂಬ ಹಿಂದಿ ಚಲನಚಿತ್ರವೂ ತಯಾರಾಗಿದೆ. ಸಂಸ್ಕಾರ ಮತ್ತು ಘಟಶ್ರಾದ್ಧ ಚಲನಚಿತ್ರಗಳು ಭಾರತ ಸರಕಾರದಿಂದ 'ಸ್ವರ್ಣಕಮಲ' ಪ್ರಶಸ್ತಿಯನ್ನು ಪಡೆದಿವೆ.

ಸಂಸ್ಕಾರ, ಘಟಶ್ರಾದ್ಧ ಮತ್ತು ಬರ ಚಿತ್ರಗಳಿಗೆ ಅತ್ಯುತ್ತಮ ಕತೆಗಾಗಿ ಅನಂತಮೂರ್ತಿಯವರಿಗೆ ಪ್ರಶಸ್ತಿ ಸಿಕ್ಕಿದೆ. ೧೯೮೩ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೧೯೮೪ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ೧೯೯೨ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೧೯೯೪ರಲ್ಲಿ ಮಾಸ್ತಿ ಪ್ರಶಸ್ತಿಗಳು ಅನಂತಮೂರ್ತಿಯವರಿಗೆ ಬಂದ ಮನ್ನಣೆಗಳಲ್ಲಿ ಕೆಲವು. ಕನ್ನಡಕ್ಕೆ ಆರನೆಯ ಜ್ಞಾನಪೀಠ ಪ್ರಶಸ್ತಿ ೧೯೯೪ರಲ್ಲಿ ಬಂದಾಗ, ಕನ್ನಡ ಸಾಹಿತ್ಯ ಲೋಕದೆಡೆಗೆ ಮತ್ತೊಮ್ಮೆ ಇಡೀ ದೇಶದ ಗಮನ ಸೆಳೆಯಿತು.

ಡಾ. ಅನಂತಮೂರ್ತಿಯವರು ಮೂತ್ರಪಿಂಡದ ಕಾಯಿಲೆಯಿಂದ ನರಳುತ್ತಿದ್ದರು. ಜೊತೆಗೆ ಸಕ್ಕರೆ ಕಾಯಿಲೆ ಕಾಡುತ್ತಿತ್ತು. ಆರೋಗ್ಯ ತೀವ್ರ ಹದಗೆಟ್ಟ ಹಿನ್ನೆಲೆಯಲ್ಲಿ ಬೆಂಗಳೂರಿನ 'ಮಣಿಪಾಲ್ ಆಸ್ಪತ್ರೆ'ಯಲ್ಲಿ ಕೆಲದಿನಗಳ ಕಾಲ ಚಿಕಿತ್ಸೆ ಪಡೆದು ಗುಣಹೊಂದದೆ ಮೂತ್ರಪಿಂಡ ವೈಫಲ್ಯ ಹಾಗು ಲಘು ಹೃದಯಾಘಾತದಿಂದ ೨೨ ಆಗಸ್ಟ್ ೨೦೧೪ರಂದು ಆಸ್ಪತ್ರೆಯಲ್ಲಿ ಕೊನೆಯುಸಿರೆಳೆದರು. ಆಗ ಇವರಿಗೆ ೮೧ ವರ್ಷವಾಗಿತ್ತು. ಬೆಂಗಳೂರಿನ ಡಾಲರ್ಸ್ ಕಾಲೋನಿಯಲ್ಲಿ ವಾಸಿಸುತ್ತಿದ್ದ ಮೂರ್ತಿಯವರ ಅಂತಿಮ ಸಂಸ್ಕಾರ ಬೆಂಗಳೂರಿನ 'ಜ್ಞಾನಭಾರತಿ ಕಲಾಗ್ರಾಮ'ದಲ್ಲಿ ಸಕಲ ಸರ್ಕಾರಿ ಗೌರವದೊಂದಿಗೆ ಜರುಗಿತು.

**ನಾ. ಡಿಸೋಜ:** ನಾರ್‌ಬರ್ಟ್ ಡಿಸೋಜರವರು ಶಿವಮೊಗ್ಗ ಜಿಲ್ಲೆಯ ಸಾಗರದಲ್ಲಿ ೧೯೩೭ರ ಜೂನ್ ೬ರಂದು ಜನಿಸಿದರು. ಇವರ ತಂದೆ ಪ್ರಾಥಮಿಕ ಶಾಲಾ ಮುಖ್ಯೋಪಾಧ್ಯಾಯರಾದ ಎಫ್.ಪಿ. ಡಿಸೋಜರವರು, ತಾಯಿ ರೂಪೀನಾ ಡಿಸೋಜ. ತಂದೆ ಶಾಲಾ ಮಕ್ಕಳಿಗೆ ಕಲಿಸಲು ಬರೆದುಕೊಂಡಿದ್ದ ಪುಸ್ತಕಗಳಲ್ಲಿನ ಪದ್ಯಗಳನ್ನು ಕಲಿಯುವುದರ ಮೂಲಕ ಡಿಸೋಜ ಅವರ ಸಾಹಿತ್ಯಾಸಕ್ತಿ ಮೊಳಕೆಯೊಡೆಯತೊಡಗಿತ್ತು. ಜೊತೆಗೆ ತಾಯಿ ಹೇಳುತ್ತಿದ್ದ ಜನಪದ ಗೀತೆಗಳು, ಕಥೆಗಳು ಡಿಸೋಜರ ಮನಸ್ಸಿನ ಮೇಲೆ ಮೋಡಿ ಮಾಡತೊಡಗಿದ್ದವು. ಹೈಸ್ಕೂಲಿನಲ್ಲಿದ್ದಾಗಲೇ ಇವರ ಸಾಹಿತ್ಯಾಸಕ್ತಿಯನ್ನು ಗಮನಿಸಿ, ಬೆಳೆಸಿದವರು ಗೊರೂರು ನರಸಿಂಹಾಚಾರ್ಯರು. ಶಿವಮೊಗ್ಗದಲ್ಲಿ ಇಂಟರ್‌ಮೀಡಿಯೇಟ್ ಕಾಲೇಜು(ಈಗಿನ ಸಹ್ಯಾದ್ರಿ ಕಾಲೇಜು) ಸೇರಿದರಾದರೂ ಇವರು ಪ್ರತಿಭೆ ತೋರಿಸಿದ್ದು ಕನ್ನಡ ವಿಷಯದಲ್ಲಿ ಉತ್ತಮ ಅಂಕಗಳನ್ನು ಪಡೆಯುವುದರಲ್ಲಿ. ಮೈಸೂರಿಗೆ ಹೋಗಿ ಕಾಲಕಳೆದದ್ದೆಲ್ಲಾ ಸಾರ್ವಜನಿಕ ಪುಸ್ತಕ ಭಂಡಾರಗಳಲ್ಲಿ. ಮಾಸ್ತಿ, ಕುವೆಂಪು, ಅ.ನ.ಕೃ., ಕಾರಂತರು, ಗೋಕಾಕ್, ಗೊರೂರು ಇವರುಗಳಲ್ಲದೇ ಪರ್ಲ್‌ಬಕ್, ಸಾಮರ್ ಸೆಟ್ ಮಾಮ್, ಡಿಕನ್ಸ್ ಮುಂತಾದವರ ಕೃತಿಗಳನ್ನು ವ್ಯಾಪಕವಾಗಿ ಅಧ್ಯಯನ ಮಾಡಿದರು. ಡಿಸೋಜ ಅವರು ಬೆರಳಚ್ಚು ಮತ್ತು ಶೀಘ್ರಲಿಪಿ ಪರೀಕ್ಷೆಗಳಲ್ಲಿ ಯಶಸ್ವಿಯಾಗಿದ್ದು ಅವರ ವೃತ್ತಿ ಬದುಕಿಗೊಂದು ಆಸರೆಯಾಯಿತು. ನಾ. ಡಿಸೋಜರವರು ಉದ್ಯೋಗಕ್ಕೆ ಸೇರಿದ್ದು ಲೋಕೋಪಯೋಗಿ ಇಲಾಖೆಯಲ್ಲಿ ಟೈಪಿಸ್ಟ್ ಮತ್ತು ದ್ವಿತೀಯ ದರ್ಜೆ ಗುಮಾಸ್ತನಾಗಿ. ನಂತರ ಪ್ರಥಮ ದರ್ಜೆ ಗುಮಾಸ್ತರಾಗಿ ಶರಾವತಿ ಯೋಜನೆ ಕಾರ್ಗಲ್, ಮಾಸ್ತಿಕಟ್ಟೆ, ತೀರ್ಥಹಳ್ಳಿ ಮುಂತಾದೆಡೆಗಳಲ್ಲಿ ಕಾರ್ಯನಿರ್ವಹಿಸಿ ೧೯೯೫ರಲ್ಲಿ ನಿವೃತ್ತಿ ಹೊಂದಿದರು

ನಾ. ಡಿಸೋಜ(ಜೂನ್ ೬, ೧೯೩೭) ಪರಿಸರ ಕಾಳಜಿಯುಳ್ಳ ಮಹತ್ವದ ಕಥೆಗಾರರೆನಿಸಿದ್ದು ಕನ್ನಡ ಸಾಹಿತ್ಯ ಲೋಕದಲ್ಲಿ ಮಕ್ಕಳ ಸಾಹಿತ್ಯವನ್ನು ಒಳಗೊಂಡಂತೆ ಅಪಾರವಾದ ಕೃಷಿ ನಡೆಸಿದ್ದಾರೆ. ತಮ್ಮೆಲ್ಲ ಕಥೆ, ಕಾದಂಬರಿಗಳ ಮೂಲಕ ಪರಿಸರ ಸಂರಕ್ಷಣೆಯ ಬಗ್ಗೆ ಎಚ್ಚರಿಸುತ್ತ ಬಂದಿದ್ದು,

ಪರಿಸರ ನಾಶವೇ ಮಾನವ ಜನಾಂಗದ ವಿನಾಶದ ಮೂಲ, ಪರಿಸರವನ್ನುಳಿಸಿಕೊಂಡು ಬಾಳಿದರೆ ಮಾನವನ ಬಾಳೂ ಸಂತುಷ್ಟ ಎಂಬುದನ್ನು ಮತ್ತೆ ಮತ್ತೆ ಪ್ರಸ್ತಾಪಿಸುತ್ತಾರೆ, ಸುಮಾರು ಐದು ದಶಕಗಳಿಂದಲೂ ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಕೃತಿ ರಚಿಸುತ್ತ ಬಂದಿರುವ ನಾರ್‌ಬರ್ಟ್ ಡಿಸೋಜರವರು.

ನಾ. ಡಿಸೋಜ ಮೊದಲಿಗೆ 'ಪ್ರಪಂಚ' ಪತ್ರಿಕೆಗೆ ಕಥೆಗಳನ್ನು ಬರೆಯತೊಡಗಿದರು. ನಂತರ ಎಲ್ಲ ಪ್ರಮುಖ ಪತ್ರಿಕೆಗಳಲ್ಲೂ ಇವರ ಕಥೆಗಳು ಪ್ರಕಟವಾಗತೊಡಗಿದವು. ಡಿಸೋಜರ ಮೊದಲ ಕಾದಂಬರಿ ಬಂಜೆ ಬೆಂಕಿ ಪ್ರಕಟವಾದದ್ದು ೧೯೬೪ರಲ್ಲಿ. ನಂತರ ಮಂಜಿನ ಕಾನು, ಈ ನೆಲ ಈ ಜಲ, ಕೆಂಪು ತ್ರಿಕೋನ, ನೆಲೆ, ಮಾನವ  ಹೀಗೆ ಇವರು ಬರೆದಿರುವ ಕಾದಂಬರಿಗಳು ಸುಮಾರು ೪೦. ಪರಿಸರ ನಾಶ, ಕ್ರೈಸ್ತ ಜನಾಂಗದ ಹಿನ್ನೆಲೆ, ಭ್ರಷ್ಟಾಚಾರದ ವಸ್ತು, ಹಿಂದುಳಿದ ಬುಡಕಟ್ಟು ಜನಾಂಗದ ಚಿತ್ರಣ ಹೀಗೆ ಹಲವು ಹತ್ತು ವಿಷಯಗಳನ್ನೊಳಗೊಂಡ ಅವರ ಕಾದಂಬರಿಗಳು ಓದುಗರ ಮನಸೂರೆಗೊಂಡಿವೆ. ಇವರು ಪತ್ರಿಕೆಗಳಿಗೆ ಬರೆದ ಸಣ್ಣ ಕಥೆಗಳ ೯ ಸಂಕಲನಗಳಲ್ಲಿ ಸಂಕಲಿತಗೊಂಡಿದ್ದು, ಸಮಗ್ರ ಕಥೆಗಳು ೨ ಸಂಪುಟಗಳಲ್ಲಿ ಪ್ರಕಟವಾಗಿವೆ.

ನಾಡಿಗೆ ಬೆಳಕನ್ನು ನೀಡಲು ಪ್ರಾರಂಭಿಸಿದ ವಿದ್ಯುಚ್ಛಕ್ತಿ ಯೋಜನೆಯ ಅಡಿಯಲ್ಲಿ ಬಹಳಷ್ಟು ಜನರ ಬದುಕುಗಳು ಕತ್ತಲೆಯಲ್ಲಿ ಕರಗಿ ಹೋಗುವ ವಸ್ತುವನ್ನಾಗಿ ಉಳ್ಳ ಮುಳುಗಡೆ ಕಾದಂಬರಿಯು ಸುಧಾ ಯುಗಾದಿ ಕಾದಂಬರಿ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದಿದೆ, ಸುರೇಶ್ ಹೆಬ್ಳೀಕರ್‌ರವರ ನಿರ್ದೇಶನದಲ್ಲಿ  ಕಾಡಿನ ಬೆಂಕಿ, ಗಿರೀಶ್ ಕಾಸರವಳ್ಳಿಯವರ ನಿರ್ದೇಶನದಲ್ಲಿ ದ್ವೀಪ(ಚಲನಚಿತ್ರ), ಸಿರಿಗಂಧ ಶ್ರೀನಿವಾಸಮೂರ್ತಿಯವರ ನಿರ್ದೇಶನದಲ್ಲಿ ಬಳುವಳಿ, ಕೋಡ್ಲು ರಾಮಕೃಷ್ಣರವರ ನಿರ್ದೇಶನದಲ್ಲಿ ಬೆಟ್ಟದಪುರದ ದಿಟ್ಟ ಮಕ್ಕಳು ಮತ್ತು ಮನುರವರ ನಿರ್ದೇಶನದಲ್ಲಿ ಆಂತರ್ಯ ಕಾದಂಬರಿಗಳು ಚಲನಚಿತ್ರಗಳಾಗಿಯೂ ಜನಪ್ರಿಯತೆಯನ್ನು ಪಡೆದಿವೆ.

ಇವುಗಳಲ್ಲಿ 'ಕಾಡಿನ ಬೆಂಕಿ' ಚಿತ್ರ ರಜತ ಕಮಲ ಪ್ರಶಸ್ತಿಯನ್ನೂ, 'ದ್ವೀಪ' ಚಿತ್ರ 'ಸ್ವರ್ಣ ಕಮಲ' ಪ್ರಶಸ್ತಿಯನ್ನೂ ಗಳಿಸಿ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದ ಹಿರಿಮೆ ಗಳಿಸಿವೆ. ದೂರದರ್ಶನ ಮಾಧ್ಯಮದಲ್ಲಿ ಸಹ ಮಕ್ಕಳ ಧಾರವಾಹಿ, ಕಥೆಗಳು, ಹಲವಾರು ಕಾದಂಬರಿಗಳು ನಾಟಕಕ್ಕೆ ರೂಪಾಂತರವಾಗಿ ಪ್ರದರ್ಶಿತವಾಗಿವೆ.

ಮುಳುಗಡೆ, ಕೊಳಗ, ಒಳಿತನ್ನು ಮಾಡಲು ಬಂದವರು, ಬಣ್ಣ, ಪಾದರಿಯಾಗುವ ಹುಡುಗ, ಇಬ್ಬರು ಮಾಜಿಗಳು ಮುಂತಾದ ಕಾದಂಬರಿಗಳು ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗದ ಬಿ.ಎಸ್ಸಿ., ಬಿ.ಕಾಂ., ತರಗತಿಗಳಿಗೆ, ಬೆಂಗಳೂರು ವಿಶ್ವವಿದ್ಯಾಲಯದ ಬಿ.ಎ. ತರಗತಿಗಳಿಗೆ, ಮಂಗಳೂರು ವಿಶ್ವವಿದ್ಯಾನಿಲಯದ ಬಿ.ಕಾಂ. ತರಗತಿಗಳಿಗೆ ಮತ್ತು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯವೂ ಸೇರಿದಂತೆ ಮುಂತಾದೆಡೆಗಳಲ್ಲಿ ಪಠ್ಯಪುಸ್ತಕಗಳಾಗಿಯೂ ಆಯ್ಕೆಯಾಗಿದೆ.

ವಿಶೇಷವಾಗಿ ಮಕ್ಕಳ ಸಾಹಿತ್ಯದಲ್ಲಿ ಕೃಷಿ ಮಾಡಿರುವ ನಾ.ಡಿಸೋಜ ಮಕ್ಕಳ ಸಾಹಿತ್ಯದ ವಿವಿಧ ಪ್ರಕಾರದಲ್ಲಿ ೧೨ ಕೃತಿಗಳನ್ನು ಪ್ರಕಟಿಸಿದ್ದಾರೆ. ಡಿಸೋಜ ಅವರ ಹಲವಾರು ಸಣ್ಣ ಕಥೆಗಳು ಕೊಂಕಣಿ, ಮಲಯಾಳಂ, ತೆಲುಗು, ಸಂಸ್ಕೃತ, ಹಿಂದಿ, ಇಂಗ್ಲಿಷ್ ಭಾಷೆಗೂ ಅನುವಾದಗೊಂಡಿವೆ. ತುಂಜಾಲು ಕಾದಂಬರಿಯು ತೆಲುಗು ಭಾಷೆಗೆ, ಪ್ರೀತಿಯೊಂದೇ ಸಾಲದೆ, ಜಲಪಾತದ ಸುತ್ತ, ಇಗರ್ಜಿ ಸುತ್ತಲಿನ ಹತ್ತು ಮನೆಗಳು, ಕಾಡಿನ ಬೆಂಕಿ, ತಿರುವು ಮುಂತಾದ ಕಾದಂಬರಿಗಳು ಕೊಂಕಣಿಗೆ, ಇಗರ್ಜಿ ಕಾದಂಬರಿ, ದ್ವೀಪ, ಬಾಲಗಂಧರ್ವ ಮತ್ತು ಏಸುಕ್ರಿಸ್ತ ಕೃತಿಗಳು ಇಂಗ್ಲಿಷ್‌ಗೂ, ನೇತ್ರಾಣಿ ಗುಡ್ಡಕ್ಕೆ ಯಾತ್ರೆ ಕೃತಿಯು ಹಿಂದಿ ಭಾಷೆಗೂ ಅನುವಾದಗೊಂಡಿದೆ.

ನಾ. ಡಿಸೋಜರವರ ಸಾಹಿತ್ಯ ಕುರಿತು ಮದರಾಸು ವಿಶ್ವವಿದ್ಯಾಲಯದ ಶ್ರೀ ಪ್ರಕಾಶ್ ಸೈಮನ್‌ರವರು ನಾ. ಡಿಸೋಜರವರ ೨೫ ಕಥೆಗಳು ಒಂದು ಅಧ್ಯಯನ ಕುರಿತು ಎಂ.ಫಿಲ್. ಪದವಿ(೧೯೯೫), ಮಧುರೆ ಕಾಮರಾಜ ವಿಶ್ವವಿದ್ಯಾಲಯದ ಎಂ.ಎಂ. ಮಂಜುನಾಥರವರು ನಾ. ಡಿಸೋಜರವರ ಕಾದಂಬರಿಗಳಲ್ಲಿ ಮುಳುಗಡೆ ಸಮಸ್ಯೆ ಒಂದು ಅಧ್ಯಯನ ಮಹಾಪ್ರಬಂಧಕ್ಕೆ ಎಂ.ಫಿಲ್. ಪದವಿ (೧೯೯೮), ಕುವೆಂಪು ವಿಶ್ವವಿದ್ಯಾಲಯದ ಟಿ.ಎಸ್. ಶೈಲಾರವರು ನಾ.ಡಿಸೋಜರವರ ಕಾದಂಬರಿಗಳಲ್ಲಿ ಸಾಂಸ್ಕೃತಿಕ ಸ್ಥಿತ್ಯಂತರಗಳು ಮಹಾ ಪ್ರಬಂಧಕ್ಕೆ ಎಂ.ಫಿಲ್ ಪದವಿ(೨೦೦೧) ಮತ್ತು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಗಂಗಾ ಮೂಲಿಮನಿಯವರು ನಾ. ಡಿಸೋಜ ಒಂದು ಸಾಂಸ್ಕೃತಿಕ ಅಧ್ಯಯನ ಮಹಾ ಪ್ರಬಂಧಕ್ಕೆ ಡಾಕ್ಟರೇಟ್ ಪದವಿ(೨೦೦೧) ಪಡೆದಿದ್ದಾರೆ.

ನಾ. ಡಿಸೋಜ ಅವರು ಕರ್ನಾಟಕ ಸಾಹಿತ್ಯ ಅಕಾಡಮಿ, ಕೊಂಕಣಿ ಸಾಹಿತ್ಯ ಅಕಾಡಮಿ, ಪುಸ್ತಕ ಪ್ರಾಧಿಕಾರ, ಕುವೆಂಪು ವಿಶ್ವವಿದ್ಯಾಲಯದ ಸೆನೆಟ್, ಹಂಪಿ ಕನ್ನಡ ವಿಶ್ವವಿದ್ಯಾಲಯದ ಸೆನೆಟ್, ಶಿವಮೊಗ್ಗ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಯ ಆಡಳಿತ ಪರಿಷತ್, ಕುವೆಂಪು ರಂಗ ಮಂದಿರ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಮುಂತಾದ ಸಂಸ್ಥೆಗಳಲ್ಲಿ ಸದಸ್ಯರಾಗಿ ತಮ್ಮ ಅಮೂಲ್ಯ ಸಲಹೆಗಳನ್ನು ನೀಡಿದ್ದಾರೆ.

**ಗಿರೀಶ್ ಕಾಸರವಳ್ಳಿ:** ಗಿರೀಶ್ ಕಾಸರವಳ್ಳಿ, ಭಾರತದ ಅತ್ಯಂತ ಪ್ರತಿಭಾನ್ವಿತ ಚಲನಚಿತ್ರ ನಿರ್ದೇಶಕರಲ್ಲೊಬ್ಬರು. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಕೆಸಲೂರಿನಲ್ಲಿ ೧೯೫೦ರಲ್ಲಿ ಜನಿಸಿದ ಇವರು ಮಣಿಪಾಲದಲ್ಲಿ ಬಿ.ಫಾರ್ಮ್ ಪದವಿ ಮುಗಿಸಿ ಪುಣೆಯ ರಾಷ್ಟ್ರೀಯ ಚಲನಚಿತ್ರ ತರಬೇತಿ ಸಂಸ್ಥೆಯಲ್ಲಿ ನಿರ್ದೇಶನ ವಿಭಾಗದಲ್ಲಿ ಡಿಪ್ಲೊಮಾ ಪದವಿ ಗಳಿಸಿದರು. ಗಿರೀಶ್ ಕಾಸರವಳ್ಳಿಯವರು ತಮ್ಮ ೨೭ ವರ್ಷಗಳ ವೃತ್ತಿ ಜೀವನದಲ್ಲಿ ಕೇವಲ ೧೨ ಕನ್ನಡ ಚಿತ್ರಗಳನ್ನು ಮಾತ್ರ ನಿರ್ದೇಶಿಸಿದರೂ, ಹಲವಾರು ರಾಷ್ಟ್ರೀಯ ಹಾಗು ಅಂತಾರಾಷ್ಟ್ರೀಯ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಇವರ ಚಿತ್ರಗಳು ಅನೇಕ ಪ್ರತಿಷ್ಠಿತ ಚಲನಚಿತ್ರೋತ್ಸವಗಳಲ್ಲಿಯೂ ಸಹ ಪ್ರದರ್ಶಿತವಾಗಿದೆ. ಸಮಾನಾಂತರ

ಚಿತ್ರ ಆಂದೋಲನದ ಬಾವುಟವನ್ನು ಹಾರಿಸುತ್ತ ಶ್ರೀಯುತರು ಜನಪ್ರಿಯ ಅಥವಾ ವಾಣಿಜ್ಯಮಯ ಚಿತ್ರಗಳಿಂದ ಮೊದಲಿನಿಂದಲು ದೂರ ಇದ್ದಾರೆ.

ಪುಣೆಯಲ್ಲಿರುವ ಭಾರತೀಯ ದೂರದರ್ಶನ ಹಾಗು ಚಲನಚಿತ್ರ ಸಂಸ್ಥೆಯಿಂದ ಎಫ್.ಟಿ.ಐ.ಐ ಬಂಗಾರದ ಪದಕದೊಂದಿಗೆ ಪದವಿ ಪಡೆದ ಗಿರೀಶ್ ಕಾಸರವಳ್ಳಿಯವರು, ತಮ್ಮ ಪದವಿ ಪ್ರಾಪ್ತಿಗಾಗಿ ಮಾಡಿದ ಚಿತ್ರ ಅವಶೇಷಕ್ಕಾಗಿ ಸಣ್ಣ ಚಿತ್ರ ವಿಭಾಗದಲ್ಲಿ, ಭಾರತದ ರಾಷ್ಟ್ರಪತಿಗಳಿಂದ ರಜತ ಕಮಲ ಪ್ರಶಸ್ತಿಯನ್ನು ಪಡೆದರು. ೧೯೭೭ರಲ್ಲಿ ತಮ್ಮ ಪ್ರಥಮ ಚಲನಚಿತ್ರ ಘಟಶ್ರಾದ್ಧಕ್ಕಾಗಿ ಭಾರತದ ರಾಷ್ಟ್ರಪತಿಗಳಿಂದ ಸ್ವರ್ಣ ಕಮಲ ಪ್ರಶಸ್ತಿಯನ್ನು ಪಡೆದ ನಂತರ ಇನ್ನೂ ೩ ಸ್ವರ್ಣಕಮಲಗಳನ್ನು (ಒಟ್ಟಾರೆ ೪) ಪಡೆದು ಸತ್ಯಜಿತ್ ರೇ(೬ ಸ್ವರ್ಣ ಕಮಲಗಳು)(ಮೃಣಾಲ್ ಸೇನ್ ಮತ್ತು ಕಾಸರವಳ್ಳಿ) ನಂತರ ನಾಲ್ಕು ಸ್ವರ್ಣ ಕಮಲಗಳನ್ನು ಪಡೆದವರಲ್ಲಿ ಒಬ್ಬರಾಗಿದ್ದಾರೆ. ಇವರು "ಘಟಶ್ರಾದ್ಧ" ನಿರ್ದೇಶಿಸಿದಾಗ ಇವರ ವಯಸ್ಸು ಕೇವಲ ೨೭. ಸ್ವರ್ಣ ಕಮಲ ಪುರಸ್ಕಾರ ಪಡೆದ ಕಿರಿಯ ನಿರ್ದೇಶಕರೆಂದು ಇವರು ಹೆಸರು ಪಡೆದರು. "ಘಟಶ್ರಾದ್ಧ" ಕತೆಯನ್ನು ಆಧರಿಸಿ ಅರುಣ್ ಕೌಲ್ ನಿರ್ದೇಶನದಲ್ಲಿ "ದೀಕ್ಷಾ" ಎಂಬ ಹೆಸರಿನಲ್ಲಿ ಹಿಂದಿ ಚಿತ್ರವೊಂದು ತಯಾರಾಗಿದೆ.

ಗಿರೀಶ್ ಕಾಸರವಳ್ಳಿಯವರ ಪತ್ನಿ ವೈಶಾಲಿ ಕಾಸರವಳ್ಳಿ ಕನ್ನಡ ಚಲನಚಿತ್ರ ನಟಿ ಹಾಗು ದೂರದರ್ಶನ ಧಾರಾವಾಹಿಗಳ ನಿರ್ದೇಶಕಿ. ತಂದೆ ತಾಯಿಯರಂತೆ ಈ ದಂಪತಿಗಳ ಮಕ್ಕಳಿಬ್ಬರೂ ನಿರ್ದೇಶನದಲ್ಲಿ ಹೆಸರು ಮಾಡುತ್ತಿದ್ದಾರೆ. ಗಿರೀಶ್ ಕಾಸರವಳ್ಳಿಯವರಿಗೆ ದಕ್ಷಿಣ ಏಷ್ಯಾ ಫೆಡರೇಷನ್‌ನ ಕ್ರಿಸ್ಟಲ್ ಗ್ಲೋಬ್ ಪ್ರಶಸ್ತಿ ೨೦೦೯ರಲ್ಲಿ ಹಾಗು ಭಾರತ ಸರ್ಕಾರ ಕೊಡಮಾಡುವ ಅತ್ಯುನ್ನತ 'ಪದ್ಮಶ್ರೀ' ಪ್ರಶಸ್ತಿ ೨೦೧೧ರಲ್ಲಿ ದೊರೆತಿದೆ.

ಇವರ 'ಕನಸೆಂಬ ಕುದುರೆಯನೇರಿ' ಚಿತ್ರ, ಅಮರೇಶ ನುಗಡೋಣಿ ಅವರ 'ಸವಾರಿ' ಸಣ್ಣಕಥೆಯನ್ನಾಧರಿಸಿದ ಚಿತ್ರಗಳು ಪ್ರಸಿದ್ಧಿಯನ್ನು ಪಡೆದಿವೆ. ೨೦೧೦ರ ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿಗಳಲ್ಲಿ ಅತ್ಯುತ್ತಮ ಪ್ರಾದೇಶಿಕ ಚಿತ್ರ ವಿಭಾಗದಲ್ಲಿ 'ಕನಸೆಂಬ ಕುದುರೆಯನೇರಿ' ಚಿತ್ರ ರಜತ ಕಮಲ ಪ್ರಶಸ್ತಿಯನ್ನು ಬಾಚಿಕೊಂಡಿದೆ. ರೋಮ್‌ನ ಏಷ್ಯಾಲಿಕಾ ಚಿತ್ರೋತ್ಸವ, ಶ್ರೇಷ್ಠ ಏಷ್ಯನ್ ಚಿತ್ರ ಅವಾರ್ಡ್ ಈ ಚಿತ್ರಕ್ಕೆ ಸಂದಿದೆ. ಇವರ ನಿರ್ದೇಶನದ "ಕೂರ್ಮಾವತಾರ" ಸಿನಿಮಾ ೨೦೧೨ರ ಸಾಲಿನ ಅತ್ಯುತ್ತಮ ಪ್ರಾದೇಶಿಕ ಚಿತ್ರ ಪ್ರಶಸ್ತಿ ಜತೆಗೆ ರಜತ ಕಮಲ ಪ್ರಶಸ್ತಿ ಪಡೆದುಕೊಂಡಿದೆ.

**ಶ್ರೀ ಕೆ.ವಿ.ಸುಬ್ಬಣ್ಣನವರು:** ಸಾಗರ ತಾಲ್ಲೂಕಿನ ಹೆಗ್ಗೋಡಿನಲ್ಲಿ, "ನೀಲಕಂಠೇಶ್ವರ ನಾಟ್ಯ ಸೇವಾ ಸಂಘ"(ನೀನಾಸಂ) ಎಂಬ ನಾಟಕ ತರಬೇತಿ ಕೇಂದ್ರವನ್ನು ಸ್ಥಾಪಿಸಿ, ಹಲವಾರು ರಂಗ ಕಲಾವಿದರನ್ನು ಕರ್ನಾಟಕ ರಂಗಕ್ಷೇತ್ರಕ್ಕೆ ನೀಡಿದ, ಪ್ರತಿಷ್ಠಿತ ಮ್ಯಾಗ್ಸಸ್ಸೆ ಪ್ರಶಸ್ತಿ ವಿಜೇತರು ಶ್ರೀ ಕೆ.ವಿ.ಸುಬ್ಬಣ್ಣನವರು.

೨೦-೦೨-೧೯೩೨ರಂದು ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಹೆಗ್ಗೋಡು ಸಮೀಪದ ಮುಂಡಿಗೇಸರ ಎಂಬ ಪುಟ್ಟ ಗ್ರಾಮದ, 'ಹವ್ಯಕ' ಕುಟುಂಬದಲ್ಲಿ ಇವರು ಜನಿಸಿದರು. ಇವರ

ತಂದೆ ಕೆ.ವಿ. ರಾಮಪ್ಪ, ತಾಯಿ ಸಾವಿತ್ರಮ್ಮ. ಕುಂಟಗೋಡು ವಿಭೂತಿ(ಕೆ.ವಿ.) ಎನ್ನುವುದು ಇವರ ಮನೆತನದ ಮೂಲನಾಮ. ಮನೆತನದ ಮೂಲ ಕಸುಬಾದ ಅಡಿಕೆ ಬೇಸಾಯವನ್ನು ಮುಂಡಿಗೇಸರದಲ್ಲಿ ಮಾಡುತ್ತಾ, ಸುಬ್ಬಣ್ಣನವರು ಸೃಜನಶೀಲರಾಗಿ ಬೆಳೆದಿದ್ದು ಹೆಗ್ಗೋಡಿನಲ್ಲಿ.

ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಹೆಗ್ಗೋಡು ಒಂದು ಪುಟ್ಟ ಗ್ರಾಮ. ಈ ಗ್ರಾಮದ ಸುತ್ತಮುತ್ತ ಭೀಮನಕೋಣೆ, ಮುಂಡಿಗೇಸರ, ಹೊನ್ನೇಸರ, ಪುರಪ್ಪೇಮನೆ, ಕೆರೆಮನೆ, ಕೆರೆಕೊಪ್ಪ ಮುಂತಾದ ಇನ್ನಿತರ ಚಿಕ್ಕಪುಟ್ಟ ಗ್ರಾಮಗಳಿವೆ. ಮೂರರಿಂದ ಎಂಟು, ಹತ್ತು ಮನೆಗಳುಳ್ಳ ಈ ಎಲ್ಲ ಗ್ರಾಮಗಳಿಗೆ ಹೆಗ್ಗೋಡೇ ಕೇಂದ್ರಸ್ಥಾನ.

ಮಲೆನಾಡಿನ ಈ ಗ್ರಾಮಗಳಲ್ಲಿ ಅಡಿಕೆಯೇ ಮುಖ್ಯ ಬೇಸಾಯ. ಈ ಬೇಸಾಯವನ್ನು ಬ್ರಾಹ್ಮಣರಲ್ಲೇ ಬರುವ 'ಹವ್ಯಕ' ಎಂಬ ಉಪಜಾತಿಯ ಜನರು ಹೆಚ್ಚಾಗಿ ಮಾಡುತ್ತಾರೆ. ಈ ನಾಡಿನ ಸಾಂಸ್ಕೃತಿಕ ಬದುಕಿಗೆ ಇವರ ಕೊಡುಗೆ ಅಪಾರವಾಗಿದೆ. ಸಂಗೀತ, ಯಕ್ಷಗಾನ, ತಾಳಮದ್ದಲೆಗಳಂತಹಾ ಕಲೆಗಳು ಈ ಜನರ ಬದುಕಿನಲ್ಲಿ ಆಳವಾಗಿ ಬೇರುಬಿಟ್ಟಿವೆ.

ಸುಬ್ಬಣ್ಣನವರು ತಮ್ಮ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಸಾಗರ ಮತ್ತು ಶಿವಮೊಗ್ಗ ದಲ್ಲಿ ಪೂರೈಸಿದರು. ೧೯೫೩ರಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಕನ್ನಡ ಸಾಹಿತ್ಯದಲ್ಲಿ ಬಿ.ಎ.(ಆನರ್ಸ್) ಪದವಿಯನ್ನು ಪ್ರಥಮ ಶ್ರೇಣಿಯೊಂದಿಗೆ ಪಡೆದರು. ಪದವಿಯ ನಂತರ ಶ್ರೀಮತಿ ಶೈಲಜಾ ಅವರೊಂದಿಗೆ ವಿವಾಹವಾದ ಸುಬ್ಬಣ್ಣನವರು ಹೆಗ್ಗೋಡಿನಲ್ಲೇ ಸೃಜನಶೀಲ ಚಟುವಟಿಕೆಗಳಿಂದ, ಈ ಭಾಗದ ಜನರ ಸಹಯೋಗದೊಂದಿಗೆ ರಂಗನಿರ್ದೇಶಕರಾಗಿ, ಬರಹಗಾರರಾಗಿ ಬೆಳೆದರು.

ಇವರ ಪತ್ನಿ ಶೈಲಜಾರವರು ಸಂಗೀತಗಾರ್ತಿಯಾಗಿದ್ದು, ಇವರ ಪುತ್ರ ಅಕ್ಷರರವರೂ ಕೂಡಾ ತಂದೆಯಂತೆ ಪ್ರತಿಭಾವಂತ ರಂಗನಿರ್ದೇಶಕ ಹಾಗು ಬರಹಗಾರರಾಗಿದ್ದಾರೆ. ಹಾಗೆಯೇ ಇವರ ಸೊಸೆ ಅಂದರೆ ಅಕ್ಷರರವರ ಪತ್ನಿ ವಿದ್ಯಾರವರೂ ಕೂಡಾ ರಂಗನಿರ್ದೇಶನದಲ್ಲಿ ಗುರುತಿಸಿಕೊಂಡಿದ್ದು, ಆಗ್ರಾ ಘರಾಣೆಯ ಹಿಂದೂಸ್ತಾನಿ ಶಾಸ್ತ್ರೀಯ ಸಂಗಿತದ ಗಾಯಕಿಯೂ ಆಗಿದ್ದಾರೆ.

ಕೆ.ವಿ.ಸುಬ್ಬಣ್ಣನವರು ನಾಟಕಕಾರರಾಗಿ, ಚಿಂತಕರಾಗಿ, ನೀನಾಸಂನ ಸ್ಥಾಪಕರಾಗಿ ಸುಪರಿಚಿತರು. ಸಾಗರ ತಾಲೂಕಿನ ಹೆಗ್ಗೋಡು ಎಬ ಪುಟ್ಟ ಗ್ರಾಮದಲ್ಲಿ ಇವರು ನಡೆಸುತ್ತಿದ್ದ ರಂಗ ತರಬೇತಿ ಯೋಜನೆಗಳು, ಸಂಸ್ಕೃತಿ ಶಿಬಿರಗಳು ಸಾಕಷ್ಟು ಪ್ರಖ್ಯಾತಿ ಗಳಿಸಿವೆ. ಲೋಹಿಯಾವಾದದಿಂದ ಪ್ರೇರಣೆ ಪಡೆದಿದ್ದ ಸುಬ್ಬಣ್ಣ ಹಲವು ಲೇಖನಗಳನ್ನೂ ಬರೆದಿದ್ದಾರೆ. ಮುಂದೆ ಅದು 'ಕೆ.ವಿ.ಸುಬ್ಬಣ್ಣ ಅವರ ಆಯ್ದ ಬರಹಗಳು' ಸಂಕಲನ ರೂಪದಲ್ಲಿ ಪ್ರಕಟವಾದುವು. ಅಕ್ಷರ ಪ್ರಕಾಶನವನ್ನು ಹುಟ್ಟುಹಾಕಿ ಹಲವಾರು ಮಹತ್ವದ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಕಾಳಿದಾಸ, ಶೇಕ್ಸ್‌ಪಿಯರ್, ಬ್ರೆಕ್ಟ್ ಮುಂತಾದವರ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿ ರಂಗ ಕಾಣುವಂತೆ ಮಾಡಿದ್ದಾರೆ.

ಕೆ.ವಿ.ಸುಬ್ಬಣ್ಣನವರ 'ಕವಿರಾಜ ಮಾರ್ಗ ಮತ್ತು ಕನ್ನಡ ಜಗತ್ತು' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿದೆ. ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ಪದ್ಮಶ್ರೀ ಪುರಸ್ಕಾರಗಳಲ್ಲದೆ ೧೯೯೧ ಪ್ರತಿಷ್ಠಿತ ಮ್ಯಾಗ್ಸಸೇ ಪುರಸ್ಕಾರವೂ ಇವರಿಗೆ ಸಂದಿದೆ. ಇವರ ಲೇಖನಗಳ ಇಂಗ್ಲಿಷ್ ಆವೃತ್ತಿಯು ಎಂಬ ಹೆಸರಿನಲ್ಲಿ ಪ್ರಕಟವಾಗಿದೆ.

ಸುಬ್ಬಣ್ಣನವರು ಪುಣೆಯ ಫಿಲಂ ಇನ್ಸ್ಟಿಟ್ಯೂಟ್‌ನಲ್ಲಿ ಚಲನಚಿತ್ರ ಅವಲೋಕನ ಕೋರ್ಸ್ ಮುಗಿಸಿ ಬಂದು, ಅಂತಹದೇ ಕೋರ್ಸ್‌ಗೆ ಹೆಗ್ಗೋಡಿನಲ್ಲಿ ಚಾಲನೆ ಕೊಟ್ಟರು. ೧೯೭೩ರಲ್ಲಿ ನೀನಾಸಂ ಚಿತ್ರ ಸಮಾಜವೆಂಬ ಮತ್ತೊಂದು ಬೆರಗಿನ ಲೋಕ ಹುಟ್ಟೇಬಿಟ್ಟಿತು. ೧೯೭೭ರಲ್ಲಿ ಮೊದಲ ಚಲನಚಿತ್ರ ಹಬ್ಬದ ಜನ್ಮವಾಯಿತು. ೧೯೮೦ರ ಉಳಿದರ್ಧ ಭಾಗದಲ್ಲಿ ಆರಂಭವಾದ ಚಲನಚಿತ್ರ ಅವಲೋಕನ ಕೋರ್ಸ್ ವರ್ಷದಿಂದ ವರ್ಷಕ್ಕೆ ತನ್ನ ಗುಣಮಟ್ಟದಿಂದ ಪ್ರಸಿದ್ಧಿಯಾಯಿತು. ಹತ್ತು ದಿನಗಳ ಕಾಲ ಹೆಗ್ಗೋಡಿನಲ್ಲಿದ್ದುಕೊಂಡು ಪ್ರಪಂಚದ ಅತ್ಯುತ್ತಮ ಚಲನ ಚಿತ್ರಗಳನ್ನು ನೋಡಿ, ಸಹೃದಯತೆಯಿಂದ ಅವುಗಳ ಬಗ್ಗೆ ನಡೆಯುವ ಮಾತುಕತೆಯಲ್ಲಿ, ವಿಮರ್ಶೆಗಳಲ್ಲಿ ಮತ್ತು ಅವಲೋಕನದಲ್ಲಿ ಪಾಲ್ಗೊಳ್ಳುವ ಸುವರ್ಣಾವಕಾಶಕ್ಕಾಗಿ ನೂರಾರು ಮಂದಿ ಹಾತೊರೆದರು.

ಚಿತ್ರಗಳ ಜೊತೆ ಅವುಗಳಲ್ಲಿದ್ದ ಸಂಭಾಷಣೆ, ಚಿತ್ರಕತೆ ಮುಂತಾದವನ್ನು ನೋಡುಗರಿಗೆ ಸುಬ್ಬಣ್ಣ ಮತ್ತು ತಂಡದವರು ಕನ್ನಡದಲ್ಲಿ  ಒದಗಿಸುವ ಪ್ರಯತ್ನ ಮಾಡಿದ್ದರಿಂದ ಕೃಷಿಕ ಸಮುದಾಯದ ಹಳ್ಳಿಗರಿಗೆ ನಾನಾ ಭಾಷೆಗಳಲ್ಲಿದ್ದ ಆ ಚಲನಚಿತ್ರಗಳನ್ನು ನೋಡುವುದು ಸಾಧಾರಣ ಅಭ್ಯಾಸವಾಯಿತು. ಕನ್ನಡದ ಗ್ರಾಮೀಣ ಮಣ್ಣಿನಲ್ಲಿ ನಡೆದ ಇಂತಹ ತಳಮಟ್ಟದ ಪ್ರಯೋಗಗಳು ನೀನಾಸಂ ಸಂಸ್ಥೆಯ ಬೇರುಗಳು ಮತ್ತು ತಳಪಾಯ.

**ಶ್ರೀ ಪೂರ್ಣಚಂದ್ರ ತೇಜಸ್ವಿ:** ಪೂರ್ಣಚಂದ್ರ ತೇಜಸ್ವಿ ಅವರು ರಾಷ್ಟ್ರಕವಿ ಕುವೆಂಪು ಅವರ ಪುತ್ರ. ಅವರ ತಾಯಿ ಹೇಮಾವತಿ. ಇವರು ೧೯೩೮ ಸೆಪ್ಟೆಂಬರ್ ೮ ರಂದು ಶಿವಮೊಗ್ಗ ಜಿಲ್ಲೆಯ ಕುಪ್ಪಳಿಯಲ್ಲಿ ಜನಿಸಿದರು. ಕನ್ನಡದ ಪ್ರಮುಖ ಸಾಹಿತಿಗಳಲ್ಲೊಬ್ಬರು. ತೇಜಸ್ವಿ ಅವರು ಕುವೆಂಪು ಕನ್ನಡ ನವ್ಯ ಸಾಹಿತ್ಯದ ಪ್ರಮುಖ ಲೇಖಕ ಹಾಗು ಸ್ವತಂತ್ರ ಪ್ರವೃತ್ತಿಯ ಬರಹಗಾರರು. ನವ್ಯ ಸಾಹಿತ್ಯದ ಕಾಲಘಟ್ಟದಲ್ಲಿ ಪ್ರಮುಖವಾಗಿ ಕೇಳಿ ಬಂದ ಹೆಸರು, ಅಬಚೂರಿನ ಪೋಸ್ಟಾಫೀಸು ಕಥಾ ಸಂಕಲನದ ಮೂಲಕ ಬಂಡಾಯ ಸಾಹಿತ್ಯವನ್ನು ಪ್ರಾರಂಭಿಸಿದರು. ತೇಜಸ್ವಿ ಆರಂಭದಲ್ಲಿ ಬೇರೊಂದು ಹೆಸರಿನಲ್ಲಿ ಕಾವ್ಯ ರಚನೆ ಮಾಡಿದ್ದರೂ, ನಂತರ ಕಥಾ ಸಾಹಿತ್ಯ, ಕಾದಂಬರಿ, ಲೇಖನಗಳ ಕಡೆ ಹೆಚ್ಚಿನ ಗಮನ ಹರಿಸಿದರು.

ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಪದವಿ ಪಡೆದ ನಂತರ, ಮೈಸೂರು ವಿಶ್ವವಿದ್ಯಾನಿಲಯ ದಿಂದ ಕನ್ನಡದಲ್ಲಿ ಎಂ.ಎ. ಪದವಿಯನ್ನು ಪಡೆದರು. ಇವರ ಪತ್ನಿ ರಾಜೇಶ್ವರಿ. ಇವರೀಗ

ತೇಜಸ್ವಿಯವರ ಪ್ರೀತಿಯ ಮನೆ ಮೂಡಿಗೆರೆಯ 'ನಿರುತ್ತರ'ದಲ್ಲಿ ವಾಸಿಸುತ್ತಿದ್ದಾರೆ. ಇವರಿಗೆ ಇಬ್ಬರು ಹೆಣ್ಣು ಮಕ್ಕಳು, ಸುಸ್ಮಿತಾ ಹಾಗು ಈಶಾನ್ಯೆ. ಇವರಿಬ್ಬರೂ ಸಾಫ್ಟ್‌ವೇರ್ ಪರಿಣತರು.

ಇವರ ಮೊದಲ ಕಥೆ ಲಿಂಗ ಬಂದ. ಈ ಕಥೆಗಾಗಿ ಅವರು ರಾಜ್ಯೋತ್ಸವ ಪ್ರಶಸ್ತಿ ಪಡೆದರು. ಸ್ನಾತಕೋತ್ತರ ಪದವಿಯ ನಂತರ ಓರಗೆಯ ಇತರೆ ಬರಹಗಾರರಂತೆ ಅಧ್ಯಾಪಕ ವೃತ್ತಿಯನ್ನು ಬಯಸದೆ ಮಲೆನಾಡಿನ ಮೂಡಿಗೆರೆಯಲ್ಲಿ ಕೃಷಿಯನ್ನು ಮಾಡುವ ಮಹತ್ವದ ನಿರ್ಧಾರವನ್ನು ಮಾಡಿದರು. ಕೃಷಿಯ ಜತೆಜತೆಗೆ ಅಗಾಧವಾದ ಸಾಹಿತ್ಯದ ಕೃಷಿ ಮಾಡಿದರು. ಸಾಹಿತ್ಯದ ಜೊತೆಗೆ ಇವರಿಗೆ ವ್ಯವಸಾಯ, ಛಾಯಾಚಿತ್ರಗ್ರಹಣ ಹಾಗು ಬೇಟೆಯಲ್ಲಿ ಆಸಕ್ತಿಯಿತ್ತು. ಇವರು ರೈತ ಚಳುವಳಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

ಕವಿತೆ, ನಾಟಕ, ಕಾದಂಬರಿ, ಕತೆ ಮೊದಲಾದ ಸಾಹಿತ್ಯ ಪ್ರಕಾರಗಳಲ್ಲಿ ಬರೆದಿದ್ದಾರೆ. ಹಲವಾರು ಆಂಗ್ಲ ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ನಾಲ್ಕು ದಶಕಗಳ ಕಾಲ ಕಥೆ, ಕಾದಂಬರಿಗಳ ಮೂಲಕ, ವಿಜ್ಞಾನದ ವಿಸ್ಮಯಗಳ ಮೂಲಕ ತೇಜಸ್ವಿಯವರು ಕನ್ನಡ ಸಾಹಿತ್ಯಕ್ಕೆ ಅನೇಕ ಮಹತ್ವಪೂರ್ಣ ಕೃತಿಗಳನ್ನು ನೀಡಿದ್ದಾರೆ. ಇದರಲ್ಲಿ ಕೀಟಗಳು, ಪ್ರಾಣಿಗಳು, ನದಿ–ಕೊಳ್ಳಗಳು, ಕಾಡುಗಳು, ಬೇಟೆಯ ವೈವಿಧ್ಯತೆಯ ಬಗ್ಗೆ ಹಲವಾರು ಕೃತಿಗಳನ್ನು ನೀಡಿದ್ದಾರೆ. "ಕರ್ವಾಲೋ" ಕೃತಿಯಲ್ಲಿ, ಜೀವವಿಕಾಸ ಪಥದಲ್ಲಿ ಎಲ್ಲವೂ ಬದಲಾಗುತ್ತ ರೂಪಾಂತರ ಹೊಂದುತ್ತಾ ಬಂದಿರುವಾಗ ಹಾರುವ ಓತಿಯ ಕುರಿತು ಕುತೂಹಲ ಹುಟ್ಟಿಸುವ ಸನ್ನಿವೇಶಗಳು ಮೂಡಿ ಬಂದಿವೆ. ಪೂರ್ಣಚಂದ್ರ ತೇಜಸ್ವಿಯವರು ತಮ್ಮ ಮನೆ 'ನಿರುತ್ತರ'ದಲ್ಲಿ ೨೦೦೭ರ ಏಪ್ರಿಲ್ ೫ರ ಮಧ್ಯಾಹ್ನ ೨ ಘಂಟೆಗೆ, ಹೃದಯಾಘಾತದಿಂದ ನಿಧನ ಹೊಂದಿದರು. ಆಗ ಅವರಿಗೆ ೬೯ ವರ್ಷ ವಯಸ್ಸಾಗಿತ್ತು.

ರಾಷ್ಟ್ರಕವಿ ಕುವೆಂಪುರವರ ಸುಪುತ್ರ ಎಂಬ ಹಣೆಪಟ್ಟಿಯನ್ನು ಹೋಗಲಾಡಿಸಿ, ತಮ್ಮ ಸ್ವಂತಿಕೆ ಯಿಂದಲೇ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ನಾಮಾಂಕಿತವನ್ನು ಅಮರಗೊಳಿಸಿ, ಖ್ಯಾತನಾಮರಾದ ದಿವಂಗತ ಶ್ರೀ. ಪೂರ್ಣಚಂದ್ರ ತೇಜಸ್ವಿಯವರು ಶಿವಮೊಗ್ಗದವರು ಎಂಬುದು ಹೆಗ್ಗಳಿಕೆಯೇ ಸರಿ.

# ಅಧ್ಯಾಯ ೬

## ಘರಾಣೆಗಳ ಬೆಳವಣಿಗೆಗೆ ಶಿವಮೊಗ್ಗ ಜಿಲ್ಲೆಯ ಕೊಡುಗೆ

# ಅಧ್ಯಾಯ ೬

# ಘರಾಣೆಗಳ ಬೆಳವಣಿಗೆಗೆ ಶಿವಮೊಗ್ಗ ಜಿಲ್ಲೆಯ ಕೊಡುಗೆ

## ೬.೧ ಶಿವಮೊಗ್ಗ ಜಿಲ್ಲೆಯ ಸಂಗೀತ ಪರಂಪರೆ-ಸೂಕ್ಷ್ಮ ಅವಲೋಕನ

ಸಾಂಸ್ಕೃತಿಕವಾಗಿ ಉತ್ತಮ ಪರಿಸರ ಇದ್ದರೂ ಶಾಸ್ತ್ರೀಯ ಸಂಗೀತವು ಶಿವಮೊಗ್ಗ ಜಿಲ್ಲೆಯಲ್ಲಿ ಸ್ವಲ್ಪ ವಿಳಂಬವಾಗಿಯೇ ಪ್ರವೇಶಿಸಿತು. ನಾಟಕ, ಯಕ್ಷಗಾನ, ಜನಪದ ಪ್ರಕಾರಗಳ ಹಾಡು, ನೃತ್ಯಗಳ ಮಧ್ಯದಲ್ಲಿಯೇ ಶಾಸ್ತ್ರೀಯ ಸಂಗೀತ ಇಲ್ಲಿ ಸಾವಕಾಶವಾಗಿ ಬೆಳೆಯಲಾರಂಭಿಸಿತು. ಭಾರತೀಯ ಸಂಗೀತದಲ್ಲಿ ಹಿಂದೂಸ್ತಾನಿ ಸಂಗೀತ ಹಾಗೂ ಕರ್ನಾಟಕ ಸಂಗೀತ ಎಂಬ ಎರಡು ಪದ್ಧತಿಗಳಿವೆ. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಉತ್ತರ ಭಾರತದಲ್ಲೆಲ್ಲಾ ವ್ಯಾಪಕವಾಗಿ ಪ್ರಚಾರದಲ್ಲಿದೆ. ಈ ಸಂಗೀತವನ್ನು ಉತ್ತರಾದೀ ಸಂಗೀತವೆಂದೂ ಹಾಗೂ ದಕ್ಷಿಣ ಭಾರತದಲ್ಲಿ ಹೆಚ್ಚಾಗಿ ಪ್ರಚಾರದಲ್ಲಿರುವ ಕರ್ನಾಟಕೀ ಸಂಗೀತವನ್ನು ದಕ್ಷಿಣಾದಿ ಸಂಗೀತವೆಂದೂ ಕರೆಯಲಾಗಿದೆ. ಆದರೆ ಕರ್ನಾಟಕದಲ್ಲಿ ಹಿಂದೂಸ್ತಾನಿ ಹಾಗೂ ಕರ್ನಾಟಕಿ ಈ ಎರಡೂ ಪದ್ಧತಿಯ ಸಂಗೀತಗಳು ಪ್ರಚಾರದಲ್ಲಿವೆ. ಶಿವಮೊಗ್ಗ ಜಿಲ್ಲೆಯಲ್ಲಿ ದಕ್ಷಿಣಾದಿ ಸಂಗೀತಕ್ಕೆ ಹೋಲಿಸಿದರೆ ಉತ್ತರಾಧಿ ಅಂದರೆ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಕೆಲಭಾಗಗಳಲ್ಲಿ ಮಾತ್ರ ಇದ್ದು ಕಳೆದ ಆರು ದಶಕದಿಂದ ಜಿಲ್ಲೆಯ ಎಲ್ಲಾ ಭಾಗಗಳಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ವ್ಯಾಪಕವಾಗಿ ಪ್ರಚಾರವಾಗುತ್ತಿದೆ.

ಸಂಗೀತಕ್ಕೆ ಭಾಷಾ ಭೇದವಿಲ್ಲ, ಮತ ಭೇದವಿಲ್ಲ. ಭಾಷೆಯ ಹಂಗಿಲ್ಲದೇ ಬೆಳೆದು ಬಂದಂತಹಾ ಕಲಾಪ್ರಕಾರ ಈ ಶಾಸ್ತ್ರೀಯ ಸಂಗೀತವಾಗಿದೆ. ಸುಮಾರು ೧೯೨೦-೩೦ನೇ ಇಸ್ವಿಯಿಂದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಶಿವಮೊಗ್ಗ ಜಿಲ್ಲೆಯಲ್ಲಿ ಅಸ್ತಿತ್ವಕ್ಕೆ ಬಂದಿತೆಂದರೂ ಸಹ ಸಮಗ್ರವಾಗಿ ಇಡೀ ಜಿಲ್ಲೆಯನ್ನು ವ್ಯಾಪಿಸಲು ಮುಂದಿನ ಅರ್ಧ ಶತಮಾನಗಳೇ ಬೇಕಾದವು ಎಂದರೆ ತಪ್ಪಾಗಲಾರದು. ಸಾಂಸ್ಕೃತಿಕವಾಗಿ ಸಮೃದ್ಧಗೊಂಡ ಏಳು ತಾಲ್ಲೂಕುಗಳನ್ನು ಒಳಗೊಂಡ ಜಿಲ್ಲೆಯಾದರೂ ಕೂಡ ಈ ಜಿಲ್ಲೆಯಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಗಟ್ಟಿಯಾಗಿ ಬೇರೂರಿದ್ದು ಸೊರಬ, ಸಾಗರ, ಶಿವಮೊಗ್ಗ ತಾಲ್ಲೂಕಿನ ಕೆಲ ಊರುಗಳಲ್ಲಿ ಮಾತ್ರವೆಂಬುದು ವಿಷಾದಕರ ಸಂಗತಿಯಾಗಿದೆ. ಉಳಿದೆಡೆ ಇತ್ತೀಚಿನ ದಶಕಗಳಲ್ಲಿ ಪ್ರಚಾರವಾಗುತ್ತಿದೆ ಎನ್ನಬಹುದಾಗಿದೆ.

## ೬.೨ ಮಲೆನಾಡು ಪ್ರದೇಶದ ವಿವಿಧ ಘರಾಣೆಗಳ ಸಂಗೀತ ಪ್ರವರ್ತಕರು

**ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಗಾಯಕರು**

೧. ದಿ॥ ಪಂಡಿತ ಗುರುಶಾಂತ ಗವಾಯಿಗಳು–ಆನವಟ್ಟಿ

೨. ದಿ॥ ಪಂಡಿತ ಬಿ.ನಾರಾಯಣಪ್ಪನವರು–ಸೊರಬ

೩. ದಿ॥ ಪಂಡಿತ ರಾಜಾರಾಮ್ ಸೊರಬರವರು–ಸಾಗರ

೪. ಪಂಡಿತ ಆರ್.ಬಿ.ಸಂಗಮೇಶ್ವರ ಗವಾಯಿಗಳು–ಶಿವಮೊಗ್ಗ

೫. ಪಂಡಿತ ಶಿವರಾಜ ಗವಾಯಿಗಳು–ಶಿವಮೊಗ್ಗ

೬. ಪಂಡಿತ ಇಂದೂಧರ ನಿರೋಡಿ–(ಶಿವಮೊಗ್ಗ) ಮೈಸೂರು

೭. ಪಂಡಿತ ಇಂದೂಧರ ಪೂಜಾರ–ಶಿವಮೊಗ್ಗ

೮. ಶ್ರೀ ವೇಣುಗೋಪಾಲ–ಶಿವಮೊಗ್ಗ

೯. ಶ್ರೀ ಅರುಣ ಹಂಪಿಹೊಳಿ–ಗಾಜನೂರು–ಶಿವಮೊಗ್ಗ ತಾ.

೧೦. ಉಸ್ತಾದ್ ಹುಮಾಯೂನ್ ಹರಲಾಪುರ–ಶಿವಮೊಗ್ಗ

೧೧. ವಿದೂಷಿ ವಸುಧಾ ಶರ್ಮ ಹಳೇ ಇಕ್ಕೇರಿ, ಸಾಗರ ತಾ.

೧೨. ವಿದೂಷಿ ಇಂದೂಮತಿ ನಾಡಿಗೇರ್, ಯಲಸಿ, ಸೊರಬ ತಾ.

೧೩. ವಿದೂಷಿ ಕಮಲಾ ರಘುಪತಿಭಟ್, ಸುಗಾವಿ. ಶಿರಸಿ (ಸೊರಬ)

೧೪. ಶ್ರೀ ನಾಗಭೂಷಣ ಹೆಗಡೆ, ಸಾಗರ

೧೫. ಶ್ರೀ ದೀಪಕ್ ಎನ್., ಶಿವಮೊಗ್ಗ

೧೬. ಶ್ರೀ ಜನಾರ್ಧನ್ ಭಟ್, ಕಾರ್ಗಲ್, ಸಾಗರ ತಾ.

೧೭. ಶ್ರೀ ಸತೀಶ್ ಹೆಗಡೆ, ತೀರ್ಥಹಳ್ಳಿ

೧೮. ಶ್ರೀ ಕೌಶಿಕ್ ಐತಾಳ್, ತೀರ್ಥಹಳ್ಳಿ (ಬೆಂಗಳೂರು)

೧೯. ಶ್ರೀ ನಿಶಾಂತ, ಶಿವಮೊಗ್ಗ

೨೦. ಕು. ನೌಷಾದ್ ಹರಲಾಪುರ, ಶಿವಮೊಗ್ಗ

೨೧. ಶ್ರೀ ಪರಶುರಾಮ ಗುಲಬರ್ಗಾ, ಮೇಗರವಳ್ಳಿ ತೀರ್ಥಹಳ್ಳಿ ತಾ.

೨೨. ಶ್ರೀ ರಾಘವೇಂದ್ರ ಭಟ್, ಭೀಮನಕೋಣೆ, ಸಾಗರ ತಾ.

೨೩. ಶ್ರೀ ಮಹಾಬಲೇಶ್ವರ ಪರಮೇಶ್ವರ ಹೆಗಡೆ, ಹೆಗ್ಗೋಡು, ಸಾಗರ ತಾ.

೨೪. ವಿದೂಷಿ ರೇಖಾ ಹಂಪಿಹೊಳಿ, ಗಾಜನೂರು, ಶಿವಮೊಗ್ಗ ತಾ.

## ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ವಾದ್ಯಗಾರರು

### ತಬಲಾವಾದಕರು

* ಪಂಡಿತ ತುಕಾರಾಮ್ ರಂಗದೋಳ್-ಶಿವಮೊಗ್ಗ
* ಪಂಡಿತ ಮಡಿವಾಳಯ್ಯ ಸಾಲಿ-ಸಾಗರ
* ಪಂಡಿತ ಭಾಸ್ಕರ ಹೆಗಡೆ ಮುತ್ತಿಗೆ-ಸಾಗರ
* ಶ್ರೀ ಅರವಿಂದ ನಾಝುರೆ-ಶಿವಮೊಗ್ಗ
* ಉಸ್ತಾದ್ ನೂರ್ ಸಾಬ್, ಮಲ್ಲಾಪುರ-ಶಿವಮೊಗ್ಗ
* ಶ್ರೀ ಅಣ್ಣಪ್ಪ ಶಿವಮೊಗ್ಗ
* ಶ್ರೀ ಚೇತನ್ ಸಾಗರ
* ಶ್ರೀ ಗಣಪತಿ ಹೆಗಡೆ-ಸಾಗರ
* ಶ್ರೀ ನಿತಿನ್.ವಿ. ಕುಂಸಿ, ಸಾಗರ
* ಶ್ರೀ ರವಿಶಂಕರ-ಭದ್ರಾವತಿ
* ಶ್ರೀ ರಾಘವೇಂದ್ರ ಪ್ರಭು-ಶಿವಮೊಗ್ಗ
* ಶ್ರೀ ವಸಂತ ಬಾಂಬೊರೆ-ಸೊರಬ
* ಶ್ರೀ ಸತೀಶ್ ಹೆಗಡೆ-ಬಸೂರು, ಸೊರಬ ತಾ.
* ಶ್ರೀ ವಿಜಯ ಕುಮಾರ.ಬಿ.ಎನ್. ಸೊರಬ
* ಶ್ರೀ ಸುಬ್ರಹ್ಮಣ್ಯ ಹೆಗಡೆ-ಮಂಗಳೂರು ಸೊರಬ ತಾ.
* ಶ್ರೀ ಸಂತೋಷ ಆರ್.ಹೆಗಡೆ-ಸಾಗರ
* ಶ್ರೀ ಸುರೇಂದ್ರನಾಥ್-ಸಾಗರ
* ಶ್ರೀ ಶ್ರೀಕಾಂತ ಕಾಳಮಂಜಿ-ಕಾರ್ಗಲ್, ಸಾಗರ ತಾ.
* ಶ್ರೀ ಸಂದೇಶ್ ಭಟ್-ಸಾಗರ
* ಶ್ರೀ ಉಲ್ಲಾಸ್ ಶಾನ್‌ಭಾಗ್-ಸಾಗರ
* ಶ್ರೀ ವಿಶ್ವಾಸ-ಹೆಗ್ಗೋಡು ಸಾಗರ ತಾ.
* ಶ್ರೀ ವಿಶ್ವಾಸ -ಸಾಗರ
* ಶ್ರೀ ವಿನಾಯಕ ಭಟ್-ಸಾಗರ
* ಶ್ರೀ ವಾದಿರಾಜ ದಂಡಾಪುರ-ಧಾರವಾಡ(ತೀರ್ಥಹಳ್ಳಿ)
* ಶ್ರೀ ಶೌರಿ ನಂದೀತಳೆ, ಸಾಗರ ತಾ.
* ಶ್ರೀ ಯೋಗೀಶ್ ಭಟ್-ಶಿರವಂತೆ, ಸಾಗರ ತಾ.

**ವಯಲಿನ್ ವಾದಕರು**

* ಪಂಡಿತ ಬಿ.ನಾರಾಯಣಪ್ಪನವರು–ಸೊರಬ
* ಶ್ರೀ ರವಿ ಮಳಗಿ–ಶಿವಮೊಗ್ಗ
* ಶ್ರೀ ಯೋಗೀಶ್ ಭಟ್–ಶಿರವಂತೆ, ಸಾಗರ ತಾ.

**ಶಹನಾಯಿ ವಾದಕರು**

* ಶ್ರೀ ರಾಮಣ್ಣ ಭಜಂತ್ರಿ–ಆನವಟ್ಟಿ, ಸೊರಬ ತಾ.

**ಸಿತಾರ ವಾದಕರು**

* ಶ್ರೀ ವಸಂತರಾವ್ ಜೋತಾಡಿ–ಸೊರಬ

**ಹಾರ್ಮೋನಿಯಂ ವಾದಕರು**

* ಶ್ರೀ ಶಿವಕುಮಾರ ಮಹಂತ–ಶಿವಮೊಗ್ಗ
* ಶ್ರೀಮತಿ ವಸುಧಾ ಶರ್ಮ–ಸಾಗರ
* ಶ್ರೀಮತಿ ನೀತಾ ಬೆಳೆಯೂರು

**ಬಾನ್ಸುರಿ ವಾದಕರು**

೧. ಶ್ರೀ ನವೀನ ಶರ್ಮ

## ೬.೩ ಪ್ರಮುಖ ಸಂಗೀತ ಕಲಾವಿದರು

### ಗ್ವಾಲಿಯರ್ ಘರಾಣೆ



**ಪಂಡಿತ ಗುರುಶಾಂತ ಗವಾಯಿಗಳು, ಆನವಟ್ಟಿ**

ಶಿವಮೊಗ್ಗ ಜಿಲ್ಲೆಯಲ್ಲಿ ಪ್ರಪ್ರಥಮವಾಗಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಪರಿಚಯಿಸಿದವರು 'ಗಾಯನಚತುರ' ಪಂಡಿತ ಗುರುಶಾಂತ ಗವಾಯಿಗಳು ಎಂದರೆ ತಪ್ಪಾಗಲಾರದು. ಜಿಲ್ಲೆಯ ಇತಿಹಾಸದ ಪುಟಗಳನ್ನು ತೆರೆದು ನೋಡಿದಾಗ ಇವರ ಕಾಲಮಾನದ ಮುಂಚೆಯೇ ಇಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವಿತ್ತು ಎಂಬುದಕ್ಕೆ ಇಲ್ಲಿಯವರೆಗೂ ಯಾವ ದಾಖಲೆಗಳೂ ಇಲ್ಲ.

ಚಿಕ್ಕ ವಯಸ್ಸಿನಲ್ಲೇ ಮೈಲಿ ಬೇನೆಯಿಂದ ಕಣ್ಣಿನ ದೃಷ್ಟಿಯನ್ನು ಕಳೆದುಕೊಂಡು ಹಾಗೆಯೇ ತಂದೆ ತಾಯಿಯರನ್ನೂ ಕಳೆದುಕೊಂಡು ಇನ್ನೊಬ್ಬರ ಆಶ್ರಯದಲ್ಲೇ ತಮ್ಮ ಕಲಾಜೀವನವನ್ನು ಸಾಗಿಸಿದ ದಿವಂಗತ ಗಾಯನಚತುರ ಪಂಡಿತ ಗುರುಶಾಂತ ಗವಾಯಿಗಳು ಪಂಡಿತ ಪಂಚಾಕ್ಷರಿ ಗವಾಯಿಗಳವರ ಶಿಷ್ಯ ದಿ. ಪಂಡಿತ ಜಯದೇವ ಗವಾಯಿಗಳ ಶಿಷ್ಯರು. ಹಾವೇರಿ ಜಿಲ್ಲೆಯ ದೇವಿಹೊಸೂರಿನಲ್ಲಿ ಗುರುಶಾಂತ ಗವಾಯಿಗಳು ದಿ. ಪಂಡಿತ ಜಯದೇವ ಗವಾಯಿಗಳಲ್ಲಿ ೧೨ ವರ್ಷಗಳ ಕಾಲ ಕಠಿಣ ಪರಿಶ್ರಮದಿಂದ ಗುರುಕುಲ ಪದ್ಧತಿಯಲ್ಲಿ ಉಭಯ ಗಾಯನ ಪದ್ಧತಿ (ಹಿಂದೂಸ್ತಾನಿ ಹಾಗೂ ಕರ್ನಾಟಕ) ಸಂಗೀತವನ್ನು ಕಲಿತರು. ದೃಷ್ಟಿ ಕಳೆದುಕೊಂಡ ಗುರುಶಾಂತರಿಗೆ ಮೌಖಿಕವಾಗಿ ನೀಡಿದ ಮೊದಲ ಶಿಕ್ಷಣ ಕರ್ನಾಟಕ ಸಂಗೀತವಾಗಿತ್ತು. ಅನೇಕ ವರ್ಣಗಳು, ನೂರಾರು ಕೀರ್ತನೆಗಳನ್ನು ಕಲಿತ ನಂತರ ಹಿಂದೂಸ್ತಾನಿ ಸಂಗೀತವನ್ನು ಹಾಗೂ ಅನೇಕ ವಾದ್ಯಗಳನ್ನು ನುಡಿಸುವುದನ್ನೂ ಇವರು ಕಲಿತರು.

೧೯೨೦-೩೦ರ ಕಾಲದಲ್ಲಿ ಮೊದಲು ಗುರುಶಾಂತ ಗವಾಯಿಗಳು ಸಾಗರಕ್ಕೆ ಬಂದು ಶ್ರೀ ಶಾರದಾ ಸಂಗೀತ ಪಾಠಶಾಲೆಯನ್ನು ಹಾಲಗಳಲೆ ಪಂಡಿತರ ಮನೆಯ ಮಹಡಿಯಲ್ಲಿ ಸ್ಥಾಪಿಸಿದರು. ಹಲವಾರು ಶಿಷ್ಯರಿಗೆ ಇಲ್ಲಿ ಪಾಠ ಮಾಡಿದರು ಎಂಬುದು ತಿಳಿದುಬರುತ್ತದೆ. ಸಾಗರದಲ್ಲಿ ಹಲವಾರು ವರ್ಷ ಪಾಠಶಾಲೆಯನ್ನು ನಡೆಸಿದರು. ಕೆಲವು ಸಮಯದ ನಂತರ ಸಮೀಪದ ಸೊರಬದಲ್ಲೂ ಸಂಗೀತ ಪಾಠಶಾಲೆಯನ್ನು ಪ್ರಾರಂಭಿಸಬೇಕೆಂದು ನಿರ್ಧರಿಸಿ, ೧೯೪೫ರಲ್ಲಿ ಸೊರಬದಲ್ಲಿ ಸಂಗೀತ ಪಾಠಶಾಲೆಯನ್ನು ಪ್ರಾರಂಭಿಸಿದರು. ಇಲ್ಲಿಯೂ ೩೦ಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಸಂಗೀತಪಾಠ ಮಾಡಿದರು. ಇದೇ ರೀತಿ ೩-೪ ವರ್ಷದ ನಂತರ ಶಿರಾಳಕೊಪ್ಪದಲ್ಲೂ ತಮ್ಮ ಪಾಠಶಾಲೆಯನ್ನು ಪ್ರಾರಂಭಿಸಿದರು. ಸೊರಬದಲ್ಲಿ ಇರುವಾಗಲೇ ಹಲವು ನಾಟಕಗಳಿಗೆ ನಿರ್ದೇಶನ ಮಾಡಿ ನಾಟಕ ರಂಗದಲ್ಲಿ ಪಂ. ಗುರುಶಾಂತರು ಹೆಸರುವಾಸಿಯಾಗಿದ್ದರು. ಇದೇ ರೀತಿ ಶಿರಾಳಕೊಪ್ಪದಲ್ಲೂ ನಾಟಕ ತರಬೇತಿ ನೀಡಿದರು. ಕಾಲಾನಂತರ ಪಂ. ಗುರುಶಾಂತ ಗವಾಯಿಗಳು ಸೊರಬ ತಾಲ್ಲೂಕಿನ ಆನವಟ್ಟಿಗೆ ಬಂದು ಖಾಯಂ ಆಗಿ ನೆಲೆಸಿದರು.

ಉಭಯಗಾನ ವಾದನ ವಿಶಾರದರಾದ ಪಂ. ಗುರುಶಾಂತರು ೧೯೩೮ರಲ್ಲಿ ಹುಬ್ಬಳ್ಳಿಯಲ್ಲಿ ಜರುಗಿದ ವೀರಶೈವ ಮಹಾಮಂಡಳಿಯ ಸಭೆಯಲ್ಲಿ ಪಂಡಿತ ಪಂಚಾಕ್ಷರ ಬುವಾರವರಿಂದ "ಗಾಯನಚತುರ" ಎಂಬ ಬಿರುದನ್ನು ಪಡೆದರು. ನಂತರ "ವೇದಮೂರ್ತಿ", "ಉಭಯಗಾನ ವಿಶಾರದ" ಮುಂತಾದ ಬಿರುದುಗಳನ್ನೂ ಪಡೆದರು. ಶಿವಮೊಗ್ಗ ಜಿಲ್ಲೆಯ ಸಾಗರ, ಸೊರಬ, ಆನವಟ್ಟಿ, ಶಿರಾಳಕೊಪ್ಪ, ಕುಪ್ಪಗಡ್ಡೆ, ಕೆರೆಹಳ್ಳಿ ಹೀಗೆ ಹಲವು ಭಾಗಗಳಲ್ಲಿ ಸಂಗೀತ ಪಾಠಶಾಲೆಯನ್ನು ಆರಂಭಿಸಿ ನೂರಾರು ವಿದ್ಯಾರ್ಥಿಗಳಿಗೆ ಸಂಗೀತ ಪಾಠ ಕಲಿಸಿದ ಶ್ರೇಯಸ್ಸು ಪಂ.ಗುರುಶಾಂತ ಗವಾಯಿಗಳಿಗೆ ಸಲ್ಲುತ್ತದೆ.

ಇಂತಹ ಗ್ವಾಲಿಯರ್ ಘರಾಣೆಯ ಮಹಾನ್ ಸಂಗೀತಗಾರರಾದ ಪಂ.ಗುರುಶಾಂತ ಗವಾಯಿಗಳು ೧೯೭೨ರ ಜುಲೈ ತಿಂಗಳಿನಲ್ಲಿ ಲಿಂಗೈಕ್ಯರಾದರು. ಇವರ ಅಪಾರ ಶಿಷ್ಯವೃಂದದಲ್ಲಿ ಪಂ. ನಾರಾಯಣಪ್ಪ ಸೊರಬ, ಪಂ. ಇಂದೂಧರ ಪೂಜಾರರವರು ಪ್ರಮುಖರು. ಇಂದಿಗೂ ಸೊರಬದಲ್ಲಿ ಇವರ ಪುಣ್ಯತಿಥಿಯಂದು ಅಹೋರಾತ್ರಿ ಸಂಗೀತ ಕಾರ್ಯಕ್ರಮಗಳು ನಡೆದುಕೊಂಡು ಬಂದಿದೆ.

**ಪಂಡಿತ ಬಿ.ನಾರಾಯಣಪ್ಪನವರು, ಸೊರಬ.**

ಬಹುಮುಖ ಪ್ರತಿಭೆ ಗಾಯನ ಚತುರ ದಿ। ಹೆಚ್.ಜಿ.ಗುರುಶಾಂತ ಗವಾಯಿಗಳವರ ಪ್ರಮುಖ ಶಿಷ್ಯರಾದ ಪಂ. ಬಿ.ನಾರಾಯಣಪ್ಪನವರು ೧೪.೧೦.೧೯೩೧ರಲ್ಲಿ ಬೆನ್ನೂರು ನಾಗಪ್ಪ ಮತ್ತು ಗಂಗೂಬಾಯಿಯವರ ತೃತೀಯ ಪುತ್ರರಾಗಿ ಜನಿಸಿದರು. ಚಿಕ್ಕ ವಯಸ್ಸಿನಿಂದಲೇ ಸಂಗೀತದ ಆಸಕ್ತಿಯನ್ನು ಇಟ್ಟುಕೊಂಡ ಇವರಿಗೆ ಇವರ ತಂದೆಯವರೇ ಮೊದಲ ಸಂಗೀತದ ಗುರುಗಳು. ಇವರ ತಂದೆ ಸೊರಬದ ಬಾಲಕೀಯರ ಪ್ರಾಥಮಿಕ ಶಾಲೆಯಲ್ಲಿ ಸಂಗೀತ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದರು.

ಪಂ. ನಾರಾಯಣಪ್ಪನವರು ೧೯೪೫ರಂದು ಪಂ. ಹೆಚ್.ಜಿ.ಗುರುಶಾಂತ ಗವಾಯಿಗಳಲ್ಲಿ ಸಂಗೀತ ಪಾಠ ಪ್ರಾರಂಭಿಸಿದರು. ಸಂಗೀತ ಪಾಠಶಾಲೆಯ ಶುಲ್ಕವನ್ನೂ ಬರಿಸದ ಕಷ್ಟಕರವಾದ ಪ್ರಸಂಗಗಳು ಎದುರಾದರೂ ಅವರಿವರ ಧನ ಸಹಾಯದಿಂದ ಇವರು ಸಂಗೀತ ಪಾಠಕ್ಕೆ ಹೋಗುತ್ತಿದ್ದರು. ಪಂ. ಗುರುಶಾಂತ ಗವಾಯಿಗಳವರು ನೀಡಿದ ಕಠಿಣ ಪಾಠಕ್ರಮ, ಪ್ರೀತಿ, ವಾತ್ಸಲ್ಯತೆಯ ಫಲವಾಗಿ ಪಂ.ನಾರಾಯಣಪ್ಪನವರು ಉಭಯ ಸಂಗೀತ ಪದ್ಧತಿಯಲ್ಲೂ ಪ್ರವೀಣರಾದರು. ಗುರುಗಳೊಂದಿಗೆ ಹಲವು ನಾಟಕಗಳಲ್ಲೂ ತಮ್ಮನ್ನು ತಾವು ತೊಡಗಿಸಿಕೊಂಡರು. ಚಾಮಾಸುರ ಹಾಗೂ ರಕ್ತರಾತ್ರಿ ಎಂಬ ಪೌರಾಣಿಕ ನಾಟಕಗಳಿಗೆ ರಾಗ ಸಂಯೋಜನೆ ಮಾಡಿದರು. ಚಾಮಾಸುರ ನಾಟಕದಲ್ಲಿ ಭೂದೇವಿ ಪಾತ್ರ ನಟಿಸಿದರು. ಪಂ. ಗುರುಶಾಂತ ಗವಾಯಿಗಳು ಕೆಲಕಾಲದ ನಂತರ ಶಿರಾಳಕೊಪ್ಪ ಹಾಗೂ ಆನವಟ್ಟಿಗೆ ಹೋಗಿ ನೆಲೆಸಿದಾಗ ಕಾಲ್ನಡಿಗೆಯಲ್ಲೇ ಗುರುವಿದ್ದಲ್ಲಿಗೇ ಹೋಗಿ ಸಂಗೀತಪಾಠ

ಕಲಿತರು. ಸುಮಾರು ೧೫ಕ್ಕೂ ಹೆಚ್ಚು ವರುಷ ಗುರುಗಳೊಂದಿಗೆ ನೆಚ್ಚಿನ ಶಿಷ್ಯನಾಗಿ ಗುರು ಪರಂಪರೆಯಲ್ಲಿ ಸಂಗೀತ ಪಾಠ ಕಲಿತರು.

ಉಭಯ ಗಾಯನ ಪದ್ಧತಿಯ ಗಾಯಕರಾದ ಪಂ. ನಾರಾಯಣಪ್ಪನವರು ಇದರ ಜೊತೆಗೆ ಕರ್ನಾಟಕಿ ಪದ್ಧತಿಯ ಪಿಟೀಲು, ಜಲತರಂಗ, ತಬಲಾ, ಹಾರ್ಮೋನಿಯಂ ಹಾಗೂ ತಾವೇ ಗಿಟಾರನ್ನು ಪರಿಷ್ಕರಿಸಿದ "ನಾರಾಯಣ ವೀಣೆ", ಜೊತೆಗೆ ರುದ್ರವೀಣೆಗೆ ಹೋಲುವ, ವಿಚಿತ್ರ ವೀಣೆ(ಕರ್ನಾಟಕ ಸಂಗೀತದ ಗೋಟು ವಾದ್ಯ) ಇವೆಲ್ಲಾ ವಾದ್ಯಗಳ ವಾದಕರೂ ಆಗಿದ್ದರು.

ವಿಚಿತ್ರ ವೀಣೆ ಕರ್ನಾಟಕದಲ್ಲೇ ಅತೀ ವಿರಳವಾದ ವಾದ್ಯ. ಈ ವಾದ್ಯವನ್ನು ದೂರದ ಮೀರಜಿನ ವಾದ್ಯ ತಯಾರಿಕರಿಂದ ತಂದು ಆರೇಳು ವರ್ಷಗಳ ಕಾಲ ಅಭ್ಯಸಿಸಿ ೧೯೮೮ರ ೩೬ನೇ ವರ್ಷದ ಸೊರಬದ ಸಂಗೀತೋತ್ಸವದಲ್ಲಿ ಈ ವಿಚಿತ್ರ ವೀಣೆಯ ಮೊದಲ ಕಛೇರಿಯನ್ನು ಪದ್ಮಭೂಷಣ ಡಾ. ಗಂಗೂಬಾಯಿ ಹಾನಗಲ್ ಹಾಗೂ ಕರ್ನಾಟಕದ ಮಾಜಿ ಮುಖ್ಯಮಂತ್ರಿ ಶ್ರೀ ಎಸ್. ಬಂಗಾರಪ್ಪನವರ ದಿವ್ಯ ಸಮ್ಮುಖದಲ್ಲಿ ನುಡಿಸಿದರು.

ಪಂ. ನಾರಾಯಣಪ್ಪನವರು ತಮ್ಮ ಗುರುಗಳಾದ ಪಂ. ಗುರುಶಾಂತ ಗವಾಯಿಗಳು ದೈವಾದೀನರಾದ ನಂತರ ೧೯೬೨ರಲ್ಲಿ 'ಸಂಗೀತ ಸೇವಾ ಸಮಿತಿ' ಎಂಬ ಸಂಸ್ಥೆಯನ್ನು ಸೊರಬದಲ್ಲಿ ಸ್ಥಾಪಿಸಿದರು. ಅಂದಿನಿಂದ ಪ್ರತಿವರ್ಷ ಗುರುಗಳ ಪ್ಮಣ್ಯತಿಥಿ ದಿನದಂದು ಅಹೋರಾತ್ರಿ ಸಂಗೀತೋತ್ಸವವನ್ನು ಪ್ರಾರಂಭಿಸಿದರು. ೧೯೬೩ರಿಂದ ಇಲ್ಲಿಯವರೆಗೆ ೨೫೦ಕ್ಕೂ ಹೆಚ್ಚು ಪ್ರಖ್ಯಾತ, ಹಿರಿ, ಕಿರಿಯ ಸಂಗೀತಗಾರರು, ವಾದಕರು ಈ ವೇದಿಕೆಯಲ್ಲಿ ತಮ್ಮ ಸಂಗೀತ ಕಾರ್ಯಕ್ರಮಗಳನ್ನು ನೀಡಿರುತ್ತಾರೆ. ಕಳೆದ ೨೦೧೫ರಲ್ಲಿ ಸಂಗೀತ ಸೇವಾ ಸಮಿತಿ, ಸೊರಬ ತನ್ನ ಸುವರ್ಣ ಶಾಸ್ತ್ರೀಯ ಸಂಗೀತ ಕಾರ್ಯಕ್ರಮವನ್ನು ಅತೀ ವಿಜೃಂಭಣೆಯಿಂದ ಆಚರಿಸಿಕೊಂಡಿತು.

ಸೊರಬ, ಸಾಗರ ತಾಲ್ಲೂಕಿನ ಹಾಗು ಜಿಲ್ಲೆಯ ಸುತ್ತಮುತ್ತಲಿನ ಭಾಗಗಳಲ್ಲಿ ಶಾಸ್ತ್ರೀಯ ಸಂಗೀತವನ್ನು ಉಳಿಸಿ, ಬೆಳೆಸಿದ ಪಂ. ಬಿ.ನಾರಾಯಣಪ್ಪನವರಿಗೆ ಕರ್ನಾಟಕ ರಾಜ್ಯ ಸರ್ಕಾರ ನೀಡುವ ಅತ್ಯುನ್ನತ ಕರ್ನಾಟಕ ರಾಜ್ಯ ಪ್ರಶಸ್ತಿ, ಕಲಾಶ್ರೀ ಪ್ರಶಸ್ತಿ, ಸಂಗೀತ ನೃತ್ಯ ಅಕಾಡೆಮಿ ಪ್ರಶಸ್ತಿ ದೊರಕಿದೆ. ೧೯೯೨ರಲ್ಲಿ ಇವರು ಸಂಗೀತ ಮತ್ತು ನೃತ್ಯ ಅಕಾಡೆಮಿಯ ಸದಸ್ಯರಾಗಿಯೂ ಕಾರ್ಯನಿರ್ವಹಿಸಿದ್ದರು. ೨೦೦೯ರಲ್ಲಿ ಪ್ರೊ. ಎಸ್.ಯು.ಪೋತದಾರ್‌ರವರು ದಿ. ವಿದ್ವಾನ್ ಮಹಾರುದ್ರಪ್ಪ ವಿ.ಪೂಜಾರ ಸ್ಮರಣಾರ್ಥ ಪಂ. ನಾರಾಯಣಪ್ಪನವರಿಗೆ "ಸಂಗೀತ ಕಲಾಬ್ರಹ್ಮ" ಎಂಬ ಪ್ರಶಸ್ತಿ ನೀಡಿ ಗೌರವಿಸಿದ್ದಾರೆ.

ಸೊರಬ ತಾಲ್ಲೂಕು ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಶಾಸ್ತ್ರೀಯ ಸಂಗೀತವನ್ನು ಹುಟ್ಟುಹಾಕಿದ ಗ್ವಾಲಿಯರ್ ಘರಾಣೆಯ ಮಹಾನ್ ಸಂಗೀತಗಾರರಾದ ಪಂ. ಬಿ.ನಾರಾಯಣಪ್ಪನವರು ೨೦೦೯ರಲ್ಲಿ

ದೈವಾಧೀನರಾದರು. ಇವರ ಧರ್ಮಪತ್ನಿ ಶ್ರೀಮತಿ ಸಾವಿತ್ರಿಬಾಯಿಯವರು ಹಾಗು ಪಂಚ ಪಾಂಡವರಂತಿರುವ ಇವರ ಐವರು ಗಂಡು ಮಕ್ಕಳು ಇಂದಿಗೂ ತಂದೆ ಸ್ಥಾಪಿಸಿದ ಸಂಗೀತ ಸೇವಾ ಸಮಿತಿಯನ್ನು ಬೆಳೆಸುತ್ತಿದ್ದಾರೆ. ಪ್ರತಿವರ್ಷ ಅಹೋರಾತ್ರಿ ಸಂಗೀತೋತ್ಸವ ನಡೆಸಿ, ಸಂಗೀತಗಾರರನ್ನು ಸಂಗೀತ ಶ್ರೋತೃಗಳನ್ನು ಉಳಿಸಿ, ಬೆಳೆಸುತ್ತಿದ್ದಾರೆ. ಇವರ ಅಪಾರ ಶಿಷ್ಯವೃಂದದಲ್ಲಿ ಶ್ರೀಮತಿ ಕಮಲಾ ಭಟ್ ಸುಗಾವಿ, ಸುಧೀಂದ್ರ ಬೇಂಗ್ರೆ ಸಿದ್ದಾಪುರ, ರೂಪಾ ಗಡಿಕಟ್ಟೆ, ಸುಭಾಷ್ ಹಾರೇಗೊಪ್ಪ ಹಾಗು ಅಪರ್ಣಾ ಡಿ. ಇತರರು ಪ್ರಮುಖರು.

**ಪಂಡಿತ ಇಂದೂಧರ ಪೂಜಾರ್, ಶಿವಮೊಗ್ಗ**

ಪಂಡಿತ ಇಂದೂಧರ ಹೆಚ್. ಪೂಜಾರರವರು ಮೂಲತಃ ಹಾನಗಲ್ ತಾಲ್ಲೂಕಿನ ಅಕ್ಕಿ ಆಲೂರು ಗ್ರಾಮದವರಾಗಿದ್ದು, ವೃತ್ತಿಯಿಂದ ಕಾಲೇಜಿನ ಉಪನ್ಯಾಸಕರಾಗಿ, ಪ್ರಾಂಶುಪಾಲರಾಗಿ, ಪ್ರವೃತ್ತಿಯಲ್ಲಿ ೧೯೬೮ರಿಂದ ಬೆಂಗಳೂರು ಆಕಾಶವಾಣಿಯ "ಬಿ.ಹೈ" ದರ್ಜೆಯ ಹಿಂದೂಸ್ತಾನಿ ಗಾಯಕರಾಗಿ ಬೆಂಗಳೂರಿನಲ್ಲಿ ನೆಲೆಸಿದವರಾಗಿದ್ದಾರೆ.

೧೯೩೮ರಲ್ಲಿ ಜನಿಸಿದ ಪಂ. ಪೂಜಾರರವರು ಬಾಲ್ಯದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಶ್ರೀ ಪರಶುರಾಮಪ್ಪ ಅವರಲ್ಲಿ, ಮುಂದೆ ಪಂ. ಗುರುಶಾಂತ ಗವಾಯಿಗಳಲ್ಲಿ, ತದನಂತರದಲ್ಲಿ ಶ್ರೀ ಡಿ.ಬಿ. ಹರೀಂದ್ರ ಹಾಗೂ ಧಾರವಾಡದ ಪಂಡಿತ ಚಂದ್ರಶೇಖರ ಪುರಾಣಿಕಮಠದಲ್ಲಿ ಸಂಗೀತದ ಪ್ರೌಢ ಶಿಕ್ಷಣ ಪಡೆದರು. ಪಂಡಿತ ಬಸವರಾಜ ರಾಜಗುರುಗಳಲ್ಲೂ ಸ್ವಲ್ಪಕಾಲ ಸಂಗೀತ ಅಭ್ಯಾಸ ಮಾಡಿರುತ್ತಾರೆ. ಸಮಾಜಶಾಸ್ತ್ರ, ರಾಜ್ಯಶಾಸ್ತ್ರ ಹಾಗೂ ಇಂಗ್ಲಿಷ್ ವಿಷಯಗಳಲ್ಲಿ ಎಂ.ಎ. ಪದವೀಧರರಾದ ಇವರು ಸಂಗೀತ ಪರೀಕ್ಷೆಗಳಾದ ವಿದ್ವತ್ ಹಾಗೂ ಸೀನಿಯರ್ ಪರೀಕ್ಷೆಯಲ್ಲಿ ರಾಜ್ಯಕ್ಕೆ ದ್ವಿತೀಯ ರ್‍ಯಾಂಕ್ ಗಳಿಸಿರುತ್ತಾರೆ.

ಹಿಂದೂಸ್ತಾನಿ ಗಾಯನದ ಜೊತೆಗೆ ಹಾರ್ಮೋನಿಯಂ ವಾದಕರೂ ಆದ ಇವರು ದೇಶದ ಸುಪ್ರಸಿದ್ಧ ಸಂಗೀತಗಾರರಿಗೆ ಹಾರ್ಮೋನಿಯಂ ಸಾಥಿ ನೀಡಿದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಕರ್ನಾಟಕ ಸರ್ಕಾರದ ಸಂಗೀತ, ನೃತ್ಯ ಅಕಾಡೆಮಿಯಿಂದ ೧೯೯೧-೯೨ನೇ ಸಾಲಿನ ಗೌರವ "ಕರ್ನಾಟಕ ಕಲಾತಿಲಕ" ಪ್ರಶಸ್ತಿ ಹಾಗೂ ಸೊರಬದ ಸಂಗೀತ ಸೇವಾ ಸಮಿತಿಯಿಂದ "ಚಂದ್ರಹಾಸ" ಪ್ರಶಸ್ತಿ ಇವರಿಗೆ ದೊರೆತಿದೆ. ಬೆಂಗಳೂರಿನ ವಿಜಯನಗರದಲ್ಲಿ ಶಿವರಂಜಿನಿ ಸಂಗೀತ ವಿದ್ಯಾಲಯದಲ್ಲಿ ಸಂಗೀತಪಾಠ ನಡೆಸುತ್ತಿದ್ದ ಪೂಜಾರರವರು ೨೦೧೫ರಿಂದ ಬೆಂಗಳೂರಿನಿಂದ ಶಿವಮೊಗ್ಗಕ್ಕೆ ಬಂದು ನೆಲೆಸಿರುತ್ತಾರೆ. ಸದ್ಯ ಶಿವಮೊಗ್ಗದಲ್ಲಿ ಕಿರಾಣ ಘರಾಣಾ ಹಾಗೂ ಗ್ವಾಲಿಯರ್ ಘರಾಣೆಯ ಸಂಗೀತ ಶಿಕ್ಷಣವನ್ನು ಹಲವಾರು ವಿದ್ಯಾರ್ಥಿಗಳಿಗೆ ಧಾರೆ ಎರೆಯುತ್ತಿದ್ದಾರೆ. ಇವರ ಸದ್ಯದ ಶಿಷ್ಯರಲ್ಲಿ ಶ್ರೀಮತಿ ರೇಣುಕಾ ಕಾರಂತ, ಶ್ರೀಮತಿ ಸುರೇಖಾ ಜಿ. ಹೆಗಡೆ, ಶ್ರೀ ನಿಖಿಲ್ ಕಾರಂತ ಹಾಗೂ ಶ್ರೀಮತಿ ದೀಪಿಕಾ ಶ್ರೀಕಾಂತ, ಕುಮಾರಿ ಹಂಸಿಣಿ ಪ್ರಮುಖರು.

**ಶ್ರೀ ವೇಣುಗೋಪಾಲ ಶಿವಮೊಗ್ಗ**

ಶಿವಮೊಗ್ಗ ನಗರದ ಹಿರಿಯ ಹಾಗೂ ಪ್ರಮುಖ ಹಿಂದೂಸ್ತಾನಿ ಸಂಗೀತಗಾರರಲ್ಲಿ ಶ್ರೀ ವೇಣುಗೋಪಾಲರವರೂ ಒಬ್ಬರು. ಹುಟ್ಟು ಕುರುಡರಾದ ವೇಣುಗೋಪಾಲರವರು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಗದುಗಿನ ಶ್ರೀ ವೀರೇಶ್ವರ ಪುಣ್ಯಾಶ್ರಮದ ಪದ್ಧತಿಯಲ್ಲಿ ಪಂಡಿತ ಶಿವರಾಜ ಗವಾಯಿಗಳಲ್ಲಿ ಕಲಿತರು. ಪ್ರಸ್ತುತದಲ್ಲಿ ಇವರು ಶಿವಮೊಗ್ಗ ಹಾಗೂ ಸುತ್ತಮುತ್ತಲಿನ ಮಲೆನಾಡಿನ ಪ್ರದೇಶದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಬೆಳೆಸುತ್ತಿರುವ ಖ್ಯಾತ ಸಂಗೀತಗಾರರು.

ಶ್ರೀ ವೇಣುಗೋಪಾಲರವರು ಭದ್ರಾವತಿ ಆಕಾಶವಾಣಿಯ ಹಿಂದೂಸ್ತಾನಿ ಶಾಸ್ತ್ರೀಯ ಗಾಯನ ವಿಭಾಗದಲ್ಲಿ "ಬಿ. ಹೈ" ಹಾಗೂ ಸುಗಮ ಸಂಗೀತ ವಿಭಾಗದಲ್ಲಿ "ಎ" ದರ್ಜೆಯ ಕಲಾವಿದರು. ಇವರ ಗರಡಿಯಲ್ಲಿ ಅನೇಕ ಪ್ರತಿಭಾನ್ವಿತ ಗಾಯಕರು ತಯಾರಾಗಿದ್ದು, ಅವರುಗಳಲ್ಲಿ ಶ್ರೀ ನಾಗರಾಜ ಕದರಮಂಡಳಗಿ, ಶ್ರೀ ಅರುಣ ಹಂಪಿಹೊಳಿ, ಶ್ರೀಮತಿ ರೇಖಾ ಅರುಣ ಹಂಪಿಹೊಳಿ ಹಾಗು ಕು॥ ಶ್ರೀನಿವಾಸ ಹಂಪಿಹೊಳಿ ಪ್ರಮುಖರು.

**ಉಸ್ತಾದ್ ಹುಮಾಯೂನ್ ಎಂ. ಹರಲಾಪುರ, ಶಿವಮೊಗ್ಗ**

ಕಳೆದ ೩೦ ವರ್ಷಗಳಿಂದ ಶಿವಮೊಗ್ಗ ನಗರದಲ್ಲಿ ನೆಲೆಸಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಜಿಲ್ಲೆಯಾದ್ಯಂತ ಬೆಳೆಸಿದವರು ಉಸ್ತಾದ್ ಹುಮಾಯೂನ್ ಎಂ.ಹರಲಾಪುರರವರು. ಇವರು ದಿನಾಂಕ ೦೩.೦೩.೧೯೬೩ರಲ್ಲಿ ಕುಂದಗೋಳ ಸಮೀಪದ ಹರಲಾಪುರದಲ್ಲಿ ಜನಿಸಿದರು. ಇವರ ತಂದೆ ಮೌಲಾಸಾಬ್ ಸಂಗೀತ ಆಸಕ್ತರು. ತಾಯಿ ಹುಸೇನಾಬೀರವರು.

ಬಾಲ್ಯದಿಂದಲೇ ಸಂಗೀತದ ಆಸಕ್ತಿ ಹೊಂದಿದ ಹುಮಾಯೂನರು ಗದಗಿನ ಶ್ರೀ ವೀರೇಶ್ವರ ಪುಣ್ಯಾಶ್ರಮದಲ್ಲಿ ಪಂ. ಪುಟ್ಟರಾಜ ಗವಾಯಿಗಳು ಹಾಗೂ ಪಂ. ಪಕಿರೇಶ್ ಕಣವಿಯವರಲ್ಲಿ ಆಶ್ರಮ ಪರಂಪರೆಯ ಗ್ವಾಲಿಯಾರ್ ಘರಾಣೆಯ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಗುರುಕುಲ ಪದ್ಧತಿಯಲ್ಲಿ ಕಲಿತರು. "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" ಎಂಬ ನಾಣ್ಣುಡಿಯಂತೆ ಸಂಗೀತಕ್ಕಾಗಿ ದುಡಿದ ಹುಮಾಯೂನರು ಗುರುವಿನ ಆಶೀರ್ವಾದದಿಂದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಗಾಯನ ವಿಭಾಗದ ವಿದ್ವತ್ ಹಾಗು ವಿಶಾರದ ಪರೀಕ್ಷೆಗಳಲ್ಲಿ ಉನ್ನತ ಶ್ರೇಣಿಯಲ್ಲಿ ತೇರ್ಗಡೆಯಾದರು.

ಜೀವನೋಪಾಯಕ್ಕೆಂದು ೧೯೮೦ರ ದಶಕದಲ್ಲಿ ಶಿವಮೊಗ್ಗ ನಗರಕ್ಕೆ ಬಂದು ನೆಲಸಿ, ಪಂಡಿತ ಸಂಗಮೇಶ್ವರ ಗವಾಯಿಗಳವರ ಆಶ್ರಮದ ಸಂಗೀತ ಪಾಠಶಾಲೆಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. ಹಾಗೇ ಪಂಡಿತ ಶಿವರಾಜ ಗವಾಯಿಗಳವರ ಪಾಠಶಾಲೆಯಲ್ಲೂ ಸಂಗೀತ ಶಿಕ್ಷಕರಾದರು. ಗುರುಗಳ ಆಶೀರ್ವಾದದಿಂದ ಸಾಗರ, ಸೊರಬ, ಶಿಕಾರಿಪುರ ಹೀಗೆ ಶಿವಮೊಗ್ಗ ಜಿಲ್ಲೆಯ ಹಲವೆಡೆ ಸಂಗೀತ

ಪಾಠಶಾಲೆ ಪ್ರಾರಂಭಿಸಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಜಿಲ್ಲಾದ್ಯಂತ ಬೆಳೆಸಿದರು. ಸದ್ಯ ಸ್ವಂತಃ "ಶ್ರೀ ಗುರುಕೃಪಾ ಗಾನಮಂದಿರ" ಎಂಬ ಪಾಠಶಾಲೆಯನ್ನು ಶಿವಮೊಗ್ಗದಲ್ಲಿ ಪ್ರಾರಂಭಿಸಿ, ನೂರಾರು ವಿದ್ಯಾರ್ಥಿಗಳಿಗೆ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಹಾಗೂ ಸುಗಮ ಸಂಗೀತ ಪಾಠ ಕಲಿಸುತ್ತಿದ್ದಾರೆ.

ದೂರದರ್ಶನ ಹಾಗೂ ಭದ್ರಾವತಿ ಆಕಾಶವಾಣಿಯ 'ಬಿ.ಹೈ' ಗ್ರೇಡ್ ಶ್ರೇಣಿಯ ಕಲಾವಿದರಾದ ಹುಮಾಯೂನರು ಡಾ. ಗಂಗೂಬಾಯಿ ಹಾನಗಲ್ ಸಂಗೀತ ವಿಶ್ವವಿದ್ಯಾಲಯ, ಮೈಸೂರು ಹಾಗೂ ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಶಿಗ್ಗಾವಿಯ ಕಾರ್ಯಕಾರಿ ಸಮಿತಿಯ ಸದಸ್ಯರಾಗಿಯೂ ಕಾರ್ಯನಿರ್ವಹಿಸಿರುತ್ತಾರೆ. ಏಕಕಾಲದಲ್ಲಿ ಎರಡು ವಿಶ್ವವಿದ್ಯಾಲಯದ ಕಾರ್ಯಕಾರಿ ಸಮಿತಿಯ ಸದಸ್ಯರಾದ ಹೆಗ್ಗಳಿಕೆಯು ಇವರಿಗೆ ಸಲ್ಲುತ್ತದೆ.

ಪ್ರಶಸ್ತಿಗಳ ಮಹಾಪೂರವೇ ಹುಮಾಯೂನರಿಗೆ ಹರಿದು ಬಂದಿದ್ದು ಅವುಗಳಲ್ಲಿ 'ಕರ್ನಾಟಕ ಕಲಾಶ್ರೀ', 'ರಮಣಿ ಶ್ರೀಕರಣ', 'ಸಂಗೀತ ನಿಧಿ', 'ಸಂಗೀತ ಸುಧಾರಕ', 'ಸಂಗೀತ ಭ್ರಮರ', 'ಸಂಗೀತ ಪ್ರವೀಣ', 'ಪಂ.ಪುಟ್ಟರಾಜ ಕೃಪಾಭೂಷಣ', 'ಸ್ವರ ಸುಧಾರಕ', 'ಭಾವೈಕ್ಯ ಕೋಗಿಲೆ', 'ಗಾನಶ್ರೀ ಸಮ್ಮಾನ್', 'ಕಲಾಸಂಜೀವಿನಿ', 'ಸಹ್ಯಾದ್ರಿ ಸಂಗೀತ ನಿಧಿ', 'ಶ್ರೀ ಬಿ.ಜಿ.ಎಸ್. ಸಂಗೀತ ಅವಾರ್ಡ್', 'ಶ್ರೀ ಶ್ರೀಶವಿಠ್ಠಲಾನುಗ್ರಹ' ಪ್ರಶಸ್ತಿಗಳು ಪ್ರಮುಖವಾದವುಗಳು.

ಸುಮಾರು ೪೫೦೦ಕ್ಕೂ ಹೆಚ್ಚು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಹಾಗು ಸುಗಮ ಸಂಗೀತ ಕಾರ್ಯಕ್ರಮ ನೀಡಿರುವ ಹೆಗ್ಗಳಿಕೆಯನ್ನು ಪಡೆದ ಉಸ್ತಾದ್ ಹುಮಾಯೂನ್ ಹರಲಾಪುರರು ಸದ್ಯ ಶಿವಮೊಗ್ಗ ಜಿಲ್ಲೆಯ ಉನ್ನತ ಹಾಗೂ ಶ್ರೇಷ್ಠ ಸಂಗೀತಗಾರರಲ್ಲದೇ ಈ ಭಾಗದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಉಳಿಸುತ್ತಿರುವ, ಬೆಳೆಸುತ್ತಿರುವ ಅಪ್ರತಿಮ ಸಾಧಕರೂ ಆಗಿರುತ್ತಾರೆ. ಇವರ ಪುತ್ರರಾದ ಕು। ನೌಷಾಧ್ ಮತ್ತು ಕು। ನಿಷಾಧ್ ಸದ್ಯ ಶಿವಮೊಗ್ಗ ಜಿಲ್ಲೆಯ ಯುವ ಗಾಯಕರಾಗಿ ಹೊರಹೊಮ್ಮುತ್ತಿದ್ದಾರೆ.

**ಶ್ರೀಮತಿ ಕಮಲಾ ಆರ್.ಭಟ್, ಸುಗಾವಿ**

ಶ್ರೀಮತಿ ಕಮಲಾ ಆರ್.ಭಟ್‌ರವರು ಮೂಲತಃ ಉತ್ತರಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕಿನ ಬಿಸಿಲಕೊಪ್ಪದವರು. ಇವರು ಶ್ರೀ ರಾಮಚಂದ್ರ ಭಟ್ ಹಾಗು ಶ್ರೀಮತಿ ಪಾರ್ವತಿ ಭಟ್ ದಂಪತಿಗಳ ಪುತ್ರಿಯಾಗಿ ೨೨.೧೨.೧೯೪೭ರಲ್ಲಿ ಜನಿಸಿದರು. ಚಿಕ್ಕಂದಿನಿಂದಲೇ ಸಂಗೀತದಲ್ಲಿ ಅಪಾರ ಆಸಕ್ತಿ ಹೊಂದಿದ್ದ ಕಮಲಾರವರು ತಮ್ಮ ಪ್ರಾರಂಭಿಕ ಹಿಂದೂಸ್ತಾನಿ ಸಂಗೀತ ಶಿಕ್ಷಣವನ್ನು ಸ್ಥಳೀಯ ಕಲಾವಿದರಿಂದ ಕಲಿತು ಸೀನಿಯರ್ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದರು.

ಶ್ರೀಮತಿ ಕಮಲಾರವರು ಶ್ರೀ ರಘುಪತಿ ಭಟ್‌ರವರನ್ನು ವಿವಾಹವಾದ ನಂತರ ಪತಿಯ ಸಹಾಯ ಹಾಗು ಪ್ರೋತ್ಸಾಹದಿಂದ ಕಡಲತೀರ ಗೋಕರ್ಣದ ಶ್ರೀ ಕಮಲಾಕರ ಭಟ್ಟರಲ್ಲಿ ಆಗ್ರಾ ಘರಾಣೆಯ ಶಾಸ್ತ್ರೀಯ ಸಂಗೀತ ಕಲಿತರು. ತದನಂತರದಲ್ಲಿ ಸೊರಬದ ಪಂಡಿತ ಬಿ. ನಾರಾಯಣಪ್ಪ ನವರಲ್ಲಿ ಸತತ ೧೨ ವರ್ಷಗಳವರೆಗೆ ಗ್ವಾಲಿಯರ್ ಘರಾಣೆಯ ಶಾಸ್ತ್ರೀಯ ಸಂಗೀತ ಕಲಿತು 'ಗಂಡಾ' ಸಮಾರಂಭ ಮಾಡಿಸಿಕೊಂಡು ಇವರ ಮುಖ್ಯ ಶಿಷ್ಯರಾಗಿ ಬೆಳೆದರು.

ಪಂಡಿತ ಬಿ.ನಾರಾಯಣಪ್ಪನವರ ನೆಚ್ಚಿನ ಶಿಷ್ಯರಾದ ಕಮಲಾ ಆರ್. ಭಟ್‌ರವರು ಹಲವು ವರ್ಷಗಳ ಕಾಲ ಸೊರಬದ ಸಂಗೀತ ಸೇವಾ ಸಮಿತಿಯು ನಡೆಸುತ್ತಿದ್ದ 'ನಾದ ಸುರಭಿ ಸಂಗೀತ ವಿದ್ಯಾಲಯ'ದ ಅಧ್ಯಾಪಕಿಯಾಗಿಯೂ ಸೇವೆ ಸಲ್ಲಿಸಿರುತ್ತಾರೆ. ಶಿವಮೊಗ್ಗ ಹಾಗು ಉತ್ತರಕನ್ನಡ ಜಿಲ್ಲೆಯ ಹಾಗು ರಾಜ್ಯಾದ್ಯಂತ ಹಲವು ಪ್ರತಿಷ್ಠಿತ ಸಂಗೀತ ವೇದಿಕೆಗಳಲ್ಲಿ ಹಾಗು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಆಯೋಜಿಸಿದ ಹಲವೆಡೆ ಇವರು ಶಾಸ್ತ್ರೀಯ ಸಂಗೀತ ಕಾರ್ಯಕ್ರಮ ನೀಡಿ, ಜನಮನ್ನಣೆ ಗಳಿಸಿರುತ್ತಾರೆ.

ಭದ್ರಾವತಿ ಆಕಾಶವಾಣಿಯಲ್ಲೂ ಕಮಲಾ ಆರ್. ಭಟ್‌ರವರ ಗಾಯನ ಪ್ರಸಾರವಾಗಿರುತ್ತದೆ. ಇವರ ಸಂಗೀತ ಸಾಧನೆಯನ್ನು ಗುರುತಿಸಿ, ಶಿವಮೊಗ್ಗದ ಲಲಿತಕಲಾ ಕಾಲೇಜು ಶ್ರೀ ಪುರಂದರ ದಾಸರ, ಕನಕದಾಸರ, ತ್ಯಾಗರಾಜರ ಆರಾಧನಾ ಮಹೋತ್ಸವದಲ್ಲಿ ಇವರಿಗೆ "ಗಾಯನ ಶಿರೋಮಣಿ" ಎಂಬ ಬಿರುದು ನೀಡಿ ಗೌರವಿಸಿರುತ್ತಾರೆ.

**ಶ್ರೀಮತಿ ಇಂದುಮತಿ ನೀಲಕಂಠರಾವ್, ಯಲಸಿ**

ಇಂದುಮತಿಯವರು ಶ್ರೀ ತಮ್ಮಣ್ಣ ಜೋಶಿ ಹಾಗು ಶ್ರೀಮತಿ ಕಮಲಾಬಾಯಿ ದಂಪತಿಗಳ ಮಗಳಾಗಿ ೧೯೩೪ರಲ್ಲಿ ಹಾವೇರಿ ಜಿಲ್ಲೆಯ ರಾಣೆಬೆನ್ನೂರಿನಲ್ಲಿ ಜನಿಸಿದರು. ತಮ್ಮ ೮ನೇ ವಯಸ್ಸಿನಲ್ಲಿಯೇ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದಲ್ಲಿ ಸೀನಿಯರ್ ಪರೀಕ್ಷೆಯನ್ನು ಪ್ರಥಮ ದರ್ಜೆಯಲ್ಲಿ ಇವರು ಉತ್ತೀರ್ಣರಾದರು. ಇವರಿಗೆ ಸಂಗೀತದ ಬಗೆಗೆ ಒಲವು ಮೂಡಲು ಇವರ ತಂದೆಯವರ ಪ್ರೋತ್ಸಾಹವೇ ಕಾರಣವಾಗಿತ್ತು.

ಇಂದುಮತಿಯವರು ಶ್ರೀ ಡಿ.ಹೆಚ್.ಕಣೇಕಲ್‌ರವರಲ್ಲಿ ಗ್ವಾಲಿಯರ್ ಘರಾಣೆಯ ಶಾಸ್ತ್ರೀಯ ಸಂಗೀತವನ್ನು ಹಾಗು ಕುಂದಗೋಳದ ಚಿಕ್ಕೋಬರಾವ್‌ರವರಲ್ಲಿ ಸುಗಮ ಸಂಗೀತವನ್ನು ಸುಮಾರು ೧೫ ವರ್ಷಗಳ ಕಾಲ ಕಲಿತರು. ಚಿಕ್ಕ ವಯಸ್ಸಿನಲ್ಲೇ ತಮ್ಮ ತಂದೆಯವರ ಸಹಾಯದೊಂದಿಗೆ ಹಲವೆಡೆ ಸಂಗೀತ ಕಾರ್ಯಕ್ರಮ ನೀಡಿದ ಹೆಗ್ಗಳಿಕೆ ಇವರಿಗಿದೆ. ಸೊರಬ ತಾಲ್ಲೂಕಿನ ಯಲಸಿ ಗ್ರಾಮದ ಶ್ರೀ ನೀಲಕಂಠರಾವ್ ಅವರನ್ನು ೧೯೦೫ರಲ್ಲಿ ಇಂದುಮತಿಯವರು ವಿವಾಹವಾಗಿ ಯಲಸಿಯಲ್ಲಿ ನೆಲೆಸಿದರು.

ಕೆಲವು ಸಮಯದ ನಂತರ ಪತಿಯವರಾದ ಶ್ರೀ ನೀಲಕಂಠರವರ ಸಹಾಯದೊಂದಿಗೆ ಇಂದುಮತಿಯವರು ಸೊರಬದ ಸಂಗೀತ ಸೇವಾ ಸಮಿತಿಯು ನಡೆಸುತ್ತಿದ್ದ 'ನಾದ ಸುರಭಿ ಸಂಗೀತ ವಿದ್ಯಾಲಯ'ದಲ್ಲಿ ಸಂಗೀತ ಅಧ್ಯಾಪಕಿಯಾಗಿಯೂ ಸೇವೆ ಸಲ್ಲಿಸಿದರು. ಹಾಗೆಯೇ ಆನವಟ್ಟಿಯಲ್ಲಿಯೂ ಸಂಗೀತ ಪಾಠಶಾಲೆಯನ್ನು ಪ್ರಾರಂಭಿಸಿದರು. ೧೯೮೦ ಹಾಗು ೯೦ರ ದಶಕದಲ್ಲಿ ಸೊರಬ ಹಾಗು ಸುತ್ತಮುತ್ತಲಿನ ಹಲವೆಡೆ ವಿಶೇಷವಾಗಿ ಗೃಹಿಣಿಯರಿಗಾಗಿಯೇ ಸುಗಮ ಸಂಗೀತ ಹಾಗು ಶಾಸ್ತ್ರೀಯ ಸಂಗೀತ ಪಾಠಶಾಲೆಗಳನ್ನು ಸುದೀರ್ಘವಾಗಿ ನಡೆಸಿಕೊಂಡು ಬಂದ ಬಹು ಬೇಡಿಕೆಯ ಸಂಗೀತ ಶಿಕ್ಷಕಿ ಇವರಾಗಿದ್ದರು.

ಇಂದುಮತಿಯವರ ಸಿರಿಕಂಠದ ನಾದವು ಭದ್ರಾವತಿ ಆಕಾಶವಾಣಿಯಲ್ಲಿ ಬಿತ್ತರವಾಗಿದೆ. ದಾಸರಪದ, ವಚನ ಹಾಗು ಕೀರ್ತನೆ, ಭಾವಗೀತೆಗಳನ್ನು ಸುಶ್ರಾವ್ಯವಾಗಿ ಹಾಡಿ, ಇವರು ತಾಲ್ಲೂಕಿನಾದ್ಯಂತ ಹಲವು ಶಿಷ್ಯರಿಗೆ ಸಂಗೀತ ಶಿಕ್ಷಣ ನೀಡಿ ಬೆಳೆಸಿದ್ದಾರೆ. ಇವರ ಶಿಷ್ಯರಲ್ಲಿ ಸೊರಬ ಪಟ್ಟಣದ ಸ್ಥಳೀಯರಾದ ಶ್ರೀಮತಿ ಅಪರ್ಣಾ, ರೂಪಾ, ವಾಣಿ, ಭಾರತಿ ಬಾಪಟ್, ಪ್ರದೀಪ ಬಾಪಟ್, ದೀಪ್ತಿ ಬಾಪಟ್, ಪುತ್ರಿಯರಾದ ಪೂರ್ಣಿಮಾ, ಜ್ಯೋತಿ ಇತರರು ಪ್ರಮುಖರು. ಸದ್ಯ ಇವರು ತಮ್ಮ ಗ್ರಾಮದಲ್ಲೇ ಮಹಿಳೆಯರಿಗೆ ಸುಗಮ ಸಂಗೀತ ಪಾಠವನ್ನು ಮಾಡುತ್ತಿದ್ದಾರೆ.

## ಆಗ್ರಾ ಘರಾಣೆಯ ವಂಶ ವೃಕ್ಷ

ಉ. ವಿಲಾಯತ್ ಹುಸೇನ್‌ಖಾನ್

ಪಂ. ದಿನಕರ ಕಾಯ್ಕಿಣಿ

ಉ. ಖಾದಿಂ ಹುಸ್ಸೇನ್‌ಖಾನ್

ಪಂ. ಗುರುದತ್ ಹೆಬ್ಬೀಕರ್

ಪಂ. ಮೋಹನರಾವ್ ಚಿಕ್ಕರಮನೆ

ಪಂ. ಎಸ್.ಸಿ.ಆರ್.ಭಟ್

ಪಂ. ಮಹಮೋಪಾಧ್ಯಾಯ

ಪಂ. ಆಚಾರ್ಯ ಕೆ.ಜಿ. ಶಿಂಧೇ

ಪಂ. ಚಿದಾನಂದ ನಗರಕರ್



ಪಂ. ರಾಜಾರಾಮ, ಸೊರಬ



ಶ್ರೀ ರಾಜೇಂದ್ರ ಬಾಳೇಹಳ್ಳಿ

ಪಂಡಿತ ಇಂದೂಧರ ನಿರೋಡಿ



ಶ್ರೀಮತಿ ವಸುಧಾ ಶರ್ಮಾ

**ಪಂಡಿತ ರಾಜಾರಾಮ್ ಸೊರಬ, ಸಾಗರ**

ಪಂಡಿತ ರಾಜಾರಾಮ್ ಸೊರಬರೆಂದೇ ಸಾಗರ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಖ್ಯಾತ ನಾಮರಾದ ಇವರು ಶ್ರೀಮತಿ ತಾರಾಬಾಯಿ ಹಾಗೂ ಶ್ರೀ ಭವಾನಿ ಶಂಕರರಾವ್‌ರವರ ಸುಪುತ್ರರಾಗಿ ೧೯೩೫ರಲ್ಲಿ ಕಾರವಾರದಲ್ಲಿ ಜನಿಸಿದರು. ತಮ್ಮ ಆರನೇ ವಯಸ್ಸಿನಲ್ಲೇ ಸಂಗೀತದ ಸೆಳೆತಕ್ಕೆ ಮಾರು ಹೋಗಿ ಇವರು ಶ್ರೀ ಸೋದೇ ಶಂಕರರಾವ್, ಬೆಂಗಳೂರು ಇವರಲ್ಲಿ ಸಂಗೀತ ಕಲಿಯಲಾರಂಭಿಸಿ ಸಂಗೀತ ಜಗತ್ತಿನಲ್ಲಿ ಅಂಬೆಗಾಲನ್ನಿಟ್ಟರು. ನಂತರ ಬೆಂಗಳೂರಿನ ಪಂಡಿತ ನಾರಾಯಣರಾವ್‌ರಲ್ಲೂ ಸಂಗೀತ ಕಲಿತರು. ೧೯೫೪ರಿಂದ ೧೯೫೭ರವರೆಗೆ ಧಾರವಾಡದ ವಾಳ್ವೇಕರ ಅವರಲ್ಲಿ ಹೆಚ್ಚಿನ ಸಂಗೀತಭ್ಯಾಸ ಮಾಡಿದರು. ತದನಂತರದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಜಗತ್ತಿನ ಅಮೂಲ್ಯ ರತ್ನಗಳಾದ ಪಂಡಿತ ಮೋಹನರಾವ್ ಚಿಕ್ಕರಮನೆ, ಪಂ. ಮಹಮೋಪಾಧ್ಯಾಯರು, ಪಂ. ಚಿದಾನಂದ ನಗರಕರ್, ಉಸ್ತಾದ್ ಬಡೇ ಗುಲಾಂ ಅಲಿಖಾನ್, ಉಸ್ತಾದ್ ವಿಲಾಯತ್ ಹುಸೇನ್ ಖಾನ್‌ರಂತವರಲ್ಲಿ ಸಂಗೀತ ಅಭ್ಯಾಸ ಮಾಡುವ ಅವಕಾಶ ಇವರಿಗೆ ದೊರಕಿದ್ದು ಇವರ ಸೌಭಾಗ್ಯವೆಂದೇ ತಿಳಿದುಬರುತ್ತದೆ.

ಇಂತಹ ಸಂಗೀತ ದಿಗ್ಗಜರಲ್ಲಿ ಸಂಗೀತಪಾಠ ಕಲಿತು, ಸಾಗರ ಪ್ರಾಂತ್ಯದಲ್ಲಿ ಸಂಗೀತ ಬೆಳೆಸಿದ ಪಂಡಿತ. ರಾಜಾರಾಮ್ ಸೊರಬ ನಮ್ಮ ಊರಿನವರು ಎನ್ನುವುದೇ ಅತೀ ಗೌರವದ, ಸಂತೋಷದ ವಿಷಯ ಎಂಬುದು ಸಾಗರದ ಸಂಗೀತ ಪ್ರೇಮಿಗಳ, ಸಂಗೀತ ಕಲಾರಾಧಕರ ಅನಿಸಿಕೆಯಾಗಿದೆ.

ಉಸ್ತಾದ್ ಖಾದಿಂ ಹುಸೇನ್ ಖಾನ್ ಹಾಗೂ ಉಸ್ತಾದ್ ಮೋಯಿನುದ್ದೀನ್ ಡಾಗರ್ ಅವರಲ್ಲಿ ಅನುಕ್ರಮವಾಗಿ ಆಗ್ರಾ ಘರಾಣೆಯ ನೋ, ತೋಂ ಪದ್ಧತಿಯ ಸಂಗೀತ ಶಿಕ್ಷಣ ಪಡೆದವರು ಇವರಾಗಿದ್ದಾರೆ. ಅದಲ್ಲದೇ ಬನಾರಸ್‌ನಲ್ಲಿ ಶ್ರೀಮತಿ ಕೃಷ್ಣಾಬಾಯಿ ಕಲ್ಯಾಣಪುರ ಹಾಗೂ ಪಂಡಿತ ಓಂಕಾರನಾಥ ಅವರಿಂದ ಸಂಗೀತಪಾಠ ಹಾಗೂ "ಮಾಸ್ಟರ್ ಆಫ್ ಮ್ಯೂಜಿಕ್" ಸನದು ಸಂಪಾದಿಸಿದ ಹೆಗ್ಗಳಿಕೆ ಇವರಿಗಿದೆ. ಇವರು ೧೯೬೧ರಲ್ಲೇ ಆಕಾಶವಾಣಿಯ ಬಿ-ಹೈ ಕಲಾವಿದರು.

ಸಂಗೀತದ ಬೆನ್ನುಹತ್ತಿ ಉತ್ತರ ಭಾರತದ ಒರಿಸ್ಸಾದಲ್ಲಿ ನೆಲೆಸಿದ ರಾಜಾರಾಮರು ೧೯೬೭ರ ಒಂದು ಭೀಕರ ರಸ್ತೆ ಅಪಘಾತಕ್ಕೀಡಾಗಿ ಹಲವು ಕಾಲ ಹಾಸಿಗೆ ಹಿಡಿದರು. ಅನಾರೋಗ್ಯದಿಂದ ಸಂಗೀತ ಪಾಠ ಅಭ್ಯಾಸ ಅಲ್ಲೇ ನಿಂತಿತು. ಗುಣಮುಖರಾದ ನಂತರ ಸಂಗೀತ ಪ್ರಪಂಚದಿಂದ ತುಸು ದೂರವಿದ್ದು, ಮಡದಿ ಲಲಿತಾರೊಂದಿಗೆ ಬೆಂಗಳೂರಿಗೆ ಬಂದು ನೆಲೆಸಿದರು. ಜೀವನೋಪಾಯ ಕ್ಕೆಂದು ಹಲವಾರು ಕ್ಷೇತ್ರಗಳಲ್ಲಿ ದುಡಿದರು. ಆದರೆ ಸಂಗೀತದ ಗುಂಗು ಇವರನ್ನು ಬಿಡಲಿಲ್ಲ. ಮನೆಯಲ್ಲೇ ವಿರಾಮದ ಸಮಯದಲ್ಲಿ ಸಂಗೀತಾಭ್ಯಾಸ ಮಾಡಿಕೊಳ್ಳುತ್ತಿದ್ದರು. ೧೯೮೪ರಲ್ಲಿ

ಬೆಂಗಳೂರನ್ನು ಬಿಟ್ಟು ಸಾಗರಕ್ಕೆ ಬಂದು ನೆಲೆಸಿದ ರಾಜಾರಾಮರು ಮನೆಯಲ್ಲೇ ಸಂಗೀತಪಾಠ ಪ್ರಾರಂಭಿಸಿದರು. ೧೯೬೭ರಲ್ಲಿ ಸಂಭವಿಸಿದ ದುರ್ಘಟನೆ ಇವರ ಜೀವನದ ದಿಕ್ಕನ್ನೇ ಬದಲಿಸಿತು. ನಾಡಿಗೆ ದಕ್ಕಬೇಕಾಗಿದ್ದ ಒಬ್ಬ ಅದ್ಭುತ ಕಲಾವಿದ ಎಲೆಮರೆಯ ಹೂವಿನಂತೆ ಬಾಳುವಂತಾಗಿಸಿತು. ಜೀವನದ ಏರಿಳಿತವನ್ನು ಸಂತೋಷದಿಂದ, ಧೈರ್ಯದಿಂದ ಎದುರಿಸಿದ ಇವರು ಜೀವನದುದ್ದಕ್ಕೂ ಸಂಗೀತವನ್ನು ಪ್ರಚಾರ ಮಾಡುತ್ತಾ, ಸಂಗೀತ ಸುಧೆಯನ್ನು ಹರಡಿಸಿದವರು.

ಸಾಗರದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಹುಟ್ಟು ಹಾಕಿದ ರಾಜಾರಾಮ ಸೊರಬರವರು ೦೪.೦೬.೨೦೧೬ರಂದು ಸಂಗೀತ ಶಾರದೆಯ ಮಡಿಲಲ್ಲಿ ಲೀನರಾಗಿ, ಸಾಗರದ ಸಂಗೀತ ಕ್ಷೇತ್ರದಲ್ಲಿ ಅಜರಾಮರಾಗಿ ಉಳಿದರು. ಇವರಲ್ಲಿ ಸಂಗೀತ ಪಾಠ ಕಲಿತು, ಬೆಳಕಿಗೆ ಬಂದವರಲ್ಲಿ ಶ್ರೀ ರಾಜೇಂದ್ರ ಬಾಳೆಹಳ್ಳಿಯವರು ಪ್ರಮುಖರು. ಹಿಂದೂಸ್ತಾನಿ ಸಂಗೀತಕ್ಕೆ ಪಂಡಿತ ರಾಜರಾಮ್ ಸೊರಬರ ಕೊಡುಗೆ ಅಪಾರ. ಇವರನ್ನು ಸಾಗರದ ಸಂಗೀತ ಲೋಕ ಸದಾ ನೆನೆಯುತ್ತಿದೆ.

**ಪಂಡಿತ ಇಂದೂಧರ ನಿರೋಡಿ, ಶಿವಮೊಗ್ಗ**

ಮೂಲತಃ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನವರಾದ ಪಂಡಿತ ಇಂದೂಧರ ನಿರೋಡಿನವರು ಆಗ್ರಾ ಘರಾಣೆಯ ಪ್ರಸಿದ್ಧ ಹಿಂದೂಸ್ತಾನಿ ಗಾಯಕರಾಗಿದ್ದು ಪೂನಾ, ಮುಂಬೈ, ಧಾರವಾಡಗಳಲ್ಲಿ ತಮ್ಮ ಬಹುತೇಕ ವರ್ಷಗಳನ್ನು ಕಳೆದರು. ತದನಂತರ ೧೯೯೭ರಿಂದ ೨೦೦೨ರವರೆಗೆ ಮಲೆನಾಡಿನ ಶಿವಮೊಗ್ಗ ನಗರದಲ್ಲಿ ನೆಲೆಸಿ, ಆಗ್ರಾ ಘರಾಣೆಯ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಬೆಳೆಸಿದ ಕೆಲವೇ ಕೆಲವರುಗಳಲ್ಲಿ ಇವರು ಪ್ರಮುಖರು.

೧೧.೦೭.೧೯೩೫ರಂದು ಪುತ್ತೂರಿನಲ್ಲಿ ಜನಿಸಿದ ಪಂ. ನಿರೋಡಿರವರು ಬಾಲ್ಯದಿಂದಲೇ ಸಂಗೀತದ ಪ್ರೇಮಿಗಳಾಗಿದ್ದರು. ಮೊದಲಿಗೆ ಗವಾಯಿ ಶ್ರೀಪತ್ರೆ ರಾಮದಾಸ್, ಉಡುಪಿಯವರಲ್ಲಿ ತಮ್ಮ ಸಂಗೀತಾಭ್ಯಾಸ ಪ್ರಾರಂಭಿಸಿ, ತದನಂತರ ೧೯೫೧ರಿಂದ ಮುಂಬೈನಲ್ಲಿ ಸಂಗೀತ ದಿಗ್ಗಜರಾದ ಪಂ. ಗುರುದತ್ ಹೆಬ್ಬೀಕರ್, ಶ್ರೀ ಎಸ್.ಸಿ.ಆರ್.ಭಟ್, ಶ್ರೀ ಆಚಾರ್ಯ ಕೆ.ಜಿ. ಶಿಂಧೇ, ಪಂ. ದಿನಕರ ಕಾಯ್ಕಿಣಿ, ಪಂ. ಚಿದಾನಂದ ನಾಗರಕರ್‌ರಂತವರಲ್ಲಿ ೨೦ ವರ್ಷಗಳ ಕಾಲ ಆಗ್ರಾ ಘರಾಣೆಯ ಮಡಿವಂತಿಕೆಯ, ಕಟ್ಟು-ನಿಟ್ಟಿನ ಶಾಸ್ತ್ರೀಯ ಸಂಗೀತವನ್ನು ಕಲಿತರು.

೧೯೫೫ರಲ್ಲಿ ಪಂ. ನಿರೋಡಿಯವರು ತಮ್ಮ ೨೦ನೇ ವಯಸ್ಸಿನಲ್ಲೇ ಆಕಾಶವಾಣಿ ಆಯೋಜಿಸಿದ್ದ ಅಖಿಲ ಭಾರತ ಶಾಸ್ತ್ರೀಯ ಸಂಗೀತ ಗಾಯನ ಸ್ಪರ್ಧೆಯಲ್ಲಿ ದೇಶಕ್ಕೆ ಮೊದಲ ಸ್ಥಾನ ಪಡೆದು, ಅಂದಿನ ರಾಷ್ಟ್ರಪತಿಗಳಾದ ಡಾ. ಬಾಬುರಾಜೇಂದ್ರ ಪ್ರಸಾದರವರಿಂದ ಬಹುಮಾನ ಪಡೆದರು. ಸಂಗೀತ ಪ್ರಪಂಚಕ್ಕೆ ನೀಡಿದ ಅಮೂಲ್ಯ ಕೊಡುಗೆಯನ್ನು ಆಧರಿಸಿ ಪಂ. ನಿರೋಡಿಯವರಿಗೆ ೨೦೦೫ರಲ್ಲಿ ಕರ್ನಾಟಕ ಸಂಗೀತ, ನೃತ್ಯ ಅಕಾಡೆಮಿಯಿಂದ "ಗೌರವ ಪ್ರಶಸ್ತಿ" ಹಾಗೂ ೨೦೦೩ರಲ್ಲಿ

ಪುರಂದರ ತ್ಯಾಗರಾಜರ ಮತ್ತು ವಾಗ್ಗೇಯಕಾರರ ಆರಾಧನೋತ್ಸವ ಸಮಿತಿ ಮೈಸೂರುರವರ "ಸಂಗೀತ ಕಲಾ ತಪಸ್ವಿ" ಪ್ರಶಸ್ತಿ, ೨೦೦೮ರಲ್ಲಿ ಮೈಸೂರು ಜಿಲ್ಲೆಯ ರಾಜ್ಯೋತ್ಸವ ಪ್ರಶಸ್ತಿ, ೨೦೧೫ರಲ್ಲಿ ಸವಾಯಿ ಗಂಧರ್ವ ಪ್ರಶಸ್ತಿ, ಗಾನಭಾರತಿ, ಸಪ್ತಸ್ವರ ಬಳಗ, ಸ್ವರಸಂಕುಲ, ಸಂಗೀತ ಕಲಾಕಾರ ಮಂಡಳಿಯಿಂದ ಹಲವು ಪ್ರಶಸ್ತಿಗಳು ಇವರಿಗೆ ದೊರೆತಿವೆ.

೧೯೫೫ರಿಂದ ದೂರದರ್ಶನ ಹಾಗೂ ಆಕಾಶವಾಣಿಯ 'ಎ'ಶ್ರೇಣಿಯ(Top Grade) ಕಲಾವಿದರಾದ ಪಂ. ನಿರೋಡಿಯವರು ವೃತ್ತಿಯಿಂದ LICಯ ಉನ್ನತ ದರ್ಜೆ ನೌಕರರಾಗಿದ್ದು ೧೯೯೫ರಲ್ಲಿ ನಿವೃತ್ತಿ ಹೊಂದಿ ಸಂಗೀತದಲ್ಲೇ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ. ೧೯೭೭ರಿಂದ ೨೦೦೨ರವರೆಗೆ ಶಿವಮೊಗ್ಗ ನಗರದಲ್ಲಿ ನೆಲೆಸಿ ಹಲವು ಸಂಗೀತಗಾರರಿಗೆ ತಮ್ಮ ಆಗ್ರಾ ಘರಾಣೆಯ ಸಂಗೀತವನ್ನು ಧಾರೆ ಎರೆದಿದ್ದಾರೆ. ಇವರ ಅಪಾರ ಶಿಷ್ಯವೃಂದದಲ್ಲಿ ಸಾಗರದ ವಿದೂಷಿ ವಸುಧಾ ಶರ್ಮರವರು ಪ್ರಮುಖರು. ಸದ್ಯ ಪಂ. ಇಂದೂಧರ ನಿರೋಡಿಯವರು ಸಾಂಸ್ಕೃತಿಕ ನಗರಿ ಮೈಸೂರಿನಲ್ಲಿ ವಾಸವಾಗಿದ್ದು, ಇಲ್ಲಿಯೂ ಆಗ್ರಾ ಘರಾಣೆಯ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಸ್ಥಳೀಯ ಶಿಷ್ಯರೊಂದಿಗೆ ಬೆಳೆಸುತ್ತಿದ್ದಾರೆ.

**ಶ್ರೀಮತಿ ವಸುಧಾ ಶರ್ಮ ಹಳೇಇಕ್ಕೇರಿ, ಸಾಗರ**

ಸಾಗರ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಕಳೆದ ೨೦ ವರ್ಷಗಳಲ್ಲಿ ಹಿಂದುಸ್ತಾನಿ ಶಾಸ್ತ್ರೀಯ ಸಂಗೀತವನ್ನು ಬೆಳೆಸಿದ ಕೆಲವೇ ಕೆಲವು ಸಂಗೀತಗಾರರಲ್ಲಿ ವಿದೂಷಿ ವಸುಧಾ ಶರ್ಮರವರು ಪ್ರಮುಖರು. ಇವರು ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕಿನ ಗೋಳಗೋಡಿನಲ್ಲಿ ೧೯೭೭ರಲ್ಲಿ ಜನಿಸಿದರು. ತಂದೆ ಹಾರ್ಮೋನಿಯಂ ವಾದಕರಾದ ಶ್ರೀ ಗಜಾನನ ಹೆಗಡೆಯವರು ಹಾಗೂ ತಾಯಿ ಮೀನಾಕ್ಷಿಯವರು. ಸಂಗೀತ ಪರಂಪರೆಯಿಂದ ಬಂದ ಕುಟುಂಬ ಇವರಾಗಿದ್ದು ಹುಟ್ಟಿನಿಂದಲೇ ಸಂಗೀತ ಆಸಕ್ತಿ ಇವರಿಗಿತ್ತು.

ಇವರ ಮೊದಲ ಶಾಸ್ತ್ರೀಯ ಸಂಗೀತದ ಗುರುಗಳು ಶ್ರೀ ಪ್ರಭಾಕರ ಭಟ್ ಕೆರೆಕೈಯವರು. ಶ್ರೀ ಪ್ರಭಾಕರ ಭಟ್ ಕೆರೆಕೈಯವರಲ್ಲಿ ಆಗ್ರಾ ಘರಾಣೆಯ ಶಾಸ್ತ್ರೀಯ ಸಂಗೀತದೊಂದಿಗೆ ಇವರ ಸಂಗೀತಪಾಠ ಪ್ರಾರಂಭಗೊಂಡು, ಸೀನಿಯರ್ ಸಂಗೀತ ಪರೀಕ್ಷೆಯಲ್ಲಿ ಕರ್ನಾಟಕ ರಾಜ್ಯಕ್ಕೆ ರ್‍ಯಾಂಕ್ ಬರುವುದರೊಂದಿಗೆ ಇವರು ಹೆಸರು ಗಳಿಸಿದರು. ಇದರ ಜೊತೆ ಜೊತೆಯಲ್ಲೇ ಪಂ. ಮೋಹನ ಹೆಗಡೆಯವರಲ್ಲಿ ತಬಲಾ ವಾದನ ನುಡಿಸುವುದನ್ನು ಕಲಿತರು. ವಿವಾಹದ ನಂತರ ಸಾಗರ ತಾಲ್ಲೂಕಿನ ಹಳೇ ಇಕ್ಕೇರಿಗೆ ಬಂದು ನೆಲೆಸಿದರು. ಆ ಸಮಯದಲ್ಲಿ ಆಗ್ರಾ ಘರಾಣೆಯ ಖ್ಯಾತ ಕಲಾವಿದರಾದ ಪಂಡಿತ ಇಂದೂಧರ ನಿರೋಡಿಯವರು ಶಿವಮೊಗ್ಗದಲ್ಲಿ ನೆಲೆಸಿದ್ದರು. ಪತಿ ಹಾಗೂ ಮಾವನವರ ಸಹಾಯದಿಂದ ವಿದೂಷಿ ವಸುಧಾರವರು ಶಾಸ್ತ್ರೀಯ ಸಂಗೀತ

ಅಭ್ಯಾಸವನ್ನು ಪಂಡಿತ ಇಂದೂಧರ ನಿರೋಡಿಯವರಲ್ಲಿ ಸುಮಾರು ನಾಲ್ಕು ವರ್ಷಗಳ ಕಾಲ ಕಟ್ಟುನಿಟ್ಟಿನಿಂದ, ಮಡಿವಂತಿಕೆಯ ಘರಾಣೆಯೆಂದೇ ಹೆಸರಾದ ಆಗ್ರಾ ಘರಾಣೆಯ ಪೂರ್ಣಪ್ರಮಾಣದ ಶಾಸ್ತ್ರೀಯ ಸಂಗೀತವನ್ನು ಗಂಡಾಬಂಧನ ಪದ್ಧತಿಯಲ್ಲಿ ಕಲಿತರು.

ವಿದೂಷಿ ವಸುಧಾ ಶರ್ಮರವರು ೨೦೦೦ರಲ್ಲಿ ಶ್ರೀ ಸದ್ಗುರು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ವಿದ್ಯಾಲಯವನ್ನು ಹಳೇ ಇಕ್ಕೇರಿ ಹಾಗೂ ಸಾಗರದಲ್ಲಿ ಪ್ರಾರಂಭಿಸಿದರು. ಬೆರಳೆಣಿಕೆಯ ವಿದ್ಯಾರ್ಥಿಗಳಿಂದ ಪ್ರಾರಂಭಗೊಂಡು ಇದೀಗ ೪೦೦ಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಸಂಗೀತಪಾಠ ಇಲ್ಲಿ ನಡೆಯುತ್ತಿದೆ. ಇಲ್ಲಿಯ ಹಲವಾರು ವಿದ್ಯಾರ್ಥಿಗಳು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಜೂನಿಯರ್, ಸೀನಿಯರ್, ವಿದ್ವತ್ ಹಾಗೂ ವಿಶಾರದ ಪರೀಕ್ಷೆಗಳಲ್ಲಿ ಮೊದಲ ಶ್ರೇಣಿಯಲ್ಲಿ ತೇರ್ಗಡೆ ಹೊಂದಿ, ಗುರುವಿಗೆ ಹಾಗೂ ವಿದ್ಯಾಲಯಕ್ಕೆ ಹೆಸರು ತಂದು ಕೊಟ್ಟಿರುತ್ತಾರೆ.

ಪ್ರಾರಂಭದಿಂದಲೂ ಆಗ್ರಾ ಘರಾಣೆಯ ಶಾಸ್ತ್ರೀಯ ಸಂಗೀತವನ್ನೇ ಕಲಿತ ವಿದೂಷಿ ವಸುಧಾ ಶರ್ಮರವರು ಬೇರೆ ಘರಾಣೆಯ ಬಗ್ಗೆ ಚಕಾರವೆತ್ತದೇ ತಮ್ಮ ಘರಾಣೆಯ ಗುಣಲಕ್ಷಣಗಳನ್ನೇ ಆರಾಧಿಸುತ್ತಾ, ತಮ್ಮ ವಿದ್ಯಾರ್ಥಿಗಳಿಗೆ ಸಂಗೀತ ಧಾರೆ ಎರೆಯುತ್ತಾ ಬಂದಿದ್ದಾರೆ. ಪಂಡಿತ. ಇಂದೂಧರ ನಿರೋಡಿರಂತವರು ನನಗೆ ಗುರುವಾಗಿ ಸಿಕ್ಕಿದ್ದೇ ನನ್ನ ಭಾಗ್ಯ ಎನ್ನುತ್ತಾರೆ. ಗುರುವಿನ ಮಾರ್ಗದಲ್ಲೇ ಏಕರೂಪದ, ಕಟ್ಟುನಿಟ್ಟಿನ ಆಗ್ರಾ ಘರಾಣೆಯ ಪದ್ಧತಿಯನ್ನೇ ತಮ್ಮ ಗಾಯನದಲ್ಲಿ ಇವರು ರೂಢಿಸಿಕೊಂಡು ಬಂದಿರುತ್ತಾರೆ.

ಯಾವುದೇ ಪ್ರಶಸ್ತಿ ಪುರಸ್ಕಾರಗಳನ್ನು ಆಶಿಸದ ವಿದೂಷಿ ವಸುಧಾಶರ್ಮರವರಿಗೆ ಪ್ರಶಸ್ತಿ, ಸನ್ಮಾನಗಳೇ ಇವರನ್ನು ಹುಡುಕಿಕೊಂಡು ಬಂದಿದೆ. ಅವುಗಳಲ್ಲಿ "ಹವ್ಯಕ ಪ್ರಶಸ್ತಿ" (೨೦೧೭) "ಕಲಾಪೋಷಕ" ಪ್ರಶಸ್ತಿಗಳು ಪ್ರಮುಖವಾದವುಗಳು.

"ಟಿ.ವಿ. ಹಾಗೂ ಇಂದಿನ ಆಧುನಿಕ ಮಾಧ್ಯಮಗಳ ಕ್ಷಣಿಕ ಪ್ರಚಾರಗಳು ಹಾಗೂ ಜನಮನ್ನಣೆಗಳ ಬಗ್ಗೆ ಇಂದಿನ ಯುವಪೀಳಿಗೆ ತುಂಬಾ ಮಾರು ಹೋಗುತ್ತಿದ್ದು, ಸಂಗೀತ ಅದರಲ್ಲೂ ಶಾಸ್ತ್ರೀಯ ಸಂಗೀತದ ಮೂಲ ರುಚಿಯನ್ನೇ ಆಸ್ವಾದಿಸದೇ ಕ್ಷಣಾರ್ಧದಲ್ಲಿ ಪ್ರಚಾರ ಗಿಟ್ಟಿಸಿಕೊಳ್ಳಬೇಕೆಂಬ ವಿದ್ಯಾರ್ಥಿಗಳು ಈಗ ಹೆಚ್ಚಾಗಿದ್ದಾರೆ" ಎಂಬುದು ವಿದೂಷಿ ವಸುಧಾಶರ್ಮರವರ ಅನಿಸಿಕೆಯಾಗಿದೆ.

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದಲ್ಲಿ ಸಾಹಿತ್ಯದ ಕೊರತೆ ಕಂಡ ವಸುಧಾಶರ್ಮರವರು, ಶ್ರೀ ಶಂಕರಾಚಾರ್ಯರ ಸಂಸ್ಕೃತ ಸ್ತೋತ್ರಗಳನ್ನು ಸುಮಾರು ಮೂವತ್ತು ರಾಗಗಳಲ್ಲಿ ಬಡಾಖ್ಯಾಲ ಹಾಗೂ ಛೋಟಾಖ್ಯಾಲಗಳ ಸಾಹಿತ್ಯವಾಗಿ ಬಳಸಿಕೊಂಡು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಪ್ರಪಂಚದಲ್ಲಿ ನೂತನ ಸಾಧನೆ ಮಾಡಿರುತ್ತಾರೆ.

ಭದ್ರಾವತಿ ಆಕಾಶವಾಣಿಯಲ್ಲಿ ಇವರ ಸಂದರ್ಶನ ಪ್ರಸಾರವಾಗಿದ್ದು, ಸುಗಮಸಂಗೀತ ಹಾಗೂ ಶಾಸ್ತ್ರೀಯ ಸಂಗೀತ ಸ್ಪರ್ಧೆಗಳಿಗೆ ಇವರು ನಿರ್ಣಾಯಕರಾಗಿ ಕಾರ್ಯನಿರ್ವಹಿಸಿರುತ್ತಾರೆ. ಕುಂದಗೋಳ,

ಶಿರಸಿ, ಸಾಗರ, ಸಿದ್ಧಾಪುರ, ಶಿವಮೊಗ್ಗ, ಸೊರಬ, ಬೆಂಗಳೂರು ಹೀಗೆ ಕರ್ನಾಟಕದಾದ್ಯಂತ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಹಾಗು ಸುಗಮ ಸಂಗೀತ ಕಾರ್ಯಕ್ರಮ ನೀಡಿ ಜನಮನ್ನಣೆ ಗಳಿಸಿರುತ್ತಾರೆ.

ಸದ್ಯ ಮೈಸೂರಿನಲ್ಲಿ ನೆಲೆಸಿದ ಪಂಡಿತ ಇಂದೂಧರ ನಿರೋಡಿಯವರಲ್ಲಿ ತಮ್ಮ ಸಂಗೀತಪಾಠ ಮುಂದುವರಿಸಿದ ಶ್ರೀಮತಿ ವಸುಧಾ ಶರ್ಮರವರು ಶಿವಮೊಗ್ಗ ಜಿಲ್ಲೆಯಲ್ಲಿ ಪ್ರತಿಷ್ಠಿತ ಆಗ್ರಾ ಘರಾಣೆಯ ಶಾಸ್ತ್ರೀಯ ಸಂಗೀತವನ್ನು ಹಲವಾರು ವಿದ್ಯಾರ್ಥಿಗಳೊಂದಿಗೆ, ಕಲಾಸಕ್ತರೊಂದಿಗೆ ಬೆಳೆಸುತ್ತಿರುವ ಏಕೈಕ ಸಂಗೀತಗಾರ್ತಿ, ಶಿಕ್ಷಕಿ, ಕಲಾಪೋಷಕಿ ಇವರಾಗಿದ್ದಾರೆ.

## ಕಿರಾಣಾ ಘರಾಣೆಯ ವಂಶ ವೃಕ್ಷ

ಪಂ. ಸವಾಯಿ ಗಂಧರ್ವರು



ಪಂ. ಭೀಮಸೇನ ಜೋಷಿ



ಪಂ. ಮಾಧವ ಗುಡಿ



ಶ್ರೀ ಅರಣ ಹಂಪಿಹೊಳಿ



ಶ್ರೀಮತಿ ರೇಖಾ ಅರುಣ ಹಂಪಿಹೊಳಿ



ಕು॥ ಶ್ರೀನಿವಾಸ ಹಂಪಿಹೊಳಿ

## ಶ್ರೀ ಅರುಣ ಹಂಪಿಹೊಳಿ

ಶಿವಮೊಗ್ಗ ನಗರದ ಪ್ರಸಿದ್ಧ ಹಿಂದೂಸ್ಥಾನಿ ಗಾಯಕರಾದ ಶ್ರೀ ಅರುಣ ಹಂಪಿಹೊಳಿ ಹಾಗೂ ಶ್ರೀಮತಿ ರೇಖಾ ಹಂಪಿಹೊಳಿಯವರು ಈ ಭಾಗದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಉಳಿಸಿದ, ಬೆಳೆಸಿದ ಕೆಲವೇ ಕೆಲವರಲ್ಲಿ ಪ್ರಮುಖರು ಎನ್ನಬಹುದಾಗಿದೆ. ಪಾಶ್ಚಿಮಾತ್ಯ ಹಾಗೂ ಆಧುನಿಕ ಚಲನಚಿತ್ರ ಸಂಗೀತಕ್ಕೆ ಮಾರುಹೋಗುತ್ತಿರುವ ಇಂದಿನ ಯುವಪೀಳಿಗೆಯನ್ನು ಹಾಗೂ ಶಾಸ್ತ್ರೀಯ ಸಂಗೀತವನ್ನು ತಮ್ಮ ಕಾಲದಲ್ಲಿ ಕೇಳಿದ ಹಿರಿಯ ನಾಗರೀಕರನ್ನು ಪುನಃ ಶಾಸ್ತ್ರೀಯ ಸಂಗೀತದ ಪ್ರಪಂಚಕ್ಕೆ ಸೆಳೆಯುವ ಉತ್ತಮ ಕಾರ್ಯವನ್ನು ಹಂಪಿಹೊಳಿ ದಂಪತಿಗಳು ಮಾಡುತ್ತಿದ್ದಾರೆ.

ತಮ್ಮದೇ ನೇತೃತ್ವದಲ್ಲಿ 'ಸಪ್ತಸ್ವರ ಸಂಗೀತ ಸಭಾ' ಎಂಬ ಕಲಾ ಸಂಸ್ಥೆಯನ್ನು ಪ್ರಾರಂಭಿಸಿ, ದೇಶಾದ್ಯಂತ ಪ್ರಸಿದ್ಧ ಸಂಗೀತ ಕಲಾವಿದರನ್ನು ತಮ್ಮಲ್ಲಿಗೆ ಕರೆಯಿಸಿ, ಸಂಗೀತ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತಿದ್ದಾರೆ. ವೃತ್ತಿಯಲ್ಲಿ ಗಾಜನೂರಿನ ನೀರಾವರಿ ಇಲಾಖೆಯ ಅಧಿಕಾರಿಗಳಾದ ಶ್ರೀ ಅರುಣ ಹಂಪಿಹೊಳಿಯವರು ಪ್ರವೃತ್ತಿಯಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಗಾಯಕರು. ತಮ್ಮ ಪ್ರಾಥಮಿಕ ಸಂಗೀತದ ಶಿಕ್ಷಣವನ್ನು ಶ್ರೀ. ವೇಣುಗೋಪಾಲ ಶಿವಮೊಗ್ಗರವರಿಂದ, ತದನಂತರದಲ್ಲಿ ಭಾರತರತ್ನ ದಿ॥ ಪಂ. ಭೀಮಸೇನ ಜೋಶಿಯವರ ಶಿಷ್ಯರಾದ ಪಂ. ಮಾಧವ ಗುಡಿಯವರಲ್ಲಿ ಇವರು ಪಡೆದಿರುತ್ತಾರೆ. ಪ್ರಸ್ತುತ ಭದ್ರಾವತಿ ಆಕಾಶವಾಣಿಯ ಹಿಂದೂಸ್ತಾನಿ ಶಾಸ್ತ್ರೀಯ ಹಾಗೂ ಸುಗಮ ಸಂಗೀತದ ಕಲಾವಿದರೂ ಆದ ಶ್ರೀ ಅರುಣ ಹಂಪಿಹೊಳಿಯವರು ಸದ್ಯ ಶಿವಮೊಗ್ಗ ತಾಲ್ಲೂಕಿನ ಗಾಜನೂರಿನಲ್ಲಿ ನೆಲೆಸಿರುತ್ತಾರೆ.

## ಶ್ರೀಮತಿ ರೇಖಾ ಅರುಣ ಹಂಪಿಹೊಳಿ

ಶ್ರೀಮತಿ ರೇಖಾ ಅರುಣ ಹಂಪಿಹೊಳಿರವರು ಶ್ರೀ ವೇಣುಗೋಪಾಲ ಶಿವಮೊಗ್ಗರವರಲ್ಲಿ ಗ್ವಾಲಿಯರ್ ಘರಾಣೆಯ ಸಂಗೀತ ಶಿಕ್ಷಣ ಪಡೆದು, ನಂತರದಲ್ಲಿ ಕಿರಾಣ ಘರಾಣೆಯ ಸಂಗೀತ ಶಿಕ್ಷಣವನ್ನು ಪತಿಯಾದ ಶ್ರೀ ಅರುಣ ಹಂಪಿಹೊಳಿಯವರಿಂದ ಪಡೆದಿರುತ್ತಾರೆ. ಗಾಯನದೊಂದಿಗೆ ಹಾರ್ಮೋನಿಯಂ ವಾದಕರಾದ ಶ್ರೀಮತಿ ರೇಖಾರವರು ನಾಡಿನಾದ್ಯಂತ ಹಲವು ಪ್ರಮುಖ ಸಂಗೀತಗಾರ ಕಾರ್ಯಕ್ರಮಗಳಿಗೆ ಹಾರ್ಮೋನಿಯಂ ಸಾಥ್ ನೀಡಿರುತ್ತಾರೆ.

ಇವರು ಭದ್ರಾವತಿ ಆಕಾಶವಾಣಿಯ 'ಬಿ' ಹೈ ದರ್ಜೆಯ ಕಲಾವಿದರಾಗಿದ್ದು, "ಸರಸ್ವತಿ ಸಂಗೀತ ವಿದ್ಯಾಲಯ" ಎಂಬ ಸಂಗೀತ ಪಾಠಶಾಲೆಯನ್ನು ಶಿವಮೊಗ್ಗ ನಗರದಲ್ಲಿ ನಡೆಸುತ್ತಿದ್ದಾರೆ. ಈ ಹಂಪಿಹೊಳಿ ದಂಪತಿಗಳ ಪುತ್ರನಾದ ಕು॥ ಶ್ರೀನಿವಾಸ ಹಂಪಿಹೊಳಿ ಕೂಡಾ ತನ್ನ ಪೋಷಕರ ದಾರಿಯಲ್ಲಿ ಮುನ್ನಡೆಯುತ್ತಿದ್ದು ಸದ್ಯ ಶಿವಮೊಗ್ಗ ಜಿಲ್ಲೆಯ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಯುವಗಾಯಕರಲ್ಲಿ ಒಬ್ಬನಾಗಿರುತ್ತಾನೆ.

ಒಟ್ಟಿನಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಶಿವಮೊಗ್ಗ ಹಾಗೂ ಸುತ್ತಮುತ್ತಲಿನ ಮಲೆನಾಡು ಪ್ರದೇಶದಲ್ಲಿ ಬೆಳೆಸುತ್ತಿರುವ ಕುಟುಂಬ ಇವರದಾಗಿದೆ.

## ತಬಲಾ ವಾದಕರು

### ಪಂ. ಸಂಜೀವ ಯು. ಪೋತದಾರ

ಉತ್ತರ ಕನ್ನಡ ಜಿಲ್ಲೆಯ ಶಿರಸಿಯ ಖ್ಯಾತ ತಬಲಾ ವಾದಕರಾದ ಸಂಜೀವ ಯು. ಪೋತದಾರರವರು ಬಾಗಲಕೋಟೆಯಲ್ಲಿ ೦೧.೦೬.೧೯೪೨ರಂದು ಜನಿಸಿದರು. ಶಿರಸಿಯ ಸಂಗೀತ ವಿದ್ವಾನರಾದ ಮಹಾರುದ್ರಪ್ಪ ವಿ. ಪೂಜಾರೆರವರಲ್ಲಿ ೧೫ ವರ್ಷಗಳ ಕಾಲ ಪ್ರಾಥಮಿಕ ತಬಲಾ ಶಿಕ್ಷಣವನ್ನು ಪಡೆದ ಪೋತದಾರರು ಡೆಲ್ಲಿ ಘರಾಣೆಯ ತಬಲಾದ ಪ್ರೌಢ ಶಿಕ್ಷಣವನ್ನು ಕರ್ನಾಟಕದ ಪ್ರಖ್ಯಾತ ತಬಲಾ ಕಲಾವಿದರಾದ ಶ್ರೀ ಶೇಷಗಿರಿ ಹಾನಗಲ್, ಶ್ರೀ ಬಸವರಾಜ ಬೆಂಡಿಗೇರಿ ಹಾಗು ಶ್ರೀ ಜಿ.ಬಿ. ಅವಟೆಯವರಲ್ಲಿ ಪಡೆದರು.

ಸಂಜೀವ ಯು.ಪೋತದಾರರವರು ೧೯೮೦ರ ದಶಕದಲ್ಲಿ ಶಿವಮೊಗ್ಗ ಜಿಲ್ಲೆಯ ಸೊರಬದ ಪಂ.ನಾರಾಯಣಪ್ಪನವರ ನಾದಸುರಭಿ ಸಂಗೀತ ಮಹಾವಿದ್ಯಾಲದಲ್ಲಿ ಈ ಭಾಗದ ಮೊದಲ ತಬಲಾ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಗೌರವ ಇವರಿಗೆ ಸಲ್ಲುತ್ತದೆ. ಸುಮಾರು ೭-೮ ವರ್ಷಗಳ ಕಾಲ ಸೊರಬ ಹಾಗು ಸುತ್ತಮುತ್ತಲಿನ ಪ್ರದೇಶದ ಹಲವಾರು ವಿದ್ಯಾರ್ಥಿಗಳಿಗೆ ಡೆಲ್ಲಿ ಘರಾಣೆಯ ತಬಲಾ ಶಿಕ್ಷಣವನ್ನು ಇವರು ನೀಡಿರುತ್ತಾರೆ. ಸೊರಬದ ಅಪಾರ ಶಿಷ್ಯವೃಂದದಲ್ಲಿ ವಿಜಯಕುಮಾರ ಬಿ.ಎನ್., ವಸಂತ ಕುಮಾರ, ಸತೀಶ್ ಬಸೂರು, ದಿವಾಕರ ಭಾವೆರವರು ಪ್ರಮುಖರು.

ಕರ್ನಾಟಕ ಹಾಗು ಮಹಾರಾಷ್ಟ್ರ ರಾಜ್ಯಗಳಲ್ಲಿ ನೆಡೆದ ಹಲವಾರು ಪ್ರತಿಷ್ಠಿತ ಸಂಘ, ಸಂಸ್ಥೆಗಳ ಸಂಗೀತ ಸಮ್ಮೇಳನಗಳಲ್ಲಿ, ಸರ್ಕಾರಿ ಉತ್ಸವಗಳಲ್ಲಿ ಪಂ.ಬಸವರಾಜ ರಾಜಗುರುಗಳು, ಪಂ.ಪಂಚಾಕ್ಷರಿ ಸ್ವಾಮಿ ಮತ್ತಿಘಟ್ಟಿ, ಡಾ. ಬಿ.ಡಿ.ಪಾಠಕ್, ಪಂ. ಗಣಪತಿ ಭಟ್ ಹಾಸಣಗಿ, ಪಂ. ಸಿದ್ಧರಾಮ ಜಂಬಲದಿನ್ನಿ ಮತ್ತು ಪಂ. ಎಂ.ವೆಂಕಟೇಶ ಕುಮಾರ ಹಾಗು ಇನ್ನಿತರ ಹೆಸರಾಂತ ಸಂಗೀತ ಕಲಾವಿದರಿಗೆ ಸಂಜೀವ ಯು. ಪೋತದಾರರವರು ತಬಲಾ ಸಾಥ ನೀಡಿರುತ್ತಾರೆ.

ಕರ್ನಾಟಕ ರಾಜ್ಯದ ಅನೇಕ ಸಂಗೀತದ ಸಂಘ,ಸಂಸ್ಥೆಗಳಲ್ಲಿ ಸಲಹೆಗಾರರಾಗಿ, ಅನೇಕ ಶಾಲಾ, ಕಾಲೇಜುಗಳಲ್ಲಿ ತಬಲಾ ಶಿಕ್ಷಕರಾಗಿ, ಪರೀಕ್ಷಕರಾಗಿ ಸೇವೆ ಸಲ್ಲಿಸಿದ ಸಂಜೀವ ಯು. ಪೋತದಾರರವರು ೧೯೯೧ರಿಂದ ೧೯೯೫ರವರೆಗೆ ಕರ್ನಾಟಕ ಸಂಗೀತ ಮತ್ತು ನೃತ್ಯ ಅಕಾಡೆಮಿಯ ಸದಸ್ಯರಾಗಿಯೂ ಕಾರ್ಯನಿರ್ವಹಿಸಿರುತ್ತಾರೆ. ಪ್ರಸ್ತುತದಲ್ಲಿ ಶಿರಸಿಯ ಎಂ.ಎ. ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ ದಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ, ನಿವೃತ್ತರಾಗಿರುತ್ತಾರೆ.

**ಪಂ. ತುಕಾರಾಮ್‌ರಾವ್ ರಂಗದೋಳ್, ಶಿವಮೊಗ್ಗ**

ಶಿವಮೊಗ್ಗ ಜಿಲ್ಲೆಯ ಹಾಗೂ ಕರ್ನಾಟಕ ರಾಜ್ಯ ಮತ್ತು ಹೊರರಾಜ್ಯದ ಹಲವು ಪ್ರಸಿದ್ಧ ಗಾಯಕರಿಗೆ ಹಾಗೂ ವಾದಕರಿಗೆ ತಬಲಾ ಸಾಥ್ ನೀಡಿದ ಹೆಗ್ಗಳಿಕೆ ಶಿವಮೊಗ್ಗದ ಪಂ. ತುಕಾರಾಮ್ ರಾವ್ ರಂಗದೋಳ್‌ರವರಿಗೆ ಸಲ್ಲುತ್ತದೆ. ಸರಿಸುಮಾರು ೪೫ ವರ್ಷಗಳಿಂದ ತಬಲಾ ಸಾಥಿದಾರರಾದ ಇವರು ಶಿವಮೊಗ್ಗ ಜಿಲ್ಲೆಯ ಅತಿ ಹೆಚ್ಚು ಬೇಡಿಕೆಯ ಹಾಗೂ ಸಹೃದಯೀ ಕಲಾವಿದರು.

ಪಂ. ತುಕಾರಾಮ್‌ರವರು ೦೮.೦೨.೧೯೫೫ರಲ್ಲಿ ಜನಿಸಿದರು. ಇವರ ತಂದೆ ಆರ್.ಟಿ.ರಾಮಪ್ಪ ಹಾಗೂ ತಾಯಿ ಯಮುನಾಬಾಯಿ. ವೃತ್ತಿಯಲ್ಲಿ ಇವರದು ಪಾರಂಪರಿಕ ವೃತ್ತಿ ಬಟ್ಟೆ ಹೊಲಿಯುವುದು (ಟೈಲರಿಂಗ್). ಪ್ರವೃತ್ತಿಯಲ್ಲಿ ಇವರು ತಬಲಾವಾದಕರು. ಪಿ.ಯು.ಸಿ. ಶಿಕ್ಷಣ ಮುಗಿಸಿದ ಇವರು ಪಂ. ಸಂಗಮೇಶ್ವರ ಗವಾಯಿಗಳು, ಪಂ. ಸೋಮಶೇಖರ ಪಾಟೀಲರು ಹಾಗೂ ಪಂ. ಶೇಷಾದ್ರಿ ಗವಾಯಿಗಳು ಮತ್ತು ಪಂ. ಪುಟ್ಟರಾಜ ಗವಾಯಿಗಳಲ್ಲಿ ತಬಲಾ ವಾದ್ಯದ ಡೆಲ್ಲಿ, ಬನಾರಸ್ ಘರಾಣೆಯ ಶಿಕ್ಷಣ ಪಡೆದು, ವಿದ್ವತ್ ಮತ್ತು ವಿಶಾರದ ಪದವಿಗಳಿಸಿರುತ್ತಾರೆ.

ಆಕಾಶವಾಣಿ, ದೂರದರ್ಶನದ ತಬಲಾ ವಿಭಾಗದಲ್ಲಿ 'ಬಿ.ಹೈ' ಶ್ರೇಣಿಯ ಕಲಾವಿದರಾದ ಇವರು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಹಲವು ಕಾರ್ಯಕ್ರಮಗಳಲ್ಲಿ ದೇಶದ ಹಿರಿಯ ಸಂಗೀತಗಾರರಿಗೆ ತಬಲಾ ಸಾಥ್ ನೀಡಿರುತ್ತಾರೆ. ಭದ್ರಾವತಿ, ಚಿತ್ರದುರ್ಗ, ಕಾರವಾರ, ಮಡಿಕೇರಿ ಹಾಗೂ ಹೊರರಾಜ್ಯದ ಗೋವಾ, ದೆಹಲಿ, ಕೋಲ್ಕತ್ತಾ, ಮುಂಬೈ, ಚೆನ್ನೈ, ಕೊಚ್ಚಿನ್, ಎರ್ನಾಕುಲಂ, ಕ್ಯಾಲಿಕಟ್, ಆಕಾಶವಾಣಿ ಕೇಂದ್ರಗಳಲ್ಲಿ ತಬಲಾ ಸಾಥ್ ನೀಡಿರುತ್ತಾರೆ.

ಹಲವಾರು ಸಂಗೀತ ಸಂಸ್ಥೆಗಳಿಂದ ಸನ್ಮಾನ ಪಡೆದ ಪಂ.ತುಕಾರಾಮ್‌ರಾವ್ ರಂಗಧೋಳ್‌ರವರಿಗೆ ಸೊರಬದ ಸಂಗೀತ ಸೇವಾ ಸಮಿತಿಯಿಂದ 'ನಾದಸುರಭಿ' ಪ್ರಶಸ್ತಿ ಹಾಗೂ ಪ್ರತಿಷ್ಠಿತ ಸಂಗೀತ ಸಂಸ್ಥೆಗಳಿಂದ 'ಲಯಸಿರಿ' ಪ್ರಶಸ್ತಿ, 'ನಾದಗಾರುಡಿಗ' ಪ್ರಶಸ್ತಿ, 'ಲಯವಾದ್ಯ ಪ್ರವೀಣ' ಪ್ರಶಸ್ತಿಗಳು ಬಂದಿವೆ.

ತಬಲಾ ವಾದ್ಯವನ್ನು ನೂತನವಾಗಿ ಪರಿವರ್ತಿಸಿ ಮೃದಂಗದಂತೆ, ಪಖವಾಜಿನಂತೆ ಎರಡೂ ಬದಿಯಲ್ಲಿ ನುಡಿಸುವ ಹೊಸ ಪ್ರಯತ್ನವನ್ನು ಪಂ. ತುಕಾರಾಮ ರಂಗದೊಳ್‌ರವರು ಮಾಡಿ ಯಶಸ್ವಿಯಾಗಿರುತ್ತಾರೆ. ಸಂಗೀತ ಸಾಧನೆಯನ್ನೇ ತಮ್ಮ ಬದುಕಾಗಿಸಿಕೊಂಡ ಪಂ.ರಂಗದೋಳರವರು ಹಿರಿ–ಕಿರಿಯರೆನ್ನದೇ ಎಲ್ಲಾ ವಯೋಮನಸ್ಸಿನ ಕಲಾವಿದರಿಗೆ ಸಾಥ್ ನೀಡುತ್ತಿರುವುದೇ ಅವರ ಯಶಸ್ಸಿಗೆ ಕಾರಣ ಎನ್ನಬಹುದು.

**ಪಂ. ಮಡಿವಾಳಯ್ಯ ಸಾಲಿ, ಸಾಗರ(ತಬಲಾ ವಾದಕರು)**

'ಎತ್ತಣ ಮಾಮರ ಎತ್ತಣ ಕೋಗಿಲೆ' ಎಂಬ ಗಾದೆಮಾತಿನಂತೆ ಪಂಡಿತ ಮಡಿವಾಳಯ್ಯ ಸಾಲಿಯವರು ದೂರದ ಬೀದರ ಜಿಲ್ಲೆಯ ಹುಮನಾಬಾದ್ ತಾಲ್ಲೂಕಿನ ಅಲ್ಲೂರು ಎಂಬ ಪುಟ್ಟ ಗ್ರಾಮದವರು. ಸರ್ಕಾರಿ ವೃತ್ತಿಯ ನಿಮಿತ್ತ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ತ್ಯಾಗರ್ತಿ ಗ್ರಾಮದ ಗ್ರಾಮಪಂಚಾಯತಿಯ ಕಾರ್ಯದರ್ಶಿಗಳಾಗಿ ನೇಮಕಗೊಂಡು, ಕಳೆದ ೨೫ ವರ್ಷಗಳಿಂದ ಸಾಗರದಲ್ಲೇ ನೆಲೆಸಿರುತ್ತಾರೆ.

ಪ್ರವೃತ್ತಿಯಲ್ಲಿ ಅಪ್ರತಿಮ ತಬಲಾ ವಾದಕರಾದ ಪಂಡಿತ ಮಡಿವಾಳಯ್ಯ ಸಾಲಿಯವರು ತಮ್ಮ ಪ್ರಾಥಮಿಕ ತಬಲಾ ಶಿಕ್ಷಣವನ್ನು ಶ್ರೀ ಚಂದ್ರಪ್ಪ ಬಡಿಗೇರ್ ಅವರಿಂದ ಪಡೆದಿರುತ್ತಾರೆ. ತದನಂತರ ಸಾಲಿಯವರು ಗುಲಬರ್ಗಾದ ಎಸ್.ವಿ. ಕಾಲೇಜಿನಲ್ಲಿ ಬಿ.ಎ. ವ್ಯಾಸಂಗ ಮಾಡಿದರು. ಈ ಸಮಯದಲ್ಲಿ ಹೆಸರಾಂತ ತಬಲಾ ವಾದಕರಾದ ಶ್ರೀ ಕೆ.ಎಸ್. ಹಡಪದರವರಲ್ಲಿ ತಬಲಾ ಅಭ್ಯಾಸ ಮಾಡಿದರು. ಸ್ನಾತಕ ಪದವೀಧರರಾದ ಮೇಲೆ ಹೈದರಾಬಾದಿನ ಶ್ರೀ ನಂದಕುಮಾರ ಹಾಗೂ ಬನಾರಸನ ಪಂಡಿತ ಮಣಿಲಾಲ ಮಿಶ್ರರವರಲ್ಲಿ ಹಾಗು ಪಂಡಿತ ಬಸವರಾಜ ಬೆಂಡಿಗೇರಿರವರಲ್ಲಿ ಬನಾರಸ್ ಘರಾಣೆಯ ಪೂರ್ಣ ಪ್ರಮಾಣದ ತಬಲಾ ಶಿಕ್ಷಣ ಪಡೆದರು.

ಸರ್ಕಾರಿ ವೃತ್ತಿಯ ನಿಮಿತ್ತ ಸಾಗರ ನಗರಕ್ಕೆ ಆಗಮಿಸಿ ನೆಲೆಸಿದ ಮಡಿವಾಳಯ್ಯ ಸಾಲಿಯವರು, ಮನೆಯಲ್ಲೇ ತಬಲಾ ಪಾಠಶಾಲೆ ಪ್ರಾರಂಭಿಸಿ, ನೂರಾರು ವಿದ್ಯಾರ್ಥಿಗಳಿಗೆ ಬನಾರಸ್ ಘರಾಣೆಯ ತಬಲಾ ಶಿಕ್ಷಣ ನೀಡಿರುತ್ತಾರೆ. ಇವರ ಅಪಾರ ಶಿಷ್ಯವೃಂದದಲ್ಲಿ ಹಲವಾರು ವಿದ್ಯಾರ್ಥಿಗಳು ತಬಲಾ ವಿಭಾಗದಲ್ಲಿ ವಿದ್ವತ್, ವಿಶಾರದ ಮತ್ತು ಎಂ. ಮ್ಯೂಜಿಕ್ ಪದವಿಗಳನ್ನು ಪಡೆದಿರುತ್ತಾರೆ. ಅವರುಗಳಲ್ಲಿ ಶ್ರೀ ಸುರೇಂದ್ರನಾಥ್, ಶ್ರೀ ಶೌರಿ ನಂದಿತಳೆ, ಶ್ರೀ ಸಂತೋಷ ಆರ್.ಹೆಗಡೆ, ಶ್ರೀ ಉಲ್ಲಾಸ್ ಶಾನ್‌ಬಾಗ್, ಶ್ರೀ ಯೋಗೀಶ್ ಭಟ್ ಮುಂತಾದವರು ಪ್ರಮುಖರು.

ಸರ್ಕಾರಿ ನೌಕರಿಯಿಂದ ನಿವೃತ್ತಿ ಹೊಂದಿದ ನಂತರ ಸಾಲಿರವರು ಬೀದರ್‌ನ ಪಂ.ಗಾನಯೋಗಿ ಪಂಚಾಕ್ಷರಿ ಸಂಗೀತ ಶಾಲೆಯಲ್ಲಿ ತಬಲಾ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ನಿವೃತ್ತಿಯ ನಂತರವೂ ಸಾಗರ ನಗರದೊಂದಿಗೆ ಅವಿನಾಭಾವ ಸಂಬಂಧವನ್ನು ಮುಂದುವರಿಸಿಕೊಂಡು ಬಂದ ಸಾಲಿಯವರು ತಿಂಗಳಿಗೊಮ್ಮೆ ಸಾಗರದ ತಮ್ಮ ಶಿಷ್ಯೆಯಾದ ವಿದೂಷಿ ಚೇತನಾರಾವ್‌ರವರ "ತೇಜಸ್ವಿ ತಬಲಾ ವಿದ್ಯಾಲಯ"ಕ್ಕೆ ಆಗಮಿಸಿ ಸುಮಾರು ೨೦೦ಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ತಬಲಾ ಶಿಕ್ಷಣ ನೀಡುತ್ತಿದ್ದಾರೆ.

ಹಲವು ಸಂಘ ಸಂಸ್ಥೆಗಳಿಂದ ಸನ್ಮಾನ, ಪುರಸ್ಕಾರ ಪಡೆದ ಪಂ.ಮಡಿವಾಳಯ್ಯ ಸಾಲಿರವರಿಗೆ ಹಲವು ಪ್ರಶಸ್ತಿಗಳೂ ಹುಡುಕಿಕೊಂಡು ಬಂದವು. ಆದರೆ "ತಾನಿನ್ನೂ ತಬಲಾ ವಾದನದಲ್ಲಿ

ವಿದ್ಯಾರ್ಥಿ, ತಬಲಾದಲ್ಲಿ ಕಲಿಯುವುದು ಇನ್ನೂ ತುಂಬಾ ಇದೆ" ಎಂದೇ ಪ್ರಶಸ್ತಿಗಳಿಂದ ದೂರ ಉಳಿದವರು ಇವರು.

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಗಾಯನ ಹಾಗು ವಾದನ ಸಂಗೀತದ ದಿಗ್ಗಜರೆನಿಸಿದ ಪಂ. ಗಣಪತಿ ಭಟ್ ಹಾಸಣಗಿ, ಪಂ. ಎಂ.ವೆಂಕಟೇಶ ಕುಮಾರ, ಪಂ. ಚಂದ್ರಶೇಖರ ಪುರಾಣಿಕಮಠ, ಪಂ.ಬಸವರಾಜ ರಾಜಗುರು, ಪಂ. ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ, ಉಸ್ತಾದ್ ಫಯಾಜ್ ಖಾನ್ (ಸರೋದ ಮತ್ತು ಗಾಯನ) ಪಂ. ನರಸಿಂಹಲು ವಡವಾಟಿ, ಪಂ.ಸೋಮನಾಥ ಮರಡೂರಂತವರಿಗೆ ತಬಲಾಸಾಥ್ ನೀಡಿದ ಹೆಗ್ಗಳಿಕೆ ಮಡಿವಾಳಯ್ಯ ಸಾಲಿಯವರಿಗಿದೆ.

ತಬಲಾ ಜಗತ್ತಿನ ಅಪ್ರತಿಮ ಸಾಧಕರಾದ ಪಂಡಿತ ಮಡಿವಾಳಯ್ಯ ಸಾಲಿಯವರು ಸಾಗರ ನಗರದಲ್ಲಿ ನೆಲೆಸಿ, ಬನಾರಸೀ ಘರಾಣೆಯ ತಬಲಾ ವಾದನವನ್ನು ಹಲವರಿಗೆ ಕಲಿಸಿ, ಸಾಗರದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಉಳಿಸಿದ, ಬೆಳೆಸಿದ ಕೆಲವೇ ಕೆಲವರಲ್ಲಿ ಇವರು ಪ್ರಮುಖ ರಾಗಿದ್ದಾರೆ.

## ಪಂ. ಭಾಸ್ಕರ ವಿ. ಹೆಗಡೆ ಮುತ್ತಿಗೆ

ಶಿವಮೊಗ್ಗ ಜಿಲ್ಲೆಯ ಸಾಗರ ಹಾಗು ಸುತ್ತಮುತ್ತಲಿನ ಪ್ರದೇಶದಲ್ಲಿ ತಬಲಾ ವಾದನದ ಪರಿಪೂರ್ಣ ಶಿಕ್ಷಣ ನೀಡಿ, ನೂರಾರು ಕಲಾವಿದರನ್ನು ಸಂಗೀತ ಪ್ರಪಂಚಕ್ಕೆ ಪರಿಚಯಿಸಿದ ಪ್ರಮುಖ ತಬಲಾ ಕಲಾವಿದರಲ್ಲಿ ಭಾಸ್ಕರ ವಿ. ಹೆಗಡೆಯವರೂ ಒಬ್ಬರು ಎಂದರೆ ತಪ್ಪಾಗಲಾರದು.

ಉತ್ತರಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕಿನ ಮುತ್ತಿಗೆ ಎಂಬ ಗ್ರಾಮದವರಾದ ಭಾಸ್ಕರ ಹೆಗಡೆರವರು ವಿಶ್ವೇಶ್ವರ ಹೆಗಡೆರವರ ಪುತ್ರರಾಗಿ ೨೨.೦೨.೧೯೫೫ರಲ್ಲಿ ಜನಿಸಿದರು. ಚಿಕ್ಕಂದಿನಿಂದಲೇ ಕಲಾಪ್ರೇಮಿಯಾದ ಇವರು ಖ್ಯಾತ ತಬಲಾ ವಾದಕರಾದ ಬಸವರಾಜ ಬೆಂಡಿಗೇರಿರವರ ಶಿಷ್ಯರಾದ ಮೋಹನ ರಾಮಚಂದ್ರ ಹುಣಸೇಕೊಪ್ಪರವರಲ್ಲಿ ಡೆಲ್ಲಿ ಘರಾಣೆಯ ತಬಲಾ ಶಿಕ್ಷಣವನ್ನು ಶಾಸ್ತ್ರೋಕ್ತವಾಗಿ ಕಲಿತು, ವಿದ್ವತ್ ಪದವಿ ಪಡೆದಿರುತ್ತಾರೆ.

ಭಾಸ್ಕರ ಹೆಗಡೆರವರು ಶಿವಮೊಗ್ಗ ಜಿಲ್ಲೆಯ ಶಾಸ್ತ್ರೀಯ ಸಂಗೀತದ ತವರೂರಾದ ಸಾಗರದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ವಿದ್ಯಾಲಯವನ್ನು ಕಳೆದ ಮೂರು ದಶಕಗಳಿಂದ ಯಶಸ್ವಿಯಾಗಿ ನಡೆಸಿಕೊಂಡು ಬಂದಿರುತ್ತಾರೆ. ಪ್ರತೀ ವರ್ಷ ಪಾಠಶಾಲೆಯ ವಾರ್ಷಿಕೋತ್ಸವವನ್ನು ಅಚ್ಚುಕಟ್ಟಾಗಿ ಆಯೋಜಿಸಿ, ರಾಜ್ಯ ಹಾಗು ರಾಷ್ಟ್ರ ಮಟ್ಟದ ಹಲವು ಖ್ಯಾತ ಹಿಂದೂಸ್ತಾನಿ ಕಲಾವಿದರನ್ನು ಆಮಂತ್ರಿಸಿ, ಗೌರವಿಸಿ ಸಾಗರ ಪಟ್ಟಣದ ಶ್ರೋತೃಗಳಿಗೆ ಸಂಗೀತದ ರಸದೌತಣ ನೀಡಿಸಿರುತ್ತಾರೆ.

ಭಾಸ್ಕರ ಹೆಗಡೆರವರ ವಿದ್ಯಾಲಯದಲ್ಲಿ ತಬಲಾ ವಾದನದ ಪರಿಣಿತಿಯನ್ನು ಪಡೆದ ನೂರಾರು ವಿಧ್ಯಾರ್ಥಿಗಳು ಸಂಗೀತ ಪರೀಕ್ಷಗಳಾದ ಜ್ಯೂನಿಯರ್, ಸೀನಿಯರ್ ಹಾಗು ವಿದ್ವತ್‌ಗಳಲ್ಲಿ ಉನ್ನತ

ದರ್ಜೆಯಲ್ಲಿ ಉತ್ತೀರ್ಣರಾಗಿ, ಸಾಗರದ ಕೀರ್ತಿಯನ್ನು ಹೆಚ್ಚಿಸಿರುತ್ತಾರೆ. ಇವರ ಅಪಾರ ಶಿಷ್ಯವೃಂದದಲ್ಲಿ ನಿಖಿಲ್ ಕುಂಸಿ, ಶೌರಿ, ಸಂತೋಷ ಹೆಗಡೆ, ಸುರೇಂದ್ರನಾಥ, ವಿನಾಯಕ ಭಟ್, ಉಲ್ಲಾಸ ಶಾನಭಾಗ, ಅನೂಪ ಮತ್ತು ಮಿಥುನ್‌ರವರು ಪ್ರಮುಖರು.

## ಪಂ. ಮಂಜುನಾಥ ಭಟ್ಟ(ಎಮ್.ಜಿ.ಭಟ್ಟ) ನೆಬ್ಬೂರು

ಮೂಲತಃ ಉತ್ತರ ಕನ್ನಡ ಜಿಲ್ಲೆಯ ಶಿರಸಿಯವರಾದ ಮಂಜುನಾಥ ಭಟ್ಟ ನೆಬ್ಬೂರುರವರು ಶಿವಮೊಗ್ಗ ಜಿಲ್ಲೆಯ ಸೊರಬದ ನಾದ ಸುರಭಿ ಸಂಗೀತ ಮಹಾವಿದ್ಯಾಲಯದ ತಬಲಾ ಶಿಕ್ಷಕರು. ಈ ಭಾಗದ ಹಲವಾರು ವಿಧ್ಯಾರ್ಥಿಗಳಿಗೆ ೧೯೯೫ರಿಂದ ಪೂರಬ ಬನಾರಸ ಘರಾಣೆಯ ತಬಲಾ ಶಿಕ್ಷಣ ನೀಡಿದ ಬಹು ಬೇಡಿಕೆಯ ಕಲಾವಿದರು ಇವರು ಎಂದರೆ ತಪ್ಪಾಗಲಾರದು.

೨೦.೦೮.೧೯೬೪ರಲ್ಲಿ ಜನಿಸಿದ ಮಂಜುನಾಥ ಭಟ್ಟ ನೆಬ್ಬೂರುರವರು ಉತ್ತರಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕಿನ ನೆಬ್ಬೂರು ಎಂಬ ಪುಟ್ಟ ಗ್ರಾಮದವರು. ಮೂಲತಃ ಹವ್ಯಕ ವೈದೀಕ ಕುಟುಂಬ ದವರಾದ ಇವರ ಚಿಕ್ಕಪ್ಪ ಗಣಪತಿ ಭಟ್ಟರವರು ವೃತ್ತಿಯಲ್ಲಿ ವೈದೀಕರು ಮತ್ತು ಜ್ಯೋತಿಷಿಗಳು, ಪ್ರವೃತ್ತಿಯಲ್ಲಿ ತಬಲಾ ವಾದಕರಾಗಿದ್ದರು. ಬಾಲ್ಯದಿಂದಲೇ ತಬಲಾ ವಾದನದಲ್ಲಿ ಆಸಕ್ತಿ ಹಾಗು ಅಭಿರುಚಿಯನ್ನು ಹೊಂದಿದ ಎಮ್.ಜಿ. ಭಟ್ಟರವರು ತಮ್ಮ ಪ್ರಾಥಮಿಕ ತಬಲಾ ವಾದ್ಯದ ಪಾಠವನ್ನು ತಮ್ಮ ಚಿಕ್ಕಪ್ಪನವರಿಂದ ಪಡೆದರು. ನಂತರ ಉಡುಪಿಯ ಮುಕುಂದ ಕೃಪಾ ಸಂಗೀತ ನೃತ್ಯ ಅಕಾಡೆಮಿಯ ಶಾಲೆಯಲ್ಲಿ ತಬಲಾ ವಾದ್ಯದ ಪ್ರೌಡಶಿಕ್ಷಣವನ್ನು ಪಡೆದರು. ತದನಂತರದಲ್ಲಿ ಆಕಾಶವಾಣಿ ನಿಲಯ ಕಲಾವಿಧರಾದ ಶಂಕರ ಕವಡೀಮಠರವರಲ್ಲಿ ಸುಮಾರು ೮ ವರ್ಷಗಳ ಕಾಲ, ಹಾಗು ಕಲಬುರಗಿಯ ಖ್ಯಾತ ತಬಲಾ ಕಲಾವಿದರಾದ ಹಡಪದರವರಲ್ಲಿ ತಬಲಾ ಅಭ್ಯಾಸ ಮಾಡಿದ ಎಮ್.ಜಿ.ಭಟ್ಟರವರು ತಬಲಾ ವಿಷಯದ ಜ್ಯೂನಿಯರ್, ಸೀನಿಯರ್ ಹಾಗು ವಿದ್ವತ್ ಪರೀಕ್ಷೆಗಳಲ್ಲಿ ಶ್ರೇಷ್ಠ ದರ್ಜೆಯಲ್ಲಿ ಉತ್ತೀರ್ಣರಾಗಿರುತ್ತಾರೆ.

ಎಮ್.ಜಿ.ಭಟ್ಟರವರು ೧೯೯೪-೯೫ರಲ್ಲಿ ರಾಜ್ಯ ಮಟ್ಟದ ಬೆಳಗಾವಿ ವಿಭಾಗದ ಕಲಾ ಸ್ಪರ್ಧೆಯಲ್ಲಿ ತಬಲಾ ಸೋಲೋದಲ್ಲಿ ಪ್ರಥಮ ಸ್ಥಾನಗಳಿಸಿರುತ್ತಾರೆ. ಹಾಗೆಯೇ ಉತ್ತರಕನ್ನಡ ಜಿಲ್ಲೆಯ ಕರಾವಳಿ ಉತ್ಸವ, ಕದಂಬೋತ್ಸವ, ಸೋಂದಾ ಉತ್ಸವಗಳೊಂದಿಗೆ ಪ್ರತಿಷ್ಠಿತ ಹಂಪಿ ಉತ್ಸವದಲ್ಲಿ ತಬಲಾ ಕಾರ್ಯಕ್ರಮ ನೀಡಿರುತ್ತಾರೆ. ಕಂದಗೋಳದ ಅಹೋರಾತ್ರಿ ಸಂಗೀತೋತ್ಸವ, ಸೊರಬದ ಪಂ. ಗುರುಶಾಂತ ಗವಾಯಿಗಳ ಪ್ಮಣ್ಯತಿಥಿ ಸಂಗೀತೋತ್ಸವ, ಹುಬ್ಬಳ್ಳಿಯ ಅಬ್ದುಲ್ ಕರೀಂ ಖಾನರ ಪುಣ್ಯತಿಥಿ ಸಂಗಿತೋತ್ಸವಗಳಲ್ಲಿ ಅಂತಾರಾಷ್ಟ್ರೀಯ ಮಟ್ಟದ ಖ್ಯಾತ ಸಂಗೀತ ಕಲಾವಿದರಿಗೆ ತಬಲಾ ಸಾಥ ನೀಡಿದ ಹೆಗ್ಗಳಿಕೆ ಇವರಿಗಿದೆ. ಇದರೊಂದಿಗೆ ಪ್ರತಿವರ್ಷ ಶಿರಸಿಯಲ್ಲಿ ಸಂಯುಕ್ತ ಸಮ್ಮೇಳನ

ಎಂಬ ಹೆಸರಿನಲ್ಲಿ ಮಕ್ಕಳ ಪ್ರತಿಭಾ ಪ್ರದರ್ಶನದ ಸಂಗೀತೋತ್ಸವವನ್ನು ನಡೆಸಿಕೊಂಡು ಬಂದಿರುವುದು ಹೆಮ್ಮೆಯ ಸಂಗತಿಯಾಗಿದೆ.

ಧಾರವಾಡ ಆಕಾಶವಾಣಿಯ ಯುವವಾಣಿ ವಿಭಾಗದಲ್ಲಿ ಎಮ್.ಜಿ.ಭಟ್ಟರವರ ತಬಲಾ ಸೋಲೋ ಪ್ರಸಾರವಾಗಿದೆ. ಹಾಗೆಯೇ ಭದ್ರಾವತಿ ಆಕಾಶವಾಣಿಯಲ್ಲಿ ೫ ವರ್ಷಗಳ ಕಾಲ ತಬಲಾ ಕಲಾವಿದರಾಗಿ ಸೇವೆ ಸಲ್ಲಿಸಿದ್ದಾರೆ. ನಂತರ ಸೊರಬದ ಪಂ.ನಾರಾಯಣಪ್ಪನವರ ನಾದಸುರಭಿ ಸಂಗೀತ ವಿದ್ಯಾಲಯದಲ್ಲಿ ತಬಲಾ ಶಿಕ್ಷಕರಾಗಿ, ಸೊರಬ ಹಾಗು ಸುತ್ತಮುತ್ತಲಿನ ಪ್ರದೇಶದ ಹಲವಾರು ವಿದ್ಯಾರ್ಥಿಗಳಿಗೆ ತಬಲಾ ಶಿಕ್ಷಣವನ್ನು ಧಾರೆಯೆರೆದಿದ್ದಾರೆ. ಪ್ರಸ್ತುತ ಉತ್ತರಕನ್ನಡ ಜಿಲ್ಲೆಯ ಶಿರಸಿಯಲ್ಲಿ ಓಂ ತಬಲಾ ವಿದ್ಯಾಲಯವನ್ನು ನೆಡೆಸುತ್ತಿದ್ದಾರೆ. ಮಂಜುನಾಥ ಭಟ್ಟ ನೆಬ್ಬೂರುರವರ ಕಲಾ ಸೇವೆಯನ್ನು ಗುರುತಿಸಿ, ೨೦೦೫ರಲ್ಲಿ ಸೊರಬದ ಗುರುಶಾಂತ ಗವಾಯಿಗಳ ಪುಣ್ಯಸ್ಮರಣೆಯ ಕಾರ್ಯಕ್ರಮದಲ್ಲಿ ಕಲಾ ಸನ್ಮಾನವನ್ನು, ಹಾಗು ೨೦೧೪ರಲ್ಲಿ "ನಾದ ಸುರಭಿ ಪ್ರಶಸ್ತಿ" ನೀಡಿ ಪುರಸ್ಕರಿಸಿದ್ದಾರೆ.

ಸೊರಬ ಹಾಗು ಸುತ್ತಮುತ್ತಲಿನ ಹಲವಾರು ತಬಲಾ ಕಲಾವಿದರಿಗೆ ಪ್ರಾರಂಭಿಕ ಹಾಗು ಪ್ರೌಡ ಶಿಕ್ಷಣ ನೀಡಿದ ಮಂಜುನಾಥ ಭಟ್ಟ ನೆಬ್ಬೂರವರ ಕಲಾಸೇವೆ ನಿಜಕ್ಕೂ ಶ್ಲಾಘನೀಯ. ಸೊರಬ ಭಾಗದ ಇವರ ಶಿಷ್ಯಂದಿರುಗಳಲ್ಲಿ ವಸಂತಕುಮಾರ ಬಾಂಬೊರೆ, ಸತೀಶ ಹೆಗಡೆ ಬಸೂರು, ಶ್ರೀನಿವಾಸ ಹೆಚ್., ಶ್ರೀಹರ್ಷ ಹೆಚ್.ಆರ್. ಪ್ರಮುಖರು.

### ಶ್ರೀ ಸುಬ್ರಹ್ಮಣ್ಯ ಹೆಗಡೆ

ಶಿವಮೊಗ್ಗ ಜಿಲ್ಲೆಯ ಸೊರಬ, ಸಾಗರ ಹಾಗು ನೆರೆಯ ಉತ್ತರ ಕನ್ನಡ ಜಿಲ್ಲೆಯ ಸಿದ್ಧಾಪುರ, ಶಿರಸಿ ಮತ್ತು ಸುತ್ತಮುತ್ತಲಿನ ತಾಲ್ಲೂಕಿನ ಬಹುಬೇಡಿಕೆಯ ತಬಲಾ ವಾದಕರು ಸುಬ್ರಹ್ಮಣ್ಯ ಹೆಗಡೆಯವರು. ಇವರು ಸೊರಬ ತಾಲ್ಲೂಕಿನ ಹರೀಶಿ-ಮಂಗಳೂರು ಎಂಬ ಪುಟ್ಟ ಗ್ರಾಮದ ಸೌಭದ್ರೆ ಹಾಗು ಲಕ್ಷ್ಮೀನಾರಾಯಣ ಹೆಗಡೆಯವರ ಪುತ್ರರಾಗಿ ೨೩.೦೩.೧೯೫೨ರಂದು ಜನಿಸಿದರು. ಇವರ ಹಿರಿಯ ಸಹೋದರರಾದ ಚಿದಂಬರ ಹೆಗಡೆಯವರೂ ಸಹಾ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಹವ್ಯಾಸಿ ಕಲಾವಿದರು. ವಂಶಪಾರಂಪರಿಕವಾದ ಅಡಿಕೆ ಬೆಳೆಗಾರರ ಕುಟುಂಬದವರಾದ ಸುಬ್ಬಣ್ಣನವರು ವೃತ್ತಿಯಲ್ಲಿ ಕೃಷಿಕರು ಪ್ರವೃತ್ತಿಯಲ್ಲಿ ತಬಲಾ ವಾದಕರು.

ಶಾಸ್ತ್ರೀಯ ಸಂಗೀತದ ಪರಿಸರದಲ್ಲಿಯೇ ಬೆಳೆದ ಸುಬ್ಬಣ್ಣನವರು ತಬಲಾದ ಬನಾರಸ, ಲಕನೌ ಮತ್ತು ಡೆಲ್ಲಿ ಘರಾಣೆಯ ಪರಿಪೂರ್ಣ ಶಿಕ್ಷಣವನ್ನು ಬಾಲ್ಯದಿಂದಲೇ ನೆರೆಯ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕಿನ ಶ್ರೀಪಾದರಾವ್ ಕಲ್ಗುಂಡಿಕೊಪ್ಪರವರಲ್ಲಿ ಕಲಿತರು. ಅವರಿವರೆನ್ನದೇ ಎಲ್ಲಾ ಕಲಾವಿದರೊಂದಿಗೆ ಹೊಂದಿಕೊಳ್ಳುವ, ಯುವ ಕಲಾವಿದರಿಗೆ ಪ್ರೋತ್ಸಾಹಿಸುವ, ಹುರಿ

ದುಂಬಿಸುವ, ಸೌಮ್ಯಸ್ವಭಾವದವರಾದ ಸುಬ್ಬಣ್ಣನವರು ಶಿವಮೊಗ್ಗ ಜಿಲ್ಲೆಯ ಹಾಗು ಸುತ್ತಮುತ್ತಲಿನ ತಾಲ್ಲೂಕಿನ ಹಿರಿ-ಕಿರಿಯ ಸಂಗೀತಗಾರ ಅಚ್ಚು-ಮೆಚ್ಚಿನ ತಬಲಾ ಸಾಥಿದಾರರು, ಕಲಾ ಪೋಷಕರು ಎಂದರೆ ಅತಿಶಯವಾಗಲಾರದು.

ಸೊರಬದ ಸಂಗೀತ ಸೇವಾ ಸಮಿತಿಯ ಅಹೋರಾತ್ರಿ ಸಂಗೀತೋತ್ಸವ, ಸಾಗರದ ವಸುಧಾ ಶರ್ಮರವರ ಪಾಠಶಾಲೆಯ ವಾರ್ಷಿಕೋತ್ಸವ ಹೀಗೆ ಹಲವಾರು ಸಂಗೀತದ ಸಂಘ-ಸಂಸ್ಥೆಗಳ ಕಾರ್ಯಕ್ರಮಗಳಲ್ಲಿ ಎಲ್ಲಾ ವಯೋಮಿತಿಯ, ರಾಜ್ಯ ಹಾಗು ರಾಷ್ಟ್ರ ಮಟ್ಟದ ಸಂಗೀತ ಕಲಾವಿದರು ಗಳಿಗೆ ಸುಬ್ಬಣ್ಣನವರು ತಬಲಾ ಸಾಥ ನೀಡಿ, ಜನಮನ್ನಣೆಗಳಿಸಿರುತ್ತಾರೆ.

## ಶ್ರೀ ವಿಜಯಕುಮಾರ ಬಿ.ಎಸ್.

ವಿಜಯಕುಮಾರರವರು ಶಿವಮೊಗ್ಗ ಜಿಲ್ಲೆಯ ಪ್ರಸಿದ್ಧ ಸಂಗೀತ ಕಲಾವಿದರಾದ ಪಂ. ಬಿ. ನಾರಾಯಣಪ್ಪನವರ ಪಂಚಮ ಪುತ್ರರಾಗಿ ೦೬.೦೪.೧೯೭೦ರಲ್ಲಿ ಜನಿಸಿದರು. ಸಂಗೀತವನ್ನೇ ಉಸಿರಾಗಿಸಿಕೊಂಡು, ಕಲೆಯನ್ನು ಉಳಿಸಿ, ಬೆಳೆಸುವಂತಹ ಕುಟುಂಬದಲ್ಲಿ ಜನಿಸಿದ ಕಾರಣ ವಿಜಯಕುಮಾರವರಿಗೆ ಬಾಲ್ಯದಿಂದಲೇ ಸಂಗೀತದ ಕಡೆಗೆ ಒಲುವು ಮತ್ತು ತಾಲಿಮು ಅವರ ತಂದೆಯವರಿಂದ ಬಳುವಳಿಯಾಗಿ ಬಂದಿತು. ತಬಲಾ ವಾದನದಲ್ಲಿ ಆಸಕ್ತಿ ಹೊಂದಿದ ಇವರು ಪ್ರಾಥಮಿಕ ಶಿಕ್ಷಣವನ್ನು ತಂದೆಯವರಿಂದ ಪಡೆದರು. ನಂತರ ಖ್ಯಾತ ತಬಲಾ ವಾದಕರಾದ ಪಂ.ರವೀಂದ್ರ ಯಾವಗಲ್, ಪಂ.ರಘುನಾಥ ನಾಕೋಡ ಮತ್ತು ಪಂ. ಸಂಜೀವ ಪೋತದಾರ್‌ರವರಲ್ಲಿ ಡೆಲ್ಲಿ ಘರಾಣೆಯ ತಬಲಾ ವಾದನವನ್ನು ಕಟ್ಟುನಿಟ್ಟಿನಿಂದ ಕಲಿತರು.

ಡಿ.ಫಾರ್ಮ್ ಪದವೀಧರರಾದ ವಿಜಯಕುಮಾರವರು ವೃತ್ತಿಯಲ್ಲಿ ಔಷಧಿ ಅಂಗಡಿ ನಡೆಸುತ್ತಿದ್ದು, ಪ್ರವೃತ್ತಿಯಲ್ಲಿ ತಬಲಾ ವಾದಕರಾಗಿರುತ್ತಾರೆ. ಇವರು ರಾಜ್ಯ ಹಾಗು ರಾಷ್ಟ್ರ ಮಟ್ಟದ ಹಲವಾರು ಖ್ಯಾತ ಶಾಸ್ತ್ರೀಯ ಸಂಗೀತ ಕಲಾವಿದರಿಗೆ ತಬಲಾ ಸಾಥ ನೀಡಿರುತ್ತಾರೆ. ಭಾರತ ಸರ್ಕಾರ ಮತ್ತು ಕರ್ನಾಟಕ ರಾಜ್ಯ ಸರ್ಕಾರವು ಸಂಯುಕ್ತವಾಗಿ ೧೯೯೪ರಲ್ಲಿ ಏರ್ಪಡಿಸಿದ ಜಿಲ್ಲಾಮಟ್ಟದ ಯುವಜನೋತ್ಸವದ ತಬಲಾ ವಾದನದ ವಿಭಾಗದಲ್ಲಿ ಪ್ರಥಮ ಸ್ಥಾನವನ್ನು ಪಡೆದ ವಿಜಯಕುಮಾರ ಅವರು ಅದೇ ವರ್ಷ ಭೂಪಾಲ್‌ನಲ್ಲಿ ನಡೆದ ರಾಷ್ಟ್ರ ಮಟ್ಟದ ಯುವಜನೋತ್ಸವದಲ್ಲಿ ಪ್ರಥಮ ಸ್ಥಾನವನ್ನು ಪಡೆದಿರುತ್ತಾರೆ.

ಪ್ರಸ್ತುತ ವಿಜಯಕುಮಾರರವರು ತಮ್ಮ ವೃತ್ತಿ ಬದುಕಿಗಾಗಿ ಉತ್ತರಕನ್ನಡ ಜಿಲ್ಲೆಯ ಶಿರಸಿಯಲ್ಲಿ ನೆಲೆಸಿದ್ದು, ಶಿರಸಿಯ ಖ್ಯಾತ ತಬಲಾ ವಾದಕರಾದ ಅನಂತ ಹೆಗಡೆ ವಾಜಗಾರರಲ್ಲಿ ತಮ್ಮ ಪ್ರವೃತ್ತಿ ಬದುಕಿನ ತಬಲಾ ಶಿಕ್ಷಣವನ್ನು ಮುಂದುವರಿಸಿರುತ್ತಾರೆ. ಇದಲ್ಲದೇ ತಂದೆಯವರಾದ ಪಂ. ಬಿ. ನಾರಾಯಣಪ್ಪನವರು ಹುಟ್ಟುಹಾಕಿದ ಸೊರಬದ ಸಂಗೀತ ಸೇವಾ ಸಮಿತಿಯ ಒರ್ವ ಸದಸ್ಯರಾಗಿ ಕಲೆಯನ್ನು, ಕಲಾವಿದರನ್ನು ಹಾಗು ಕಲಾ ಪ್ರಪಂಚವನ್ನು ಬೆಳೆಸುತ್ತಿರುವ ಇವರ ಸೇವೆ ಶ್ಲಾಘನೀಯ.

## ಸಿತಾರ ವಾದಕರು

### ಶ್ರೀ ವಸಂತ ಕುಮಾರ್ ಜೋತಾಡಿ

ಶ್ರೀ ವಸಂತ ಕುಮಾರ್ ಜೋತಾಡಿರವರು ೧೯೭೦ರ ದಶಕದ ಮುಂಬೈ ಆಕಾಶವಾಣಿಯ ಹಾಗು ದೂರದರ್ಶನದ ಸಿತಾರ ವಾದಕರು. ಇವರು ೨೬.೦೫.೧೯೩೦ರಂದು ಮುಂಬೈನಲ್ಲಿ ಜನಿಸಿದರು. ಇವರ ತಂದೆ ದತ್ತಾತ್ರೇಯ ಮಂಜುನಾಥ ಜೋತಾಡಿ ಹಾಗು ತಾಯಿ ಶ್ರೀಮತಿ ವತ್ಸಲಾ ಬಾಯಿಯವರು ಸಾರಸ್ವತ ಬ್ರಾಹ್ಮಣ ಮನೆತನದವರಾದ ಇವರು ಮೂಲತಃ ಉತ್ತರ ಕರ್ನಾಟಕದವರಾಗಿದ್ದು, ಕೊಂಕಣಿ ಇವರ ಮಾತೃ ಭಾಷೆಯಾಗಿದೆ. ಇವರ ತಂದೆ ಮುಂಬೈನಲ್ಲಿ ಬ್ಯಾಂಕ್ ಉದ್ಯೋಗಿಯಾಗಿದ್ದರು. ಇವರ ತಾಯಿಯವರ ತಂದೆ ಕೂಡಾ ಮುಂಬೈನ ನಿವಾಸಿ ಗಳಾಗಿದ್ದರು. ಹಾಗಾಗಿಯೇ ವಸಂತ ಕುಮಾರರ ಬಾಲ್ಯ ಜೀವನ ಮುಂಬೈನ ಸಾಂತಾಕ್ರೂಸನಲ್ಲಿ ಕಳೆಯಿತು.

೧೯೪೦ರ ಸಮಯದಲ್ಲಿ ವಸಂತ ಕುಮಾರರ ತಂದೆಯವರು ಮುಂಬೈನಿಂದ ಕರ್ನಾಟಕ ರಾಜ್ಯದ ಶಿವಮೊಗ್ಗ ಜಿಲ್ಲೆಯ ಸೊರಬ ಪಟ್ಟಣಕ್ಕೆ ಬಂದು, ಸ್ವಂತ ರೈಸ್ ಮಿಲ್ ಉದ್ಯೋಗ ಪ್ರಾರಂಭಿಸಿ ಇಲ್ಲೇ ನೆಲೆಸಿದರು. ಮುಂಬೈನಲ್ಲಿ ತಮ್ಮ ಪ್ರೌಢ ಶಿಕ್ಷಣವನ್ನು ಮುಗಿಸಿದ ವಸಂತ ಕುಮಾರರವರು, ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಬಿ.ಎ. ಪದವಿಯನ್ನು ಪಡೆದರು. ೧೯೫೭ರಲ್ಲಿ ಶ್ರೀಮತಿ ಸುಲೋಚನಾರವರೊಂದಿಗೆ ವಿವಾಹವಾದ ಇವರು ತಂದೆಯವರ ರೈಸ್ ಮಿಲ್ ಉದ್ಯೋಗವನ್ನು ಮುಂದುವರಿಸಿದರು. ಕೆಲವು ಸಮಯದ ನಂತರ ಇವರು ಖ್ಯಾತ ಸಿತಾರ ವಾದಕರಾದ ಪಂಡಿತ ರವಿಶಂಕರರವರ ಸಿತಾರ ವಾದನಕ್ಕೆ ಮನಸೋತು ಸಿತಾರ ವಾದಕರಾಗಬೇಕೆಂದು ೧೯೬೫ರಲ್ಲಿ ಮರಳಿ ಮಂಬೈಗೆ ತೆರಳಿದರು. ಪಂ. ರವಿಶಂಕರ್ ಹಾಗು ಅಂದಿನ ಕಾಲದ ಆಕಾಶವಾಣಿ ಯಲ್ಲಿ ಪ್ರಸಾರವಾಗುತ್ತಿದ್ದ ಹಲವು ಖ್ಯಾತ ಸಿತಾರ ಕಲಾವಿದರ ವಾದನವನ್ನು ರೇಡಿಯೋ ಮುಖಾಂತರವೇ ಆಲಿಸಿ, ಒಂದು ರೀತಿಯಲ್ಲಿ ಪಂ.ರವಿಶಂಕರರ ಹಾಗು ರೇಡಿಯೋದ "ಏಕಲವ್ಯ"ನಂತೆ ಇವರು ಸಿತಾರ ವಾದನ ನುಡಿಸುವುದನ್ನು ಕಲಿತು, ೧೯೭೨ರಲ್ಲಿ ಮುಂಬೈ ಆಕಾಶವಾಣಿಯ ಬಿ.ಹೈ. ದರ್ಜೆಯ ಸಿತಾರ ವಾದಕರಾದರು. ೧೯೭೩ರಲ್ಲಿ ದೂರದರ್ಶನದ ಕಲಾವಿದರೂ ಆದರು. ಯಾವುದೇ ಘರಾಣೆಯನ್ನು ಅನುಸರಿಸದೇ ಎಲ್ಲ ಘರಾಣೆಯ ಉತ್ತಮ ಅಂಶಗಳನ್ನು ತಮ್ಮ ವಾದನದಲ್ಲಿ ಇವರು ಪ್ರಸ್ತುತಪಡಿಸುತ್ತಿದ್ದರು. ೧೯೭೦ರ ದಶಕದ ಹಲವು ದೂರದರ್ಶನದ ಜಾಹಿರಾತುಗಳ ಹಿನ್ನೆಲೆ ಸಂಗೀತದಲ್ಲಿ ಇವರು ಸಿತಾರ ನುಡಿಸಿರುತ್ತಾರೆ.

೧೯೮೦ರ ಸಮಯದಲ್ಲಿ ವಸಂತ ಕುಮಾರವರು ಮರಳಿ ಸೊರಬಕ್ಕೆ ಆಗಮಿಸಿದರು. ಶಿವಮೊಗ್ಗ ಜಿಲ್ಲೆಯ ಹಾಗು ಕರ್ನಾಟಕ ರಾಜ್ಯದ ಹಲವೆಡೆ ಸಿತಾರ ಕಾರ್ಯಕ್ರಮ ನೀಡಿ ಪ್ರಸಿದ್ಧರಾದ ಇವರ ಹಲವು ಶಿಷ್ಯರಲ್ಲಿ ಶಾಂತಿರಾವ್ ಬೆನ್ನೂರು, ಶಿರಸಿಯ ಭರತ್ ಹೆಗಡೆ ಹಾಗು ಸುಬ್ರಹ್ಮಣ್ಯ ಹೆಗಡೆರವರು ಪ್ರಮುಖರು.

## ಶಹನಾಯಿ ವಾದಕರು

### ಶ್ರೀ ರಾಮಣ್ಣ ಭಜಂತ್ರಿ–ಆನವಟ್ಟಿ

ಶ್ರೀ ರಾಮಣ್ಣ ಪಕ್ಕೀರಪ್ಪ ಭಜಂತ್ರಿರವರು ಶಿವಮೊಗ್ಗ ಜಿಲ್ಲೆಯ ಏಕೈಕ ಶಹನಾಯಿ ವಾದಕರು ಎಂದರೆ ತಪ್ಪಗಲಾರದು. ಇವರು ಸೊರಬ ತಾಲ್ಲೂಕಿನ ಆನವಟ್ಟಿ ಸಮೀಪದ ತಿಮ್ಮಾಪುರದಲ್ಲಿ ೨೦.೦೧.೧೯೫೫ರಲ್ಲಿ ಶ್ರೀ ಪಕ್ಕೀರಪ್ಪ ಮತ್ತು ಶ್ರೀಮತಿ ದುರ್ಗಮ್ಮ ದಂಪತಿಗಳ ಪುತ್ರರಾಗಿ ಜನಿಸಿದರು.

ಭಜಂತ್ರಿ ಮನೆತನದ ವೃತ್ತಿಧರ್ಮ ಶಹನಾಯಿ ನುಡಿಸುವುದಾಗಿದ್ದರಿಂದ ಪಾರಂಪರಿಕವಾಗಿ ಶ್ರೀ ರಾಮಣ್ಣನವರು ಶಹನಾಯಿ ನುಡಿಸುವುದನ್ನು ಬಾಲ್ಯದಿಂದಲೇ ತಮ್ಮ ತಂದೆಯವರಿಂದ ಕಲಿತರು. ಆದರೆ ಶಾಸ್ತ್ರೀಯವಾಗಿ ಶಹನಾಯಿ ನುಡಿಸುವುದನ್ನು 'ಶಹನಾಯಿ ಮಾಂತ್ರಿಕ' ಎಂದೇ ಪ್ರಸಿದ್ಧರಾದ ಉಸ್ತಾದ್ ಬಿಸ್‌ಮಿಲ್ಲಾ ಖಾನ್‌ರವರ ಕಾರ್ಯಕ್ರಮಗಳನ್ನು ಆಕಾಶವಾಣಿ ಹಾಗು ಟೇಪ್‌ರೆಕಾರ್ಡ್‌ಗಳಲ್ಲಿ ಕೇಳಿ ಏಕಲವ್ಯನಂತೆ ಇವರು ಕಲಿತರು. "ಇಂದಿಗೂ ಅವರೇ ನನ್ನ ಗುರುಗಳು" ಎಂಬುವುದು ಇವರ ಹೇಳಿಕೆ. ಜೊತೆಗೆ ಸೊರಬದ ಪಂಡಿತ ಬಿ.ನಾರಾಯಣಪ್ಪನವರಲ್ಲಿ ಗಾಯಕೀ ಅಂಗದ ಶಹನಾಯಿ ನುಡಿಸುವುದನ್ನು ಕಲಿತರು.

ಶ್ರೀ ರಾಮಣ್ಣನವರು ೧೯೯೦ನೇ ಸಾಲಿನ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ಅಂದಿನ ಕರ್ನಾಟಕದ ಮುಖ್ಯಮಂತ್ರಿಗಳಾದ ಶ್ರೀ ಎಸ್.ಬಂಗಾರಪ್ಪನವರಿಂದ ಪಡೆದಿರುತ್ತಾರೆ. ತದನಂತರ ರಾಜ್ಯಾದ್ಯಂತ ೫೦ಕ್ಕೂ ಹೆಚ್ಚು ಕಲಾ ಉತ್ಸವಗಳಲ್ಲಿ ಶಹನಾಯಿ ವಾದನ ಕಾರ್ಯಕ್ರಮ ನೀಡಿರುತ್ತಾರೆ. ಇದಲ್ಲದೇ ಹೊರ ರಾಜ್ಯಗಳ ನಗರಗಳಾದ ಮೀರಜ್, ಕೊಲ್ಲಾಪುರ, ಪಣಜಿಗಳಲ್ಲಿಯೂ ಕಾರ್ಯಕ್ರಮ ನೀಡಿರುತ್ತಾರೆ.

ಇವರ ಸಂಗೀತ ಸಾಧನೆಗಾಗಿ ಹಲವಾರು ಸಂಗೀತ ಸಂಘ, ಸಂಸ್ಥೆಗಳು ಗೌರವ ಸಮ್ಮಾನಗಳನ್ನು ನೀಡಿದ್ದು, ೨೦೦೭ರಲ್ಲಿ ಇವರಿಗೆ ಸೊರಬದ ಸಂಗೀತ ಸೇವಾ ಸಮಿತಿಯಿಂದ "ನಾದಸುರಭಿ" ಪ್ರಶಸ್ತಿ ಲಭಿಸಿದೆ. ಶ್ರೀ ರಾಮಣ್ಣನವರು ಪ್ರತಿವರ್ಷ ಆನವಟ್ಟಿಯ ತಿಮ್ಮಾಪುರದಲ್ಲಿ ತಮ್ಮ ಮಾನಸ ಗುರುಗಳಾದ ದಿ॥ ಉಸ್ತಾದ್ ಬಿಸ್‌ಮಿಲ್ಲಾ ಖಾನ್‌ರವರ ಪುಣ್ಯತಿಥಿ ಅಂಗವಾಗಿ ಅಹೋರಾತ್ರಿ ಸಂಗೀತೋತ್ಸವ ಕಾರ್ಯಕ್ರಮ ನಡೆಸಿಕೊಂಡು ಬಂದಿರುತ್ತಾರೆ.

ಸುಮಾರು ೧೯ನೇ ಶತಮಾನದ ಆರಂಭದ ಕಾಲದಲ್ಲಿ ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿ ಪಂ. ಪಂಚಾಕ್ಷರಿ ಗವಾಯಿಗಳು, ಪಂ. ಪುಟ್ಟರಾಜ ಗವಾಯಿಗಳು, ಪಂ. ಸವಾಯಿ ಗಂಧರ್ವರು, ಪಂ. ಮಲ್ಲಿಕಾರ್ಜುನ ಮನ್ಸೂರ, ಹಾಗು ಪಂ. ದಿನಕರ ಕಾಯ್ಕಿಣಿಯವರಂತಹಾ ಸಂಗೀತ ದಿಗ್ಗಜರಿಂದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಘರಾಣಾ ಪದ್ಧತಿಯ ಮುಖಾಂತರ ಜನ್ಮ ತಾಳಿತು.

ಕಾಲಕ್ರಮೇಣ ಉತ್ತರ ಕರ್ನಾಟಕದಿಂದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಕರ್ನಾಟಕ ರಾಜ್ಯದ ಮೂಲೆಮೂಲೆಗೂ ಪಸರಿಸಿತು. ಹೀಗೆ ಕರ್ನಾಟಕದ ಹೃದಯ ಭಾಗದಲ್ಲಿರುವ ಮಲೆನಾಡಿನ ತವರು ಜಿಲ್ಲೆಯಾದ ಶಿವಮೊಗ್ಗದಲ್ಲೂ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಪಂ.ಗುರುಶಾಂತ ಗವಾಯಿಗಳು, ಪಂ. ರಾಜಾರಾಮ್ ಸೊರಬ, ಪಂ.ಇಂದೂಧರ ನಿರೋಡಿಯವರಂತ ಸಂಗೀತಗಾರ ರಿಂದ ದಿನೇದಿನೇ ದಾಪುಗಾಲಿಡುತ್ತಾ ಬೆಳೆಯಿತು. ಕರ್ನಾಟಕ ಸಂಗೀತವೇ ಸಿಂಹಪಾಲು ಇದ್ದಂತಹಾ ಆ ಕಾಲಘಟ್ಟದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಹಲವು ರೀತಿಯ ಏರು–ಪೇರುಗಳನ್ನು ದಾಟಿ ಸಂಗೀತಾಸಕ್ತರ ಹಾಗೂ ಕಲಾಪೋಷಕರ ಮನದಾಳದಲ್ಲಿ ನೆಲೆಯೂರಲು, ಪ್ರಚಾರಪಡೆಯಲು ದಶಕಗಳೇ ಕಳೆದವು ಎಂದರೆ ತಪ್ಪಾಗಲಾರದು.

### ೬.೪ ಕಲಾಪೋಷಕ ಸಂಘ, ಸಂಸ್ಥೆಗಳು ಮತ್ತು ಸಂಗೀತ ಪಾಠಶಾಲೆಗಳು

* 'ಸಂಗೀತ ಸೇವಾ ಸಮಿತಿ' ಸೊರಬ
* 'ಸಂಗೀತ ಸಾಗರ', ಸಾಗರ
* 'ಶ್ರೀ ಸದ್ಗುರು ಹಿಂದೂಸ್ತಾನಿ ಸಂಗೀತ ವಿದ್ಯಾಲಯ', ಸಾಗರ
* 'ಅಂತರಂಗ ಟ್ರಸ್ಟ್', ಸಾಗರ
* 'ನಿನಾದ ಪ್ರತಿಷ್ಠಾನ', ಸಾಗರ
* 'ಸಪ್ತ ಸ್ವರ ಸಂಗೀತ ಸಭಾ', ಶಿವಮೊಗ್ಗ
* 'ನಾದಭಾರತಿ ಪ್ರತಿಷ್ಠಾನ' ಕಾರ್ಗಲ್, ಸಾಗರ ತಾ.
* 'ಶ್ರೀ ವೀರೇಶ್ವರ ಪುಣ್ಯಾಶ್ರಮ', ಶಿವಮೊಗ್ಗ
* 'ಶ್ರೀ ಸರಸ್ವತಿ ಕಲಾನಿಕೇತನ', ತೀರ್ಥಹಳ್ಳಿ
* 'ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ವಿದ್ಯಾಲಯ', ಸಾಗರ
* 'ಸುಮುಖ ಸಂಗೀತ ನೃತ್ಯ ವಿದ್ಯಾಲಯ' ತೀರ್ಥಹಳ್ಳಿ
* 'ಶ್ರೀ ಗುರು ಪುಟ್ಟರಾಜ ಗಾನ ಮಂದಿರ' ಭದ್ರಾವತಿ
* 'ಶ್ರೀ ಗುರುಕೃಪಗಾನ ಮಂದಿರ', ಶಿವಮೊಗ್ಗ
* 'ಆಲಾಪ', ಶಿವಮೊಗ್ಗ
* 'ಶ್ರೀ ಸರಸ್ವತಿ ಸಂಗೀತ ವಿದ್ಯಾಲಯ', ಶಿವಮೊಗ್ಗ

## ಸಂಗೀತ ಸೇವಾ ಸಮಿತಿ, ಸೊರಬ

ಸಮಾಜದಲ್ಲಿ ಶಾಸ್ತ್ರೀಯ ಸಂಗೀತವನ್ನು ಉಳಿಸುವ, ಬೆಳೆಸುವ ಮಹದಾಸೆಯನ್ನೇ ಆಧಾರವಾಗಿಟ್ಟು ಕೊಂಡು ಸಂಗೀತ ಸೇವಾ ಸಮಿತಿಗೆ ಸಂಸ್ಥಾಪಕರಾಗಿ ಚಾಲನೆ ನೀಡಿದವರು ದಿ॥ ಪಂ. ಬಿ.ನಾರಾಯಣಪ್ಪ ನವರು. ಸಮಿತಿಯ ಕಾರ್ಯದರ್ಶಿಯಾಗಿ ಗುರುಗಾನ ಸ್ಮರಣೆಯನ್ನು ಸಾಕಾರಗೊಳಿಸಿದ ಶ್ರೇಯಸ್ಸು ಇವರಿಗೆ ಸಲ್ಲುತ್ತದೆ.

೧೯೬೩ರಲ್ಲಿ ದಿ॥ ಪಂ. ಗುರುಶಾಂತ ಗವಾಯಿಗಳವರ ಪ್ರಥಮ ಸ್ಮರಣೆಯನ್ನು ಆಚರಿಸಬೇಕೆಂದಾಗ ಪಂ.ನಾರಾಯಣಪ್ಪನವರಿಗೆ ಹೊಳೆದದ್ದು ಕುಂದಗೋಳದಲ್ಲಿ ದಿ॥ ಸವಾಯಿ ಗಂಧರ್ವರ ಪುಣ್ಯತಿಥಿ ಆಚರಿಸುವಂತೆಯೇ ಸೊರಬದಲ್ಲಿಯೂ ಅವರ ಗುರುಗಳ ಪುಣ್ಯತಿಥಿ ಆಚರಿಸಬೇಕೆಂಬ ಮಹತ್ವಾಕಾಂಕ್ಷೆ ಚಿಗುರೊಡೆಯಿತು. ಅಭಿಮಾನಿಗಳು, ಸಂಗೀತ ಪ್ರೇಮಿಗಳು, ಕಲಾಪೋಷಕರ ಜೊತೆ ಕೈಜೋಡಿಸಿ, "ಸಂಗೀತ ಸೇವಾ ಸಮಿತಿ"ಯನ್ನು ೧೯೬೪ರಲ್ಲಿ ಸಮಿತಿಯ ಬೆನ್ನೆಲುಬಾಗಿ ಸ್ಥಾಪಿಸಿದರು. ಕುಪ್ಪಗುಡ್ಡೆಯ ದಿ॥ ಶ್ರೀ ಗಂಗಾಧರರಾವ್ ನಾಡಿಗೇರರವರು ಸಮಿತಿಯ ಅಧ್ಯಕ್ಷರಾಗಿ ಮುಂಚೂಣಿಯಲ್ಲಿದ್ದು ಸಂಗೀತ ಸೇವಾ ಸಮಿತಿಗೆ ಚೈತನ್ಯ ರೂಪ ತಂದುಕೊಟ್ಟರು. ಮುಂದಿನ ದಿನಗಳಲ್ಲಿ ಕರ್ನಾಟಕ ರಾಜ್ಯದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಎಸ್.ಬಂಗಾರಪ್ಪನವರು ಮಹಾಪೋಷಕರಾಗಿ ಹಾಗೂ ಸಂಸದರ ನಿಧಿಯಿಂದ ಒಂದು ಲಕ್ಷ ರೂಪಾಯಿಗಳನ್ನು ದೇಣಿಗೆಯಾಗಿ ನೀಡಿ ಈ ಇಡಿಗಂಟಿನಿಂದ ಪ್ರತಿವರ್ಷ ಸಂಗೀತ ಕಾರ್ಯಕ್ರಮ ನಿರಂತರವಾಗಿ ನಡೆಯುವಂತೆ ಮಾಡಿದರು. ಸತತವಾಗಿ ಸಂಗೀತ ಸೇವಾ ಸಮಿತಿಯ ಜೊತೆ ಜೊತೆಯಲ್ಲಿ ಹೆಜ್ಜೆ ಹಾಕಿದ ಸಂಸದರು ಗೌರವ ಅಧ್ಯಕ್ಷರಾಗಿ ಸಮಿತಿಯನ್ನು ಬೆಳೆಸಿದರು. ಅಹೋರಾತ್ರಿ ನಡೆಯುವ ಸಂಗೀತ ಕಾರ್ಯಕ್ರಮದಲ್ಲಿ ಬಿಡುವಿಲ್ಲದ ಸಮಯದಲ್ಲೂ ಶ್ರೀಯುತರು ಪಾಲ್ಗೊಂಡುದುದು ಸ್ಮರಣೀಯವಾಗಿದೆ.

ಕೇವಲ ಪುಣ್ಯತಿಥಿ ದಿನಾಚರಣೆಯನ್ನು ಮಾಡಿದರೆ ಸಾಲದು, ಸಂಗೀತ ಕ್ಷೇತ್ರದಲ್ಲಿ ಬದುಕನ್ನೇ ಅರ್ಪಿಸಿಕೊಂಡು ಸಾಧನೆ ಮಾಡಿದ ಹಿರಿಯ ಕಿರಿಯ ಕಲಾವಿದರನ್ನು ಗುರುತಿಸಿ ಪ್ರಶಸ್ತಿಗಳನ್ನು ನೀಡುವುದರ ಮೂಲಕ ಈ ಕ್ಷೇತ್ರದ ಹಳೇಬೇರು, ಹೊಸ ಚಿಗುರುಗಳಾದವರನ್ನು ಗೌರವಿಸಬೇಕೆಂಬ ಯೋಜನೆಯನ್ನು ಸಮಿತಿ ರಚಿಸಿತು. ಅಂತೆಯೇ ೧೯೯೩ರಿಂದ ಹಿರಿಯ ಕಲಾವಿದರಿಗೆ "ಚಂದ್ರಹಾಸ" ಪ್ರಶಸ್ತಿಯನ್ನು ಹಾಗೂ ಕಿರಿಯ ಕಲಾವಿದರಿಗೆ "ಯುವ ಪ್ರತಿಭಾ ಪುರಸ್ಕಾರ"ಗಳನ್ನು ಸಮಿತಿ ಪ್ರಧಾನ ಮಾಡುತ್ತಾ ಬಂದಿರುವುದು ಶ್ಲಾಘನೀಯ. ಇದರ ಜೊತೆಗೆ "ಮಹಾಪೋಷಕ ಪುರಸ್ಕಾರ"ವನ್ನು ಮತ್ತು "ನಾದಸುರಭೀ ಪುರಸ್ಕಾರ"ವನ್ನು ನೀಡುತ್ತಾ, ಬಂದಿದೆ. ದುರ್ದೈವದಿಂದ ೧೯೯೭ರಲ್ಲಿ ಶ್ರೀ ಗಂಗಾಧರ ರಾವ್ ನಾಡಿಗೇರ್ ಅವರು ವಿಧಿವಶರಾದರು. ಅವರ ನಿಧನ ಸಮಿತಿಗೆ ತುಂಬಲಾರದ ನಷ್ಟವೆಂಬಂತಾಯಿತು. ಚಂದ್ರಹಾಸ ಪ್ರಶಸ್ತಿಯನ್ನು ದಿ॥ ಗಂಗಾಧರರಾವ್ ನಾಡಿಗೇರ ಅವರ ಸ್ಮರಣಾರ್ಥವಾಗಿಯೇ ಪ್ರಧಾನ ಮಾಡುತ್ತಾ ಬಂದಿದೆ.

ಈ ಸಂಸ್ಥೆಯ ಸಂಗೀತದ ಪೋಷಣೆಗಾಗಿಯೇ ಹುಟ್ಟಿರುವ ಸಂಸ್ಥೆಯಾಗಿದ್ದು, ಗುರುಗಳ ಪುಣ್ಯ ಸ್ಮರಣೆಯ ಕಾರ್ಯಕ್ರಮದ ಜೊತೆಜೊತೆಗೆ ವರ್ಷದ ಮಧ್ಯದಲ್ಲೂ ಸಂಗೀತ ಕಾರ್ಯಕ್ರಮ ನಡೆಸಿಕೊಂಡು ಸಂಗೀತ ಕಲೆಯ ಪೋಷಣೆ ಮಾಡುತ್ತಾ ಬಂದಿರುವುದು ಶ್ಲಾಘನೀಯ. ಕರ್ನಾಟಕ ಸಂಗೀತವಾಗಿರಲಿ, ಹಿಂದೂಸ್ತಾನಿ ಸಂಗೀತವಾಗಿರಲಿ ಭಾರತೀಯ ಸಂಗೀತದ ಎರಡು ಕಣ್ಣುಗಳಂತೆ ಮಹತ್ವ ಕೊಟ್ಟು ಎರಡೂ ಪದ್ಧತಿಯ ಗಾಯನ, ವಾದನ ಕಾರ್ಯಕ್ರಮ ನಡೆಸಿದ ಕೀರ್ತಿ ಈ ಸಮಿತಿಗೆ ಸಲ್ಲುತ್ತದೆ. ಪಂಡಿತ ಗುರುಶಾಂತ ಗವಾಯಿಗಳು ಕರ್ನಾಟಕ ಸಂಗೀತ ಹಾಗೂ ಹಿಂದೂಸ್ತಾನಿ ಸಂಗೀತ ಪದ್ಧತಿಗಳೆರಡರಲ್ಲೂ ಪರಿಣಿತರಾಗಿದ್ದರು. ಎರಡೂ ಪದ್ಧತಿಯನ್ನು ಶಿಷ್ಯಂದಿರಿಗೆ ಕಲಿಸುತ್ತಿದ್ದರು. ಗುರುವಿನಂತೆಯೇ ಶಿಷ್ಯರಿಂದ ಪಂಡಿತ ಬಿ.ನಾರಾಯಣಪ್ಪನವರು ಎರಡೂ ಪದ್ಧತಿಯನ್ನು ಕರಗತ ಮಾಡಿಕೊಂಡಿದ್ದರು. ಇದುವೇ ಈ ಸಂಸ್ಥೆಯ ಕಾರ್ಯಕ್ರಮಗಳಿಗೆ ಮೂಲ ಪ್ರೇರಣೆಯಾಗಿದೆ.

ಈ ಸಂಸ್ಥೆಯನ್ನು ಪೋಷಿಸಿ, ಬೆಳೆಸಿ ಜೀವಂತವಾಗಿರಿಸಲು ಶ್ರಮಿಸಿದ, ತ್ರಿಮೂರ್ತಿಗಳಾದ ಶ್ರೀ ಬಂಗಾರಪ್ಪನವರು, ಪಂಡಿತ ಬಿ.ನಾರಾಯಣಪ್ಪನವರು ಹಾಗೂ ಶ್ರೀ ಗಂಗಾಧರರಾವ್ ನಾಡಿಗೇರ, ಕುಪ್ಪಗಡ್ಡೆರವರು ಈಗಿಲ್ಲ, ಆದರೂ ಈ ಸಂಸ್ಥೆ ಧೃತಿಗೆಟ್ಟಿಲ್ಲ. ಪಂಡಿತ ಬಿ.ನಾರಾಯಣಪ್ಪನವರ ಪಂಚ ಪಾಂಡವರಂತಿರುವ ಐದು ಜನ ಮಕ್ಕಳು ಹಾಗೂ ಸಂಸ್ಥೆಯ ಇನ್ನುಳಿದ ಸದಸ್ಯರು ಸಾರ್ವಜನಿಕರ ಸಹಕಾರದೊಂದಿಗೆ ಸಂಸ್ಥೆಯನ್ನು ನಡೆಸಿಕೊಂಡು ಬರುತ್ತಿದ್ದಾರೆ.

೨೦೧೫-೧೬ನೇ ಸಾಲಿನಲ್ಲಿ ಸಂಗೀತ ಸೇವಾ ಸಮಿತಿಯು ತನ್ನ ೫೦ನೇ ಸುವರ್ಣ ಸಂಗೀತೋತ್ಸವ ಅತಿ ವಿಜೃಂಭಣೆಯಿಂದ ೨ ದಿನಗಳ ಕಾಲ ಅಹೋರಾತ್ರಿ ಸಂಗೀತ ಕಾರ್ಯಕ್ರಮ ನಡೆಸಿ, ಸುತ್ತಮುತ್ತಲಿನ ಸಂಗೀತ ಪ್ರೇಮಿಗಳಿಗೆ ರಸದೌತಣ ನೀಡಿತು. ಸುವರ್ಣ ಸಂಗೀತೋತ್ಸವ ಸಂದರ್ಭದಲ್ಲಿ "ಗುರುಶಾಂತ ಸೌರಭ" ಎಂದು ಸುವರ್ಣ ಮಹೋತ್ಸವದ ಸಂಚಿಕೆಯನ್ನು ಪ್ರಕಟಿಸಿದೆ. ೫೦ ವರ್ಷಗಳ ಕಾಲ ಸಂಗೀತವನ್ನು ಪೋಷಿಸಿ ಬೆಳೆಸಿದ ಕರ್ನಾಟಕ ರಾಜ್ಯದ ಕೆಲವೇ ಕೆಲವು ಸಂಗೀತ ಸಂಸ್ಥೆಗಳಲ್ಲಿ ಇದೂ ಒಂದು.

**೧೯೯೩ರಿಂದ ಇಲ್ಲಿಯವರೆಗೆ "ಚಂದ್ರಹಾಸ ಪ್ರಶಸ್ತಿ"ಯನ್ನು ಪಡೆದ ಸಂಗೀತ ಕಲಾವಿದರು**

೧. ಪಂಡಿತ ಚಂದ್ರಶೇಖರ ಪುರಾಣಿಕಮಠ-ಧಾರವಾಡ

೨. ಪಂಡಿತ ಆರ್.ವಿ.ಶೇಷಾದ್ರಿ ಗವಾಯಿಗಳು

೩. ಪಂಡಿತ ಅರ್ಜುನ್ ಸಾ ನಾಕೋಡ ಧಾರವಾಡ

೪. ಪಂಡಿತ ಬಸವರಾಜ ಬೆಂಡಿಗೇರಿ

೫. ಶ್ರೀ ವೆಂಕಟೇಶ ಗೋಳಕಿಂಡಿ-ಧಾರವಾಡ

೬. ಶ್ರೀಮತಿ ಕೃಷ್ಣಾ ಹಾನಗಲ್

೭. ಡಾ.ಹನುಮಣ್ಣ ನಾಯಕ ದೊರೆ

೮. ಶ್ರೀಮತಿ ಶ್ಯಾಮಲಾ ಜಿ. ಭಾವೆ

೯. ಪಂಡಿತ ಗಣಪತಿ ಭಟ್ ಹಾಸಣಗಿ

೧೦. ಶ್ರೀ ಶ್ರೀಪಾದ ಹೆಗಡೆ, ಕಂಪ್ಲಿ, ಧಾರವಾಡ

೧೧. ಶ್ರೀಮತಿ ಶಾರದಾ ಹಾನಗಲ್

೧೨. ಪಂಡಿತ ಎಂ.ವೆಂಕಟೇಶಕುಮಾರ ಧಾರವಾಡ

೧೩. ಪಂ. ಕುಮಾರದಾಸ್

೧೪. ಪಂ. ವಿನಾಯಕ ತೊರವಿ–ಬೆಂಗಳೂರು

೧೫. ಪಂ. ಸೋಮನಾಥ ಮರಡೂರು–ಧಾರವಾಡ

೧೬. ಪಂ. ಎಂ.ಪಿ.ಹೆಗಡೆ–ಹಡಿಗೇರಿ

೧೭. ಪಂ. ಇಂಧೂಧರ ಪ್ರಜಾರ–ಬೆಂಗಳೂರು

೧೮. ಪಂ. ಜಯತೀರ್ಥ ಮೇವುಂಡಿ–ಹುಬ್ಬಳ್ಳಿ

೧೯. ಪಂ. ರವೀಂದ್ರ ಯಾವಗಲ್–ಬೆಂಗಳೂರು

**"ಯುವ ಪ್ರಶಸ್ತಿ" ವಿಜೇತರು**

೧. ಕು॥ ಆರಾಧನಾ ಹೆಗಡೆ

೨. ಶ್ರೀಮತಿ ಶೃತಿ ಭಟ್

೩. ಶ್ರೀಮತಿ ತೃಪ್ತಿ ಜಯಂತ ಹೆಗಡೆ

೪. ಕು॥ ಯೋಗೀಶ್ ಭಟ್

೫. ಕು॥ ಸುಧಾಮ ದಾನಗೇರಿ

೬. ಶ್ರೀಮತಿ ಸಂಗೀತಾ ಕಾಖಂಡಕಿ–ರಾಯಚೂರು

೭. ಶ್ರೀ ಧನಂಜಯ ಹೆಗಡೆ–ಬೆಂಗಳೂರು

೮. ಶ್ರೀಮತಿ ವಾಣಿ ಹರ್ಡಿಕರ್–ಯಲ್ಲಾಪುರ

೯. ಶ್ರೀಮತಿ ರೋಹಿಣಿ ದೇಶಪಾಂಡೆ

೧೦. ಶ್ರೀ ಮೋಹನ ಕಲಬುರಗಿ

೧೧. ಶ್ರೀಮತಿ ಗೀತಾ ಮಂಡಿಗೇರಿ

೧೨. ಶ್ರೀ ಕಿರಣಭಟ್, ಶಿರಸಿ

೧೩. ಶ್ರೀ ಲಕ್ಷ್ಮೀಶ್ವರ ಕಲ್ಗುಂಡಿಕೊಪ್ಪ

೧೪. ಶ್ರೀ ಎಫ್.ರಾಜೇಶ್, ಬೆಂಗಳೂರು

೧೫. ಶ್ರೀ ಕೆ.ಸುಬ್ರಹ್ಮಣ್ಯ ಹೆಗಡೆ ಹಳ್ಳಿದಕೆರೆ

**ನಾದಸುರಭಿ ಪ್ರಶಸ್ತಿ ವಿಜೇತರು**

೧. ಪಂಡಿತ ತುಕಾರಾಮ್‌ರಾವ್ ರಂಗಧೋಳ್ ಶಿವಮೊಗ್ಗ

೨. ಶ್ರೀ ಸಂಜೀವ ಯು.ಪೋತದಾರ್

೩. ಶ್ರೀ ಮಂಜುನಾಥ ಭಟ್ ನೆಬ್ಬೂರು

೪. ಶ್ರೀ ರಾಮಣ್ಣ ಭಜಂತ್ರಿ ಆನವಟ್ಟಿ

ಇವರುಗಳಲ್ಲದೇ ರಾಜ್ಯ, ರಾಷ್ಟ್ರ ಹಾಗೂ ಅಂತರರಾಷ್ಟ್ರೀಯ ಮಟ್ಟದ ಹಿರಿಯ ವಿದ್ವಾಂಸರು ಪಂಡಿತರು ಸಂಗೀತ ಸೇವಾ ಸಮಿತಿ ಸೊರಬದ ವೇದಿಕೆಯಲ್ಲಿ ತಮ್ಮ ಕಲಾ ಸೇವೆ ಸಲ್ಲಿಸಿದ್ದಾರೆ.

## ಶ್ರೀ ಸದ್ಗುರು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ವಿದ್ಯಾಲಯ, ಸಾಗರ

ಶಿವಮೊಗ್ಗ ಜಿಲ್ಲೆಯ ಸಾಗರ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಶಾಸ್ತ್ರೀಯ ಸಂಗೀತದ ಪರಿಮಳವನ್ನು ಬೀರುತ್ತಾ, ಹಿಂದೂಸ್ತಾನಿ ಸಂಗೀತವನ್ನೇ ಕೇಂದ್ರವಾಗಿಟ್ಟುಕೊಂಡು ೧೯೯೮ರಲ್ಲಿ ಪ್ರಾರಂಭವಾದ ಸಂಸ್ಥೆ ಇದಾಗಿದೆ. ೨೦೦೦ದಿಂದ ವೇದನಾದ ಪ್ರತಿಷ್ಠಾನದ ಸಹಯೋಗದೊಂದಿಗೆ ಸಂಗೀತ ಪ್ರಪಂಚದಲ್ಲಿ ಅಂಬೆಗಾಲಿಟ್ಟ ಈ ಸಂಸ್ಥೆ ಇಂದು ೪೦೦ಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಹಿಂದೂಸ್ತಾನಿ ಸಂಗೀತ ಪಾಠ ಕಲಿಸುತ್ತಿದೆ.

ವಿದೂಷಿ ವಸುಧಾ ಶರ್ಮ ಹಳೇ ಇಕ್ಕೇರಿಯವರು ಸಂಗೀತ ಶಿಕ್ಷಕರಾಗಿ ಬೆಳೆಸಿದ ಈ ಸಂಸ್ಥೆ ಕಳೆದ ೨೦ ವರ್ಷಗಳಲ್ಲಿ ಸಾಗರ ಪ್ರಾಂತ್ಯದಲ್ಲಿ ಅತಿ ಹೆಚ್ಚು ಜನಮನ್ನಣೆ ಗಳಿಸಿದ ಕಲಾಸಂಸ್ಥೆಯಾಗಿದೆ. ಪ್ರಾಥಮಿಕ ಸಂಗೀತ ಶಿಕ್ಷಣದಿಂದ ಜೂನಿಯರ್, ಸೀನಿಯರ್, ವಿದ್ವತ್, ವಿಶಾರದಗಳಂತಹ ಸಂಗೀತ ಪರೀಕ್ಷೆಯಲ್ಲಿ ಈ ಸಂಸ್ಥೆಯ ಹಲವಾರು ವಿದ್ಯಾರ್ಥಿಗಳು ಪ್ರಥಮ ಶ್ರೇಣಿಯಲ್ಲಿ ಜಿಲ್ಲೆಗೆ, ರಾಜ್ಯಕ್ಕೆ ಮೊದಲ ಸ್ಥಾನದಲ್ಲಿ ತೇರ್ಗಡೆ ಹೊಂದಿ, ಸಂಸ್ಥೆಗೆ ಹಾಗೂ ಸಾಗರ ಪ್ರಾಂತ್ಯಕ್ಕೆ ಹೆಸರು ತಂದು ಕೊಟ್ಟಿರುತ್ತಾರೆ.

ಕಳೆದ ೧೮ ವರ್ಷಗಳಿಂದ ಪ್ರತಿವರ್ಷ ಸಂಕ್ರಾಂತಿಯ ಸಮಯದಲ್ಲಿ ೩ ದಿನಗಳ ಅಹೋರಾತ್ರಿ ಸಂಗೀತೋತ್ಸವವನ್ನು ಈ ಸಂಸ್ಥೆಯು ನಡೆಸಿಕೊಂಡು ಬಂದಿದ್ದು, ದೇಶದಾದ್ಯಂತ ಹಿರಿ, ಕಿರಿಯ ಸಂಗೀತ ಕಲಾವಿದರನ್ನು ಆಹ್ವಾನಿಸಿ ಸಂಗೀತ ಕಾರ್ಯಕ್ರಮ ನಡೆಸಿ, ಶ್ರೋತೃಗಳಿಗೆ ಸಂಗೀತದ ರಸದೌತಣ ನೀಡುತ್ತಾ ಬಂದಿದೆ. ಇದೇ ಸಂದರ್ಭದಲ್ಲಿ ಸಂಗೀತ ಕಲಾವಿದರನ್ನು ಅವರವರ ಕಲಾಸೇವೆಯನ್ನು ಗುರುತಿಸಿ "ಸಾಧನಾ ಪ್ರಶಸ್ತಿ", ಸ್ವರಮೇಧಾ ಪ್ರಶಸ್ತಿ" ಹಾಗೂ "ಪ್ರೇರಣಾ ಪ್ರಶಸ್ತಿ"ಗಳನ್ನು ನೀಡಿ ಸನ್ಮಾನಿಸುತ್ತಾ ಬಂದಿದೆ.

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವಲ್ಲದೇ ಕರ್ನಾಟಕೀ ಸಂಗೀತ, ನಾಟಕ, ಹವ್ಯಾಸಿರಂಗ ಭೂಮಿ ಕಲಾವಿದರನ್ನು ಆಹ್ವಾನಿಸಿ ಕಛೇರಿ ನಡೆಸಿದ ಶ್ರೇಯಸ್ಸು ಈ ಸಂಸ್ಥೆಗೆ ಲಭಿಸುತ್ತದೆ. ಪ್ರತಿಷ್ಠಿತ ಕುಂದಗೋಳದ ಸಂಗೀತೋತ್ಸವದಂತೆ ಪ್ರತಿವರ್ಷ ಈ ಸಂಸ್ಥೆಯ ಸಂಗೀತೋತ್ಸವವು ಬೆಳೆಯುತ್ತಿದ್ದು ಸಹಸ್ರಾರು ಸಂಗೀತ ಪ್ರೇಮಿಗಳನ್ನು, ಸಂಗೀತ ಕಲಾರಾಧಕರನ್ನು, ಆಸಕ್ತರನ್ನು ಬೆಳೆಸುತ್ತಿದೆ. ವಾರ್ಷಿಕ ಸಂಗೀತೋತ್ಸವವಲ್ಲದೇ ಮಾಸಿಕ, ತ್ರೈಮಾಸಿಕ, ಸಂಗೀತ ಕಾರ್ಯಕ್ರಮಗಳನ್ನು ನಡೆಸಿ ಸ್ಥಳೀಯ ಕಲಾವಿದರಿಗೆ ಈ ಕಾರ್ಯಕ್ರಮಗಳಲ್ಲಿ ಆದ್ಯತೆ ನೀಡಿ ಅವರನ್ನೂ ಬೆಳಕಿಗೆ ತರುವ ಕಾರ್ಯ ಈ ಸಂಸ್ಥೆ ಮಾಡುತ್ತಿದೆ.

ಸಂಗೀತ ವಿದ್ಯಾಲಯದ ವಿದ್ಯಾರ್ಥಿಗಳ ಪೋಷಕರು, ಸಾಗರದ ಸಂಗೀತ ಪ್ರೇಮಿಗಳು, ದಾನಿಗಳ ಸಹಾಯದಿಂದ ಪ್ರತಿವರ್ಷ ಸಂಗೀತೋತ್ಸವ ಅತೀ ವಿಜೃಂಭಣೆಯಿಂದ ನಡೆದು ಬಂದಿದೆ ಎಂಬುದು ಈ ಸಂಸ್ಥೆಯ ಸಂಗೀತ ಶಿಕ್ಷಕಿ ವಿದೂಷಿ ವಸುಧಾ ಶರ್ಮರವರ ಮನದಾಳದ ಮಾತಾಗಿದೆ.

೧೮ ವಸಂತಗಳನ್ನು ಕಂಡ ಈ ಸಂಗೀತ ವಿದ್ಯಾಲಯದ ಸಂಗೀತೋತ್ಸವದಲ್ಲಿ ನಾಡಿನ ಹಲವು ಸಂಗೀತ ಕಲಾವಿದರು ಪಾಲ್ಗೊಂಡಿದ್ದು ಅವರುಗಳಲ್ಲಿ ಪಂಡಿತ ಇಂಧೂಧರ ನಿರೋಡಿ, ಪಂಡಿತ ಮೋಹನ ಹೆಗಡೆ ಹುಣಸೇಕೊಪ್ಪ, ಪಂಡಿತ ಎಂ.ವೆಂಕಟೇಶಕುಮಾರ, ಪಂಡಿತ ಚಂದ್ರಶೇಖರ ಪುರಾಣಿಕಮಠ, ಪಂಡಿತ ಬಿ.ನಾರಾಯಣಪ್ಪ ಸೊರಬ, ವಿದೂಷಿ ಆರತಿ ಅಂಕಲೇಕರ್, ವಿದೂಷಿ ರಾಜಂರವರು, ಪಂಡಿತ ಪ್ರವೀಣ ಗೋಳ್ಕಿಂಡಿ, ಪಂಡಿತ ರವೀಂದ್ರ ಯಾವಗಲ್, ವಿದ್ವಾನ್ ಪದ್ಮನಾಭರವರು, ಶ್ರೀ ಶ್ರೀಪಾದ ಹೆಗಡೆ ಕಂಪ್ಲಿ, ವಿದೂಷಿ ಆರ್.ಎ.ರಮಾಮಣಿಯವರಂತಹವರು ಪ್ರಮುಖರು.

ಶಾಸ್ತ್ರೀಯ ಸಂಗೀತವನ್ನೇ ಕೇಂದ್ರವಾಗಿಟ್ಟುಕೊಂಡು ಬೆಳೆದು ಬಂದ ಈ ಸಂಸ್ಥೆ ಇನ್ನೂ ನೂರ್ಕಾಲ ಬೆಳೆಯಲಿ ಎಂಬುದೇ ಸಾಗರ ಜನತೆಯ ಅನಿಸಿಕೆಯಾಗಿದೆ.

## "ಸಂಗೀತ ಸಾಗರ" ಸಾಗರ

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನೇ ಆಧಾರವಾಗಿಟ್ಟುಕೊಂಡು ೧೯೮೦ರ ದಶಕದಲ್ಲಿ ಸಾಗರ ಪಟ್ಟಣದಲ್ಲಿ ಶ್ರೀ ಐ.ವಿ.ಹೆಗಡೆ, ಶ್ರೀ ವಿಜಯವಾಮನ ಹಾಗೂ ಶ್ರೀ ಎಸ್.ಎಸ್.ಕುಮುಟ ಮತ್ತಿತರ ಸಂಗೀತ ಆಸಕ್ತರಿಂದ ಪ್ರಾರಂಭಗೊಂಡ ಸಂಗೀತ ಸಾಗರ ಸಂಸ್ಥೆ ಪ್ರತಿವರ್ಷ ಸಂಗೀತೋತ್ಸವ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಸುತ್ತಾ ಬಂದಿದೆ.

ಪಂಡಿತ ಚಂದ್ರಶೇಖರ ಪುರಾಣಿಕಮಠ, ಉಸ್ತಾದ್ ಬಾಲೇಖಾನ್, ಪಂ. ರಘುನಾಥ ನಾಕೋಡ, ಶ್ರೀ ಬಾಲಚಂದ್ರ ನಾಕೋಡ, ಪಂ. ವೆಂಕಟೇಶಕುಮಾರ, ಕೋಲ್ಕತ್ತಾ ಆಕಾಶವಾಣಿಯ ಕಲಾವಿದರಾದ ಪಂ. ಸಾರಥಿ ಛಟರ್ಜಿ, ಹೀಗೆ ನೂರಾರು ಕಲಾವಿದರನ್ನು ಸಂಗೀತ ಸಾಗರ ಸಂಸ್ಥೆ ಕರೆಸಿ ಸಂಗೀತ ಕಾರ್ಯಕ್ರಮವನ್ನು ಸಾಗರ ಪಟ್ಟಣದಲ್ಲಿ ನಡೆಸುತ್ತಾ ಬಂದಿದೆ.

ತಮ್ಮ ಸಂಸ್ಥೆಯೊಂದೇ ಅಲ್ಲದೇ ಸಾಗರ ಸುತ್ತಮುತ್ತಲಿನ ವಿವಿಧ ಸಂಘಸಂಸ್ಥೆಯೊಂದಿಗೆ ಕೈ ಜೋಡಿಸಿ ಸಂಗೀತ ಕಾರ್ಯಕ್ರಮ ನಡೆಸಿದ ಹೆಗ್ಗಳಿಕೆ ಈ ಸಂಸ್ಥೆಗಿದೆ. ಈ ಭಾಗದ ಹಿರಿಯ ಸಂಗೀತ ಸಂಸ್ಥೆಯಾಗಿರುವ "ಸಂಗೀತ ಸಾಗರ" ಇಂದಿಗೂ ತನ್ನ ಅಸ್ತಿತ್ವವನ್ನು ಕಾದಿರಿಸಿಕೊಂಡಿದೆ. ವಿದೂಷಿ ವಸುಧಾಶರ್ಮ ಹಾಗೂ ಶ್ರೀ ಭಾಸ್ಕರ ಹೆಗಡೆ ಮುತ್ತಿಗೆ, ಪಂ. ಮಡಿವಾಳಯ್ಯ ಸಾಲಿಮಠರವರ ಸಂಗೀತೋತ್ಸವಗಳಲ್ಲಿ "ಸಂಗೀತ ಸಾಗರ" ಸಂಸ್ಥೆ ಕೈ ಜೋಡಿಸಿ ಆಯಾ ಕಾರ್ಯಕ್ರಮಕ್ಕೆ ಆರ್ಥಿಕ ಹಾಗೂ ಸಾಂಸ್ಥಿಕ ಬಲ ನೀಡುತ್ತಾ ಬಂದಿದೆ.

## "ಸಪ್ತಸ್ವರ ಸಂಗೀತ ಸಭಾ(ರಿ)" ಶಿವಮೊಗ್ಗ

ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಪರಂಪರೆಯನ್ನು ಉಳಿಸಿ, ಬೆಳೆಸಲು ಮತ್ತು ಶಿವಮೊಗ್ಗ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಶಾಸ್ತ್ರೀಯ ಸಂಗೀತ ಹಾಗೂ ಸುಗಮ ಸಂಗೀತ ರಸಿಕರನ್ನು ಸಂಘಟಿಸಲು ಸ್ಥಾಪಿತವಾದ ಸಂಘಟನೆಯೇ "ಸಪ್ತಸ್ವರ" ಸಂಗೀತ ಸಭಾ(ರಿ) ಶಿವಮೊಗ್ಗ.

ತಮ್ಮ ಜೀವನವನ್ನೇ ಸಂಗೀತಕ್ಕಾಗಿಯೇ ಅರ್ಪಿಸಿರುವ ಅರುಣ ಹಂಪಿಹೊಳಿ ಹಾಗೂ ಅವರ ಧರ್ಮಪತ್ನಿ ಶ್ರೀ ರೇಖಾ ಅರುಣ ಹಂಪಿಹೊಳಿ ದಂಪತಿಗಳ ಅವಿರತ ಪ್ರಯತ್ನದಿಂದಾಗಿ ಇಂದು ರಾಜ್ಯದಲ್ಲೇ ಪ್ರಸಿದ್ಧ ಸಂಗೀತ ವೇದಿಕೆಯಾಗಿ ಸ್ಥಾನವನ್ನು ಪಡೆದುಕೊಂಡಿರುವ "ಸಪ್ತಸ್ವರ" ಸಂಗೀತ ಸಭಾ ಖ್ಯಾತ ಉದ್ಯಮಿಗಳಾದ ಶ್ರೀ ಭಾಸ್ಕರ್ ಕಾಮತ್ ಮತ್ತು ಶ್ರೀ ಕೆ.ಜಿ.ಕುಮಾರಶಾಸ್ತ್ರಿ ಇವರ ಸಾಮರ್ಥ್ಯ ಸಾರಥ್ಯದಲ್ಲಿ ೧೩ ವಸಂತಗಳನ್ನು ಪೂರೈಸಿದೆ.

ಶಿವಮೊಗ್ಗ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಹಿಂದೂಸ್ತಾನಿ ಸಂಗೀತಕ್ಕೆ ಒಂದು ಶಾಶ್ವತ ವೇದಿಕೆಯನ್ನು ನಿರ್ಮಿಸಿ ಹಿಂದೂಸ್ತಾನಿ ಸಂಗೀತದ ಸುಧೆಯನ್ನು ಶ್ರೋತೃಗಳಿಗೆ ಉಣಬಡಿಸುವ ಮಹಾನ್ ಉದ್ದೇಶದಿಂದ "ಸಪ್ತಸ್ವರ" ಸಂಗೀತ ಸಭಾ ಸದಾ ಕ್ರಿಯಾಶೀಲವಾಗಿದೆ. ಪ್ರತೀ ವರ್ಷ

ಕನಿಷ್ಠ ೪ರಿಂದ ೬ ಕಾರ್ಯಕ್ರಮಗಳನ್ನು ನಿರಂತರವಾಗಿ ನೀಡುತ್ತಾ ದೇಶದ ಶ್ರೇಷ್ಠ ಹಿಂದೂಸ್ತಾನಿ ಕಲಾವಿದರನ್ನು ಆಹ್ವಾನಿಸಿ ಇದುವರೆಗೆ ೭೦ಕ್ಕೂ ಹೆಚ್ಚು ಸಂಗೀತ ಕಾರ್ಯಕ್ರಮಗಳನ್ನು ಏರ್ಪಡಿಸಿರುವ ಕೀರ್ತಿ "ಸಪ್ತಸ್ವರ" ಸಂಗೀತ ಸಭಾ ಪಡೆದಿದೆ.

ಕೇವಲ ಪ್ರಬುದ್ಧ ಕಲಾವಿದರಿಗೆ ಮಾತ್ರವಲ್ಲದೆ ಹಿಂದೂಸ್ತಾನಿ ಸಂಗೀತವನ್ನು ಪ್ರೋತ್ಸಾಹಿಸುವ ಮತ್ತು ಬೆಳೆಸುವ ನಿಟ್ಟಿನಲ್ಲಿ ಯುವ ಪ್ರತಿಭೆಗಳಿಗೆ ವೇದಿಕೆ ಕಲ್ಪಿಸಿ "ಸಪ್ತಸ್ವರ" ಸಂಗೀತ ಸಭಾ ತನ್ನ ಧ್ಯೇಯೋದ್ದೇಶವನ್ನು ಸಾರ್ಥಕಗೊಳಿಸುತ್ತಿದೆ. "ಸಪ್ತಸ್ವರ" ಸಂಗೀತ ಸಭಾ ವೇದಿಕೆಯಲ್ಲಿ ಕಾರ್ಯಕ್ರಮ ನೀಡಿದ ಹಿಂದೂಸ್ತಾನಿ ಕಲಾವಿದರುಗಳು.

**ಗಾಯನ:** ಪಂ. ಗಣಪತಿ ಭಟ್ ಹಾಸಣಗಿ, ಪಂ. ಎಂ.ವೆಂಕಟೇಶಕುಮಾರ, ಪಂ. ಕೈವಲ್ಯಕುಮಾರ ಗುರುವ, ಪಂ. ಜಯತೀರ್ಥ ಮೇವುಂಡಿ, ಡಾ. ಅಶೋಕ ಹುಗ್ಗಣ್ಣವರ್, ಡಾ. ಶಾಂತಾರಾಮ ಹೆಗಡೆ, ಶ್ರೀ ಶ್ರೀಪಾದ ಹೆಗಡೆ ಕಂಪ್ಲಿ, ಉಸ್ತಾದ್ ಹುಮಾಯೂನ್ ಹರ್ಲಾಪುರ, ಡಾ. ಜಯದೇವಿ ಜಂಗಮಶೆಟ್ಟಿ, ಪಂ. ಕುಮಾರದಾಸ್, ಶ್ರೀ ಧನಂಜಯ ಹೆಗಡೆ, ಶ್ರೀ ರಮಾಕಾಂತ ಗಾಯಕವಾಡ, ಶ್ರೀ ನಾಗಭೂಷಣ ಹೆಗಡೆ, ಶ್ರೀ ಕುಮಾರ ಮರಡೂರ ಮುಂತಾದವರು.

**ವಾದನ:** ಪಂ. ವಸಂತ ಕನಕಾಪುರ, ಪಂ. ರಘುನಾಥ ಹಾಗೂ ಡಾ. ರವಿಕಿರಣ ನಾಕೋಡ, ಪಂ. ವೆಂಕಟೇಶ ಗೋಳ್ಕಿಂಡಿ, ಪಂ. ರವೀಂದ್ರ ಯಾವಗಲ್ ಮುಂತಾದವರು.

## ಶ್ರೀ ಗಾನಯೋಗಿ ಪಂಚಾಕ್ಷರಿ ಗವಾಯಿಗಳ ಸೇವಾ ಟ್ರಸ್ಟ್, ಶಿವಮೊಗ್ಗ ಡಾ. ಪಂಡಿತ ಪುಟ್ಟರಾಜ ಕವಿ ಗವಾಯಿಗಳ ಕುರುಡು ಮಕ್ಕಳ ಸಂಗೀತ ವಿದ್ಯಾಲಯ ಮತ್ತು ಶ್ರೀ ವೀರೇಶ್ವರ ಪುಣ್ಯಾಶ್ರಮ ಸಂಸ್ಕೃತ ಪಾಠಶಾಲೆ, ಶಿವಮೊಗ್ಗ.

ಗದಗಿನ ಶ್ರೀ ವೀರೇಶ್ವರ ಪುಣ್ಯಾಶ್ರಮದಂತೆಯೇ ಶಿವಮೊಗ್ಗದಲ್ಲಿ ಪಂ.ಆರ್.ಬಿ.ಸಂಗಮೇಶ್ವರ ಗವಾಯಿಗಳ ಮುಂದಾಳತ್ವದಲ್ಲಿ, ೧೯೫೫ರಲ್ಲಿ "ಶ್ರೀ ಗಾನಯೋಗಿ ಪಂಚಾಕ್ಷರಿ ಗವಾಯಿಗಳ ಸೇವಾ ಟ್ರಸ್ಟ್" ಪ್ರಾರಂಭವಾಯಿತು. ಅಂಧ, ಅನಾಥ, ಮಕ್ಕಳಿಗೆ, ಸಂಗೀತ ಆಸಕ್ತ ಮಕ್ಕಳಿಗೆ ಸಂಗೀತ ಹಾಗೂ ಸಂಸ್ಕೃತ ಪಾಠವನ್ನು ಉಚಿತವಾಗಿ ಕಲಿಸುವ ಧ್ಯೇಯೋದ್ದೇಶದಿಂದ ಈ ಸಂಸ್ಥೆ ಪ್ರಾರಂಭವಾಯಿತು.

ಅಂದಿನ ಕಾಲಮಾನದಲ್ಲಿ ಶಿವಮೊಗ್ಗ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವಿರಲಿಲ್ಲ. ಬದಲಾಗಿ ಕರ್ನಾಟಕಿ ಶಾಸ್ತ್ರೀಯ ಪದ್ಧತಿ ಹಾಗೂ ದೇವರನಾಮ ದಾಸರ ಪದಗಳನ್ನು ಹಾಡುವ ಕಲಾವಿದರಿದ್ದರು.

೧೯೫೯ರಲ್ಲಿ ಪಂ. ಆರ್.ಬಿ.ಸಂಗಮೇಶ್ವರ ಗವಾಯಿಗಳು ಶಿವಮೊಗ್ಗ ನಗರಕ್ಕೆ ಆಗಮಿಸಿ ಗದಗಿನ ವೀರೇಶ್ವರ ಪುಣ್ಯಾಶ್ರಮದ ಗುರು ಶಿಷ್ಯ ಪರಂಪರೆಯ ಮಾದರಿಯಂತೇ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಪಾಠಶಾಲೆಯನ್ನು ಪ್ರಾರಂಭಿಸಿದರು. ೧೯೫೯ರಿಂದ ಇಲ್ಲಿಯವರೆಗೂ ಪ್ರತಿವರ್ಷ ಪಂಡಿತ ಗಾನಯೋಗಿ ಪಂಚಾಕ್ಷರಿ ಗವಾಯಿಗಳ ಹಾಗೂ ಡಾ. ಪಂಡಿತ ಪುಟ್ಟರಾಜ ಕವಿ ಗವಾಯಿಗಳ ಪುಣ್ಯ ಸ್ಮರಣೆಯ ಸಂಗೀತೋತ್ಸವವನ್ನು ಈ ಸಂಸ್ಥೆ ನಡೆಸಿಕೊಂಡು ಬಂದಿದೆ.

ಪಂಡಿತ ಆರ್.ಬಿ.ಸಂಗಮೇಶ್ವರ ಗವಾಯಿಗಳೊಂದಿಗೆ ಪಂಡಿತ ಶಿವರಾಜ ಗವಾಯಿಗಳು ಇಲ್ಲೇ ಬಂದು ನೆಲೆಸಿ ಈ ಸಂಸ್ಥೆಯನ್ನು ಬೆಳೆಸಿದರು. ಪಂಡಿತ ಶಿವರಾಜ ಗವಾಯಿಗಳು ಗಾಯನ ಪ್ರವೀಣರು ಪಂ. ಬಸವರಾಜ ರಾಜಗುರುಗಳ ಸಮಕಾಲೀನವರು.

ಕರ್ನಾಟಕ ಸರ್ಕಾರದ ಸಹಯೋಗ ಹಾಗೂ ಅನುದಾನದಿಂದ ಪಂಡಿತ ಶಿವರಾಜ ಗವಾಯಿಗಳು "ಪಂಡಿತ ಪಂಚಾಕ್ಷರೀ ಸಂಗೀತ ವಿದ್ಯಾಲಯ" ಎಂಬ ಸಂಗೀತ ಪಾಠಶಾಲೆ ಪ್ರಾರಂಭಿಸಿದರು. ಕೆಲವರ್ಷ ಸಂಗೀತ ಪಾಠ ಮಾಡಿದರು. ಸಂಗೀತ ಜಗತ್ತಿನ ಹಲವು ಕಲಾವಿದರನ್ನು ತಯಾರು ಮಾಡಿದರು. ಅವರುಗಳಲ್ಲಿ ಶ್ರೀ ವೇಣುಗೋಪಾಲ, ಶ್ರೀ ಶಿವಶರಣ ಗವಾಯಿಗಳು, ಉಸ್ತಾದ ಹುಮಾಯೂನ್ ಹರ್ಲಾಪುರರು ಪ್ರಮುಖರು.

೧೯೮೭ರಲ್ಲಿ ಪಂಡಿತ ಶಿವರಾಜ ಗವಾಯಿಗಳು ಲಿಂಗೈಕ್ಯರಾದರು. ಇವರ ತರುವಾಯ ಇವರ ಶಿಷ್ಯರಾದ ಉಸ್ತಾದ್ ಹುಮಾಯೂನ್ ಹರ್ಲಾಪುರರವರು ಪಂಡಿತ ಪಂಚಾಕ್ಷರೀ ಸಂಗೀತ ವಿದ್ಯಾಲಯವನ್ನು ಮುಂದುವರಿಸಿದರು.

ಶ್ರೀ ಗಾನಯೋಗಿ ಪಂಚಾಕ್ಷರಿ ಗವಾಯಿಗಳ ಸೇವಾ ಟ್ರಸ್ಟ್ ಕಳೆದ ೩ ವರ್ಷಗಳಿಂದ ಪ್ರತಿ ತಿಂಗಳ ಅಮಾವಾಸ್ಯೆ ದಿನದಂದು ಸಂಗೀತ ಕಾರ್ಯಕ್ರಮವನ್ನು ಆಯೋಜಿಸುತ್ತಾ ಬಂದಿದೆ. ನಾಡಿನಾದ್ಯಂತ ಹಿರಿ-ಕಿರಿಯ ಸಂಗೀತ ಕಲಾವಿದರನ್ನು ಕರೆಸಿ ಗಾಯನ-ವಾದನ ಕಾರ್ಯಕ್ರಮವನ್ನು ನಡೆಸಿಕೊಂಡು ಬಂದಿದೆ.

## ಅಂತರಂಗ ಟ್ರಸ್ಟ್ (ರಿ) ಸಾಗರ

ರಂಗ ನಿರ್ದೇಶಕಿ ಶ್ರೀಮತಿ ಎಸ್.ಮಾಲತಿ ಹಾಗೂ ಶ್ರೀ ಪುರುಷೋತ್ತಮ ತಲವಾಟ, ಶ್ರೀ ಜಿ.ಆರ್. ಪಂಡಿತರವರ ನೇತೃತ್ವದಲ್ಲಿ ಸಂಗೀತ, ನಾಟಕ, ಸಾಹಿತ್ಯ ಕಲೆಯನ್ನೇ ಆಧಾರವಾಗಿಟ್ಟುಕೊಂಡು ಸಾಗರ ಭಾಗದಲ್ಲಿ ೨೦೧೪-೧೫ನೇ ಸಾಲಿನಲ್ಲಿ ಪ್ರಾರಂಭಗೊಂಡ ಸಂಸ್ಥೆ ಇದಾಗಿದೆ.

ನಾಡಿನಾದ್ಯಂತ ಹಲವು ಕಲಾವಿದರು ಈ ಟ್ರಸ್ಟಿನ ವೇದಿಕೆಯಲ್ಲಿ ಕಲಾ ಸೇವೆ ನೀಡಿರುತ್ತಾರೆ. ಸರ್ಕಾರಿ ಸಂಸ್ಥೆ ಹಾಗೂ ಸರ್ಕಾರದ ಸಹಯೋಗದೊಂದಿಗೆ ಹಲವು ಕಾರ್ಯಕ್ರಮಗಳನ್ನು ಸಾಗರದಾಚೆ ತೀರ್ಥಹಳ್ಳಿ, ಹೊಸನಗರ, ನಗರಗಳಲ್ಲಿ ಆಯೋಜಿಸಿದೆ. ಪ್ರತಿವರ್ಷ ವಿವಿಧ ಕಲಾ ಪ್ರೇರಿತ ಕಾರ್ಯಕ್ರಮ ಗಳನ್ನು ಈ ಟ್ರಸ್ಟಿನ ವೇದಿಕೆಯಲ್ಲಿ ಆಯೋಜಿಸಿ ಜನಸಾಮಾನ್ಯರಿಗೆ ಸಂಗೀತ, ಕಲೆ, ನಾಟಕ, ಸಾಹಿತ್ಯದ ಅರಿವು ಮೂಡಿಸುವ ಕಾರ್ಯ ನಡೆಸಿಕೊಂಡು ಬಂದಿದೆ. ಹಾಗೆಯೇ ಸಾಗರದಲ್ಲಿ ನಡೆಯುವ ಎಲ್ಲಾ ತರಹದ ಕಲಾಕಾರ್ಯಕ್ರಮಗಳಿಗೂ ಈ ಟ್ರಸ್ಟ್ ಸಹಯೋಗ ನೀಡುತ್ತಾ ಸಾಗರ ಭಾಗದಲ್ಲಿ ಕಲಾ ಪೋಷಣೆಯ ಕಾರ್ಯವನ್ನು ನಡೆಸಿಕೊಂಡು ಬಂದಿದೆ.

## "ನಾದಭಾರತಿ ಪ್ರತಿಷ್ಠಾನ" ಕಾರ್ಗಲ್ ಸಾಗರ ತಾಲ್ಲೂಕು

ಸಾಗರ ಭಾಗದ ತಬಲಾ ವಾದಕರಾದ ಶ್ರೀ ಶ್ರೀಕಾಂತ ಕಾಳಮಂಜಿ ಹಾಗೂ ಸಂಗೀತ ಶಿಕ್ಷಕ ರಾದ ಶ್ರೀ ಜನಾರ್ಧನ ಹೆಗಡೆಯವರು ಸಾಗರ ತಾಲ್ಲೂಕಿನ ಕಾರ್ಗಲ್‌ನಲ್ಲಿ ೨೦೦೦ರಲ್ಲಿ ಸ್ಥಾಪಿಸಿದ ಸಂಸ್ಥೆ ಇದಾಗಿದೆ.

ಈ ಸಂಸ್ಥೆಯ ಸಂಗೀತ ಪಾಠಶಾಲೆಯಲ್ಲಿ ಹಲವಾರು ವಿದ್ಯಾರ್ಥಿಗಳು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಸಂಗೀತ ಶಿಕ್ಷಕರಾದ ಶ್ರೀ ಜನಾರ್ಧನ ಹೆಗಡೆಯವರಲ್ಲಿ ಹಾಗೇ ತಬಲಾ ತರಬೇತಿಯನ್ನು ಶ್ರೀ ಶ್ರೀಕಾಂತ ಕಾಳಮಂಜಿಯವರಲ್ಲಿ ಪಡೆದಿರುತ್ತಾರೆ.

ಶಾಸ್ತ್ರೀಯ ಸಂಗೀತ ಒಂದೇ ಅಲ್ಲದೇ ಸುಗಮ ಸಂಗೀತವನ್ನು ಈ ಭಾಗದಲ್ಲಿ ಬೆಳೆಸುವ ನಿಟ್ಟಿನಲ್ಲಿ ಪ್ರತಿ ವರ್ಷ ಸುಗಮ ಸಂಗೀತದ ಮೇರು ಕಲಾವಿದರಾದ ಗರ್ತಿಕೆರೆ ರಾಘಣ್ಣನವರಂತಹವರನ್ನು ಕರೆಸಿ ಬೇಸಿಗೆ ಶಿಬಿರಗಳನ್ನು ಆಯೋಜಿಸಿ ಈ ಭಾಗದ ವಿದ್ಯಾರ್ಥಿಗಳಿಗೆ ಸುಗಮ ಸಂಗೀತದ ಜ್ಞಾನ ನೀಡುತ್ತಾ ಬಂದಿದ್ದಾರೆ. ಪ್ರತಿವರ್ಷ ಕರ್ನಾಟಕದಾದ್ಯಂತ ೧೦೦ಕ್ಕೂ ಹೆಚ್ಚು ಶಿಬಿರಾರ್ಥಿಗಳು ಈ ಶಿಬಿರದಿಂದ ಉತ್ತಮ ಜ್ಞಾನ ಪಡೆದುಕೊಂಡಿರುತ್ತಾರೆ.

ಕಾರ್ಗಲ್ ಅಂತಹ ಪುಟ್ಟ ಹಳ್ಳಿಯಲ್ಲಿ ಸಂಗೀತವನ್ನೇ ಕೇಂದ್ರವಾಗಿಟ್ಟುಕೊಂಡು ಬೆಳೆದುಬಂದ ಪ್ರತಿಷ್ಠಿತ ಸಂಸ್ಥೆ ಇದಾಗಿದೆ.

## "ಶ್ರೀ ಸರಸ್ವತಿ ಕಲಾನಿಕೇತನ" ತೀರ್ಥಹಳ್ಳಿ

ಸಂಗೀತ ಶಿಕ್ಷಕರಾದ ಶ್ರೀ ಸತೀಶ ಹೆಗಡೆಯವರು ತೀರ್ಥಹಳ್ಳಿಯಲ್ಲಿ ೨೦೧೦ರಲ್ಲಿ ಸ್ಥಾಪಿಸಿದ ಸಂಸ್ಥೆ ಇದಾಗಿದೆ. ಇದೂ ಕೂಡಾ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನೇ ಆಧಾರವಾಗಿಟ್ಟುಕೊಂಡು ಬೆಳೆದು ಬಂದ ಸಂಸ್ಥೆಯಾಗಿದೆ. ಹಲವಾರು ಸಂಗೀತ ವಿದ್ಯಾರ್ಥಿಗಳನ್ನು ಒಳಗೊಂಡ ಈ ಸಂಸ್ಥೆ ವಾರ್ಷಿಕ ಸಂಗೀತೋತ್ಸವವನ್ನು ಆಯೋಜಿಸಿ ನಾಡಿನಾದ್ಯಂತ ಹಲವು ಹಿರಿ-ಕಿರಿಯ ಸಂಗೀತಗಾರರನ್ನು ತೀರ್ಥಹಳ್ಳಿಗೆ ಆಹ್ವಾನಿಸಿ ಸಂಗೀತ ಕಾರ್ಯಕ್ರಮ ನಡೆಸಿಕೊಂಡು ಬರುತ್ತಿದೆ.

ಸಂಗೀತ ಪ್ರಪಂಚದಿಂದ ತುಸು ದೂರವೇ ಇರುವ ತೀರ್ಥಹಳ್ಳಿ ತಾಲ್ಲೂಕಿನಲ್ಲಿ ಹಿಂದೂಸ್ತಾನಿ ಹಾಗೂ ಇತರ ಬಗೆಯ ಕಲಾ ಕಾರ್ಯಕ್ರಮಗಳನ್ನು ಆಯೋಜಿಸುತ್ತಾ ಸಂಗೀತ ಪ್ರೇಮಿಗಳನ್ನು ಹುಟ್ಟು ಹಾಕುತ್ತಿರುವ ಸಂಸ್ಥೆ ಇದಾಗಿದೆ.

## "ನಿನಾದ ಪ್ರತಿಷ್ಠಾನ" ಶಿವಮೊಗ್ಗ

ಸಂಗೀತ ಶಿಕ್ಷಕರು, ಹಾರ್ಮೋನಿಯಂ ವಾದಕರೂ ಆದ ಶ್ರೀ ಶಿವಕುಮಾರ ಮಹಂತರವರ ಕನಸಿನ ಕೂಸು ಈ "ನಿನಾದ ಪ್ರತಿಷ್ಠಾನ". ೨೦೦೭ಕ್ಕೂ ಮುನ್ನವೇ ಜನ್ಮ ತಾಳಿದ ಈ ಪ್ರತಿಷ್ಠಾನ ಕೆಲವು ವರ್ಷ ಶ್ರೀ ಶಿವಕುಮಾರರವರ ನೇತೃತ್ವದಲ್ಲಿ ಸಣ್ಣ ಪುಟ್ಟ ಸಂಗೀತ ಕಾರ್ಯಕ್ರಮಗಳನ್ನು ಆಯೋಜಿಸಿಕೊಂಡು ಸಂಗೀತ ಪ್ರೇಕ್ಷಕರನ್ನು ತನ್ನೆಡೆ ಆಕರ್ಷಿಸಿಕೊಂಡಿತ್ತು. ೨೦೦೭ರಲ್ಲಿ ಶ್ರೀ ಬಿ.ಆರ್. ಮಧುಸೂಧನ, ದಿ॥ ಆನಂದ ಕೊಳಲುವಾದಕರು, ತಬಲಾವಾದಕರಾದ ಶ್ರೀ ಅರವಿಂದ ನಾಝುರೆ ಹಾಗೂ ಲೇಖಕರು, ಪತ್ರಕರ್ತರು ಆದ ಶ್ರೀ ಶಶಿಕಾಂತ ಮತ್ತು ಈ ಸಂಸ್ಥೆಯ ಮೂಲ ಕಾರಣಿಭೂತರಾದ ಶ್ರೀ ಶಿವಕುಮಾರ ಸಮ್ಮಿಲನದಿಂದ ಬಲಿಷ್ಠವಾಗಿ ಪುನರ್ ಪ್ರಾರಂಭವಾಯಿತು.

ಈ ಸಂಸ್ಥೆಯ ಮೂಲ ಉದ್ದೇಶ ಸಾಂಸ್ಕೃತಿಕ ಕಾರ್ಯಕ್ರಮಗಳಿಂದ ಸಮಾಜದ ಸ್ವಾಸ್ತ್ಯವನ್ನು ಕಾಪಾಡಬಹುದು ಎಂಬ ನಂಬಿಕೆ. ಆದರೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮನೋರಂಜನೆಗಾಗಿ ಮಾಡುತ್ತೇವೆ, ಮನೋರಂಜನೆಯ ಜೊತೆ ಜೊತೆಗೆ ಸಮಾಜದ ಸ್ವಾಸ್ತ್ಯವನ್ನು ಬೆಳೆಸುವುದು, ಜನರಿಗೆ ಒಂದು ರೀತಿಯ ಜ್ಞಾನವನ್ನು ಹಂಚುವುದು ಈ ಸಂಸ್ಥೆಯ ಧ್ಯೇಯ ಉದ್ದೇಶವಾಗಿದೆ.

ಸಮಾಜವನ್ನು ಒಂದು ಉತ್ತಮ ದಿಕ್ಕಿಗೆ ಕರೆದೊಯ್ಯುವಂತಹ ಹಾಗೂ ಯುವ ಪೀಳಿಗೆಗೆ ಒಂದು ಉತ್ತಮ ಹಾಗೂ ಉಜ್ವಲ ಭವಿಷ್ಯ ನೀಡುವಂತಹ ಧ್ಯೇಯೋದ್ದೇಶವನ್ನು ಇಟ್ಟುಕೊಂಡು ಈ ಸಂಸ್ಥೆ ಹಲವಾರು ಕಾರ್ಯಕ್ರಮಗಳನ್ನು ನಡೆಸಿಕೊಂಡು ಬಂದಿದೆ. ಅವುಗಳಲ್ಲಿ ಶ್ರೀ ಚಕ್ರವರ್ತಿ ಸೂಲಿಬೆಲೆಯಂತಹ ಮಹಾನ್ ವಾಕ್‌ಚಾತುರ್ಯವುಳ್ಳವರು ಕಾರ್ಯಕ್ರಮದ ನಿರೂಪಕರಾಗಿ ಕಾರ್ಯಕ್ರಮವನ್ನು ನಡೆಸಿಕೊಟ್ಟಿರುತ್ತಾರೆ.

### “ಗಾನ ಸಮ್ಮಿಲನ” ಕಾರ್ಯಕ್ರಮ

ಈ ಕಾರ್ಯಕ್ರಮದಲ್ಲಿ ನಾಲ್ಕು ರಾಗಗಳನ್ನು ಆಧಾರವಾಗಿಟ್ಟುಕೊಂಡು ಹಿಂದೂಸ್ತಾನಿ, ಕರ್ನಾಟಕಿ, ಜಾನಪದ ಹಾಗೂ ಯಕ್ಷಗಾನ ಕ್ಷೇತ್ರಗಳಲ್ಲಿ ಈ ರಾಗಗಳನ್ನು ಹೇಗೆ ಬಳಸಿಕೊಂಡಿದ್ದಾರೆ ಎಂಬುದನ್ನು ವಿವರಿಸಲಾಯಿತು. ಸ್ಥಳೀಯ ಕಲಾವಿದರ ಗಾಯನ, ವಾದನದೊಂದಿಗೆ ಈ ಕಾರ್ಯಕ್ರಮ ಜನಪ್ರಿಯವಾಯಿತು.

### “ರಾಮಪಥಾ\ಕೃಷ್ಣಕಥಾ” ಕಾರ್ಯಕ್ರಮ

ಇಂದಿನ ಯುವಪೀಳಿಗೆಗಾಗಿಯೇ ಆಯೋಜಿಸಿದ ಈ ಕಾರ್ಯಕ್ರಮದಲ್ಲಿ ಆದರ್ಶ ಮತ್ತು ತತ್ವಗಳ ಬಗ್ಗೆ ಸ್ಥಳೀಯ ಕಲಾವಿದರ ಗಾಯನ, ವಾದನದ ಮುಖಾಂತರ ತಿಳಿಸಲಾಯಿತು. ಶ್ರೀರಾಮ ಹಾಗೂ ಶ್ರೀಕೃಷ್ಣರ ಬಾಲಲೀಲೆಯಿಂದ ಹಿಡಿದು ಅಂತಿಮದವರೆಗೂ ತಿಳಿಸಲಾಯಿತು.

### “ಕನ್ನಡ ಸಂಗೀತ ಮತ್ತು ಚಿತ್ರ ಸಾಹಿತ್ಯ ಅಂದು ಮತ್ತು ಇಂದು” ಕಾರ್ಯಕ್ರಮ

ಚಿತ್ರಗಳು ಪ್ರೇಕ್ಷಕರನ್ನು ಮನೋರಂಜನೆಗೊಳಿಸುತ್ತವೆ ನಿಜ ಆದರೆ ಅದರಲ್ಲಿರುವ ಸಂಗೀತ ಮತ್ತು ಸಾಹಿತ್ಯ ಪ್ರೇಕ್ಷಕನ ಮನಸ್ಸನ್ನು ಎಷ್ಟು ತಾಕುತ್ತದೆ ಎಂಬ ಉದ್ದೇಶವಿಟ್ಟುಕೊಂಡು ಆಯೋಜಿಸಿದ ಕಾರ್ಯಕ್ರಮ ಇದಾಗಿದ್ದು, ಇಲ್ಲಿ ೧೯೬೦ ಮತ್ತು ೧೯೭೦ರ ದಶಕದ ಕನ್ನಡ ಚಲನಚಿತ್ರಗೀತೆಗಳನ್ನು ಸ್ಥಳೀಯ ಕಲಾವಿದರಿಂದ ಹಾಡಿಸಿ ಆಯಾ ಗೀತೆಗಳ ಸಾಹಿತ್ಯದ ಬಗ್ಗೆ ವಿಸ್ತೃತವಾಗಿ ವಿವರಣೆ ನೀಡಲಾಯಿತು. ಅಂದಿನ ಚಲನಚಿತ್ರಗಳ ಜೋಗುಳದ ಹಾಡು, ಲಾಲಿಹಾಡು, ದೇವರ ಪೂಜೆಯ ಹಾಡು, ನಾಗರ ಪಂಚಮಿ, ಹೋಳಿ, ದಸರಾ ಹೀಗೇ ನಾನಾ ಹಬ್ಬ ಹರಿದಿನಗಳ ಪರಿಚಯಿಸುವ ಹಾಡುಗಳನ್ನು ಹಾಡಿಸಲಾಯಿತು. ಹಾಗೇ ಇಂದಿನ ಅಂದಿನ ಆಧುನಿಕ ಕಾಲದ ಚಲನಚಿತ್ರಗಳಲ್ಲೂ ಕೆಲವು ಯೋಗ್ಯ ಸಾಹಿತ್ಯ ಹಾಗೂ ಸಂಗೀತವನ್ನು ಹೊಂದಿದ ಹಾಡನ್ನು ಹಾಡಿಸುವುದರ ಮೂಲಕ ಪ್ರೇಕ್ಷಕ ಚಲನಚಿತ್ರವನ್ನು ವಿಮರ್ಶಾತ್ಮಕವಾಗಿ ನೋಡುವುದನ್ನು ತಿಳಿಸಲಾಯಿತು.

ಇದೇ ರೀತಿಯ ಹಲವು ಧ್ಯೇಯ, ಉದ್ದೇಶಗಳನ್ನಿಟ್ಟುಕೊಂಡು ಗಾಯನದ ಮೂಲಕ “ಭಾವೋನ್ಮಾದ” ಕಾರ್ಯಕ್ರಮ, “ಅಮೃತಬಿಂದು”, ಕಾರ್ಯಕ್ರಮ, “ಕನ್ನಡದ ಕಾವ್ಯ ಸಂಗೀತ”, ಕಾರ್ಯಕ್ರಮ “ಕರ್ನಾಟಕ ವಿಜಯ ವೈಭವ”ದಂತಹ ಸುಮಾರು ೩೫ಕ್ಕೂ ಹೆಚ್ಚು ಕಾರ್ಯಕ್ರಮಗಳನ್ನು ಈ ಸಂಸ್ಥೆ ಆಯೋಜಿಸುತ್ತಾ ಜೊತೆ ಜೊತೆಗೆ ಸ್ಥಳೀಯ ಕಲಾವಿದರನ್ನು ಬೆಳೆಸುತ್ತಾ ಬಂದಿದೆ.

ಸಂಗೀತ ಹಾಗೂ ಸಾಹಿತ್ಯಕ್ಕಾಗಿಯೇ ಬೆಳೆದು ಬಂದ ಈ ಸಂಸ್ಥೆ ಇನ್ನೂ ಹಲವಾರು ಕಾರ್ಯಕ್ರಮ ಗಳನ್ನು ಆಯೋಜಿಸುವ ನಿಟ್ಟಿನಲ್ಲಿ ತನ್ನ ಮುಂದಿನ ಭವಿಷ್ಯದ ಕಡೆಗೆ ದಾಪುಗಾಲು ಇಡುತ್ತಿದೆ.

## ೬.೫ ಪ್ರಸರಣ

ಸುಮಾರು ೧೯ನೇ ಶತಮಾನದ ಆರಂಭದ ಕಾಲದಲ್ಲಿ ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿ ಪಂ. ಪಂಚಾಕ್ಷರಿ ಗವಾಯಿಗಳು, ಪಂ. ಪುಟ್ಟರಾಜ ಗವಾಯಿಗಳು, ಪಂ. ಸವಾಯಿ ಗಂಧರ್ವರು, ಪಂ. ಮಲ್ಲಿಕಾರ್ಜುನ ಮನ್ಸೂರ, ಹಾಗು ಪಂ. ದಿನಕರ ಕಾಯ್ಕಿಣಿಯವರಂತಹಾ ಸಂಗೀತ ದಿಗ್ಗಜರಿಂದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಘರಾಣಾ ಪದ್ಧತಿಯ ಮುಖಾಂತರ ಜನ್ಮ ತಾಳಿತು.

ಕಾಲಕ್ರಮೇಣ ಉತ್ತರ ಕರ್ನಾಟಕದಿಂದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಕರ್ನಾಟಕ ರಾಜ್ಯದ ಮೂಲೆಮೂಲೆಗೂ ಪಸರಿಸಿತು. ಹೀಗೆ ಕರ್ನಾಟಕದ ಹೃದಯ ಭಾಗದಲ್ಲಿರುವ ಮಲೆನಾಡಿನ ತವರು ಜಿಲ್ಲೆಯಾದ ಶಿವಮೊಗ್ಗದಲ್ಲೂ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಪಂ.ಗುರುಶಾಂತ ಗವಾಯಿಗಳು, ಪಂ.ರಾಜಾರಾಮ್ ಸೊರಬ, ಪಂ.ಇಂದೂಧರ ನಿರೋಡಿಯವರಂತ ಸಂಗೀತಗಾರ ರಿಂದ ದಿನೇದಿನೇ ದಾಪುಗಾಲಿಡುತ್ತಾ ಬೆಳೆಯಿತು. ಕರ್ನಾಟಕ ಸಂಗೀತವೇ ಸಿಂಹಪಾಲು ಇದ್ದಂತಹಾ ಆ ಕಾಲಘಟ್ಟದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಹಲವು ರೀತಿಯ ಏರು-ಪೇರುಗಳನ್ನು ದಾಟಿ ಸಂಗೀತಾಸಕ್ತರ ಹಾಗೂ ಕಲಾಪೋಷಕರ ಮನದಾಳದಲ್ಲಿ ನೆಲೆಯೂರಲು, ಪ್ರಚಾರಪಡೆಯಲು ದಶಕಗಳೇ ಕಳೆದವು ಎಂದರೆ ತಪ್ಪಾಗಲಾರದು.

## ೬.೬ ಫಲಿತಗಳು

ಹಿರಿಯ ಸಂಗೀತಗಾರರು, ಕಲಾವಿದರು ಮಲೆನಾಡು ಪ್ರದೇಶದ ಶಿವಮೊಗ್ಗ ಹಾಗು ಸುತ್ತ ಮುತ್ತಲಿನ ಜನಸಾಮಾನ್ಯರ ಮನದಾಳದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಬೀಜವನ್ನು ಬಿತ್ತಿದ ಪರಿಣಾಮವಾಗಿ ಈ ಭಾಗದಲ್ಲಿ ಶಾಸ್ತ್ರೀಯ ಸಂಗೀತವು ಕುಡಿಯೊಡೆದು ಪಂ.ಬಿ ನಾರಾಯಣಪ್ಪ ಪಂ. ಇಂದೂಧರ ಪೂಜಾರ, ಪಂ.ತುಕಾರಾಮ ರಂಗದೋಳ್, ಪಂ.ಮಡಿವಾಳಯ್ಯ ಸಾಲಿ, ಉ.ಹುಮಾಯೂನ್ ಹರಲಾಪುರ, ವಿದೂಷಿ ವಸುಧಾಶರ್ಮ ಹಾಗು ಇನ್ನಿತರ ಪ್ರತಿಭಾನ್ವಿತ ಸಂಗೀತ ಕಲಾವಿದರ ಉಗಮವಾಯಿತು. ಶಾಸ್ತ್ರೀಯ ಸಂಗೀತವನ್ನು ಉಳಿಸಿ, ಬೆಳೆಸುವ ಕಾರ್ಯವನ್ನು ಪ್ರತಿಫಲ ಬಯಸದೇ, ಧೃತಿಗೆಡದೇ ನಿರಂತರವಾಗಿ ಸಾಗಿಸುವುದೇ ಇಂತಹಾ ಕಲಾವಿದರ ಜೀವನದ ಗುರಿಯಾದ ಕಾರಣ ಈ ಭಾಗದಲ್ಲಿ ಇಂದಿಗೂ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಕರ್ನಾಟಕ ಸಂಗೀತದಂತೆ ಪ್ರಚಾರ ಪಡೆದು ಉತ್ತಮ ಸ್ಥಾನ-ಮಾನವನ್ನು ಪಡೆದಿದೆ.

## ೬.೭ ಸಾಫಲ್ಯಗಳು

ಲಲಿತ ಕಲೆಯನ್ನು ಅದರಲ್ಲೂ ಶಾಸ್ತ್ರೀಯ ಸಂಗೀತವನ್ನು ಜನಸಾಮಾನ್ಯರ ಸಮಾಜದಲ್ಲಿ ಉಳಿಸಿ, ಬೆಳೆಸುವುದು ಸುಲಭದ ಕಾರ್ಯವಲ್ಲ. ಕರ್ನಾಟಕ ಸಂಗೀತವೇ ಅಧಿಕವಾಗಿರುವ ಮಲೆನಾಡಿನ ಶಿವಮೊಗ್ಗ ಜಿಲ್ಲೆಯ ಪ್ರದೇಶದಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ತನ್ನದೇ ಆದ ನಿರ್ದಿಷ್ಟ ಶೋತೃಗಳನ್ನು, ಕಲಾಪೋಷಕರನ್ನು, ಕಲಾರಾಧಕರನ್ನು ಪಡೆದು, ಇಂದು ಸಮಾಜದಲ್ಲಿ ಶ್ರೇಷ್ಠ ಸ್ಥಾನ-ಮಾನ ಪಡೆದಿದೆ. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಈ ಪ್ರದೇಶದಲ್ಲಿ ಪ್ರಭುದ್ಧವಾಗಿ ಬೆಳೆದು ನಿಲ್ಲಲು, ಜೀವನೋಪಾಯಕ್ಕೆಂದು ಸಂಗೀತವನ್ನೇ ಮುಡಿಪಾಗಿಟ್ಟು, ಅಸಂಖ್ಯಾತ ವಿದ್ಯಾರ್ಥಿಗಳಿಗೆ ಸಂಗೀತವನ್ನು ಧಾರೆಯೆರೆದ ಈ ಭಾಗದ ಸಂಗೀತಗಾರರೇ ಮೂಲ ಕಾರಣಿಕರ್ತರು ಎಂದರೆ ತಪ್ಪಾಗಲಾರದು.

ಮೇಲೆ ಕಾಣಿಸಿದ ಪ್ರಸರಣ, ಫಲಿತಗಳು ಹಾಗು ಸಾಫಲ್ಯಗಳಿಗೆ ಈ ಮಹಾಪ್ರಬಂಧದ ವ್ಯಾಪ್ತಿಯಲ್ಲಿ ಬರುವ ಮಲೆನಾಡು ಪ್ರದೇಶದ ಶಾಸ್ತ್ರೀಯ ಸಂಗೀತ ಕಲಾವಿದರೊಂದಿಗೆ, ಕಲಾಪೋಷಕರೊಂದಿಗೆ ನಡೆಸಿದ ಮೌಖಿಕ ಸಂದರ್ಶನ ಹಾಗೂ ಸಮಾಲೋಚನೆಗಳಿಂದ ಪಡೆದ ಅತ್ಯಮೂಲ್ಯ ವಿಚಾರಗಳನ್ನೇ ಇಲ್ಲಿ ಆಕರವಾಗಿ ಬಳಸಿಕೊಳ್ಳಲಾಗಿದೆ.

# ಅಧ್ಯಾಯ ೭

# ಸಮಾರೋಪ

## ೭.೧ ಅನುಬಂಧಗಳು

ಭಾರತೀಯ ಸಂಗೀತವು ವಿಶ್ವದಾದ್ಯಂತ ತನ್ನ ಕ್ಷಮತೆಯಿಂದ ಭಾರತದೇಶವನ್ನು ಉನ್ನತ ಸ್ಥಾನದಲ್ಲಿರಿಸಿದೆ. ವೇದಕಾಲದಿಂದಲೂ ತನ್ನ ಇರುವುಕೆಯನ್ನು ಸಾಬೀತುಪಡಿಸುತ್ತಾ ಬಂದ ಸಂಗೀತವು ಮುಂದೆ ಶಾಸ್ತ್ರೀಯ, ಸುಗಮ ಹಾಗೂ ಲಘು ಶಾಸ್ತ್ರೀಯ ಪದ್ಧತಿಗಳಾಗಿ ಕವಲೊಡೆದು ತನ್ನದೇ ಆದ ಶ್ರೇಷ್ಠ ಮಟ್ಟದ ಸ್ಥಾನ-ಮಾನವನ್ನು ಗೌರವವನ್ನು ಸಮಾಜದಲ್ಲಿ ಪಡೆದಿದೆ. ಋಷಿಮುನಿಗಳು, ರಾಜ ಮಹಾರಾಜರಿಂದ ಹಿಡಿದು ಜನಸಾಮಾನ್ಯರೂ ಕೂಡ ಸಂಗೀತದ ಬಗ್ಗೆ ಗೌರವ, ಭಕ್ತಿ, ಶ್ರದ್ಧೆ ನೀಡುವಂತೆ ಇಂದು ಇದು ಬೆಳೆದು ನಿಂತಿದೆ.

ತನ್ನ ನಿರ್ದಿಷ್ಠ ಪರಿಧಿಯಲ್ಲಿಯೆ ದಿನೇ ದಿನೇ ಕ್ಷಣ ಕ್ಷಣ ಬೆಳೆಯುತ್ತಿರುವ ಈ ಸಂಗೀತವು ಜನರ ಜೀವನದಲ್ಲಿ ಸರಾಗವಾಗಿ ಹಾಸು ಹೊಕ್ಕಿದೆ. ಜನಸಾಮಾನ್ಯರು ತಮ್ಮ ನೋವು, ನಲಿವು, ಸಂತಸ, ಬೇಸರ ಹೀಗೆ ಪ್ರತಿಯೊಂದು ಸಂದರ್ಭದಲ್ಲೂ ಸಂಗೀತಕ್ಕೆ ಮರೆಹೋಗಿದ್ದಾರೆ. ಒಂದುರೀತಿಯಲ್ಲಿ ಸಂಗೀತವು ಮಾನವ ಸಂಕುಲದ ಉಸಿರೇ ಆಗಿದೆ ಎಂದರೆ ತಪ್ಪಾಗಲಾರದು. ಕ್ಷಣಕ್ಷಣಕ್ಕೂ ಒಂದಲ್ಲಾ ಒಂದು ಸಂಕಟದಲ್ಲಿ, ಕಷ್ಟದಲ್ಲಿ ಸಿಲುಕುವ ಮಾನವ ಕುಲಕ್ಕೆ ಸಂಗೀತವು ಸಕಲನೋವನ್ನು ನಿವಾರಿಸುವ ಸಂಜೀವಿನಿ ಔಷಧಿ ಆಗಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಋಷಿಮುನಿಗಳಾದಿಯಾಗಿ ಇಂದಿನ ನವನವೀನ ಕಾಲಮಾನದಲ್ಲಿ ವಿಧ ವಿಧವಾದ ಸಲಕರಣೆಗಳಿಂದ ರೋಗ ರುಜನೆಗಳನ್ನು ಗುಣಪಡಿಸುವ ವೈದ್ಯರೂ ಸಹಾ ಸಂಗೀತವೇ ಸಕಲ ರೋಗಕ್ಕೆ ಔಷಧಿ ಎಂದು ಒಪ್ಪಿಕೊಂಡಿದ್ದಾರೆ. ಕೇವಲ ಮಾನವ ಕುಲಕ್ಕೊಂದೇ ಅಲ್ಲದೇ ಪ್ರಾಣಿ,ಪಕ್ಷಿ, ಸಸ್ಯಗಳಿಗೂ ಸಂಗೀತವು ಸಂಜೀವಿನಿಯಂತೆ ಕಾರ್ಯ ನಿರ್ವಹಿಸುತ್ತದೆ ಎಂದು ವಿಜ್ಞಾನಿಗಳು ಕೂಡಾ ಸಾಬೀತು ಪಡಿಸಿದ್ದಾರೆ.

ಸಕಲ ಜೀವರಾಶಿಗಳ ಸಂಜೀವಿನಿ ಎಂದೆನಿಸಿದ ಸಂಗೀತದಲ್ಲಿ ಶಾಸ್ತ್ರೀಯ ಸಂಗೀತವು ಅಗ್ರ ಸ್ಥಾನದಲ್ಲಿ ಬರುತ್ತದೆ. ಶಾಸ್ತ್ರೀಯಸಂಗೀತವನ್ನು ಸ್ವತಃ ಹಾಡುವುದಾಗಲಿ, ನುಡಿಸುವುದಾಗಲಿ

ಮಾಡಿದವರಿಗೆ ಅದರ ಮೂಲಶಕ್ತಿಯ ಅರಿವಿರುತ್ತದೆ. ಅದರ ಮಾತೇ ಬೇರೆ, ಸ್ವರ್ಗ ಎಂಬುದು ಇದೇ ಎಂಬ ಭಾವನೆ ಅವರ ಮನಸ್ಸಿನಲ್ಲಾಗುತ್ತದೆ.

ಭಾರತೀಯ ಶಾಸ್ತ್ರೀಯ ಸಂಗೀತದ ಎರಡು ಪ್ರಮುಖ ವಿಧಗಳಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಒಂದು. ಕರ್ನಾಟಕಿ ಹಾಗೂ ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತವು ಇಂದು ತನ್ನದೇ ಆದ ಪರಿಧಿಯಲ್ಲಿ ವಿಶ್ವದಾದ್ಯಂತ ಬೆಳೆದುನಿಂತಿವೆ. ಹಲವು ಕಲಾವಿದರು ಇದನ್ನೇ ನಂಬಿ ಜೀವನ ಸಾಗಿಸುತ್ತಿದ್ದಾರೆ. ಜೀವನೋಪಾಯಕ್ಕೆ ಯಾವುದೇ ರೀತಿಯ ಹೂಡಿಕೆ ಇಲ್ಲದ ವೃತ್ತಿ ಹಾಗೂ ನಿವೃತ್ತಿ ಇಲ್ಲದ ಮತ್ತು ಪ್ರತಿಯೊಬ್ಬರಿಗೂ ಸುಖ ಶಾಂತಿ ನೀಡುವಂತಹ ಹೆಮ್ಮೆಯ ಸಾರ್ಥಕತೆಯ ವೃತ್ತಿ ಇದಾಗಿದೆ.

ಗುರುಶಿಷ್ಯ ಪರಂಪರೆಯನ್ನು ಇಂದಿಗೂ ಜೀವಂತವಾಗಿರಿಸಿದ ಏಕೈಕ ವಿದ್ಯೆ ಎಂದರೆ ಲಲಿತಕಲಾ ವಿದ್ಯೆ ಎಂದರೆ ತಪ್ಪಾಗಲಾರದು. ಅದರಲ್ಲೂ ಶಾಸ್ತ್ರೀಯ ಸಂಗೀತವು ಮುಂಚೂಣಿಯಲ್ಲಿದೆ ಎಂದರೆ ಅತಿಶಯವಾಗಲಾರದು. "ಗುರುವಿನ ಗುಲಾಮನಾಗುವತಕ ದೊರೆಯದಣ್ಣ ಮುಕುತಿ" ಎಂಬ ನಾಣ್ಣುಡಿಯಂತೆ ಸದಾಕಾಲ ಗುರುವಿನ ಸೇವೆಯಲ್ಲಿ ವಿದ್ಯಾರ್ಥಿ ತನ್ನ ಸಾಧನೆಯೊಂದಿಗೆ ಮುಕ್ತಿ ಪಡೆಯುತ್ತಾನೆ ಎಂಬುದು ಭಾರತೀಯ ಶಾಸ್ತ್ರೀಯ ಸಂಗೀತದ ಗುರು-ಶಿಷ್ಯ ಪರಂಪರೆಯಲ್ಲಿ ಸಾಬೀತಾಗಿದೆ. ಬೇರೆ ಕ್ಷೇತ್ರಗಳನ್ನು ಲಲಿತಕಲಾ ಕ್ಷೇತ್ರದೊಂದಿಗೆ ತುಲನಾತ್ಮಕವಾಗಿ ತುಲನೆ ಮಾಡಿದಾಗ ಲಲಿತಕಲಾ ಕ್ಷೇತ್ರವು ಅಷ್ಟಾಗಿ ಜನಸಾಮಾನ್ಯರೊಂದಿಗೆ ಬೆರೆಯದೆ, ತನ್ನದೇ ಆದ ನಿರ್ಧಿಷ್ಠ ಶ್ರೋತೃಗಳ ವರ್ಗದಲ್ಲಿ ಬೆಳೆದು ನಿಂತಿದೆ. ಅದರಲ್ಲೂ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ದಾಪುಗಾಲಿಡುತ್ತಾ, ಇಂದು ಸಮಾಜದಲ್ಲಿ ಉನ್ನತ ಮಟ್ಟದ ಸ್ಥಾನ-ಮಾನವನ್ನು ಪಡೆದು, ಪ್ರಭುದ್ಧವಾಗಿ ಬೆಳೆದು ನಿಂತಿದೆ.

ಭಾರತೀಯ ಶಾಸ್ತ್ರೀಯ ಸಂಗೀತದ ಪ್ರಮುಖ ಭಾಗವಾದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ದೇಶದಾದ್ಯಂತ ಇಂದು ಹೆಮ್ಮರವಾಗಿ ಬೆಳೆದು ನಿಂತಿದೆ. ಇದರ ನೆರಳಿನಡಿಯಲ್ಲಿ ಕೊಟ್ಯಾನುಕೋಟಿ ಕಲಾವಿದರು ಇಂದು ಧನ್ಯತೆಯ ಬಾಳು ನಡೆಸುತ್ತಿದ್ದಾರೆ. ಇಂತಹ ಹಿಂದೂಸ್ತಾನಿ ಸಂಗೀತವು ೧೮ ಹಾಗು ೧೯ನೇ ಶತಮಾನದಿಂದ ಕರ್ನಾಟಕದಲ್ಲೂ ತನ್ನ ಇರುವಿಕೆಯನ್ನು ಸಾಬೀತುಪಡಿಸುತ್ತಾ ಬಂದಿದೆ. ಪಂ. ಪಂಚಾಕ್ಷರಿ ಗವಾಯಿಗಳು, ಪಂ. ಪುಟ್ಟರಾಜ ಗವಾಯಿಗಳು, ಪಂ. ಅರ್ಜುನ್ ಸಾ ನಾಕೋಡ, ಪಂ. ಚಂದ್ರಶೇಖರ ಪುರಾಣೀಕಮಠ, ಪಂ. ಮಲ್ಲಿಕಾರ್ಜುನ್ ಮನ್ಸೂರ, ಪಂ. ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ, ಪಂ. ಬಸವರಾಜ ರಾಜಗುರು, ಪಂ. ಸಂಗಮೇಶ ಗುರವ್, ಪಂ. ಸವಾಯಿ ಗಂಧರ್ವರು ಹಾಗೂ ಅವರ ಶಿಷ್ಯಂದಿರಾದ ಭಾರತ ರತ್ನ ಪಂ. ಭೀಮಸೇನ ಜೋಶಿ, ವಿದೂಷಿ ಡಾ. ಗಂಗೂಬಾಯಿ ಹಾನಗಲ್, ಪಂ. ಮಾಧವ ಗುಡಿ, ಪಂ. ದಿನಕರ ಕಾಯ್ಕಿಣಿಯವ

ರಂತಹ ದಿಗ್ಗಜರ ಸಮರ್ಪಕ ಮಾರ್ಗದರ್ಶನದಲ್ಲಿ ಪಂ. ಇಂದೂಧರ್ ನಿರೋಡಿ, ಪಂ. ವೆಂಕಟೇಶ ಕುಮಾರ, ಪಂ. ಕುಮಾರದಾಸ, ಪಂ. ಗಣಪತಿ ಭಟ್ ಹಾಸಣಗಿ, ಪಂ. ಪರಮೇಶ್ವರ ಹೆಗಡೆ, ವಿದೂಷಿ ಶ್ರೀಮತಿ ಜಯಶ್ರೀ ಪಾಟ್ನೇಕರ್, ಪ್ರೊ. ರಾಜಶೇಖರ್ ಮನ್ಸೂರ್, ಡಾ. ಶಾಂತಾರಾಮ್ ಹೆಗಡೆ, ಶೀ ಶ್ರೀಪಾದ್ ಹೆಗಡೆ ಕಂಪ್ಲಿ, ಪಂ. ಕೈವಲ್ಯಕುಮಾರ ಗುರವ, ಪಂ. ಜಯತೀರ್ಥ ಮೇವುಂಡಿಯವರಂತಹ ಹೆಸರಾಂತ ಕಲಾವಿದರು ಹಾಗು ಇವರ ಯುವಪೀಳಿಗೆಯ ಶಿಷ್ಯದಿಂರು ಇಂದಿಗೂ ಹಿಂದೂಸ್ತಾನಿ ಸಂಗೀತದ ಗ್ವಾಲಿಯರ್, ಜೈಪುರ್-ಅತ್ರೌಲಿ, ಕಿರಾಣ ಹಾಗು ಆಗ್ರಾ ಘರಾಣೆಯನ್ನು ಉಳಿಸಿ, ಬೆಳೆಸುತ್ತಿದ್ದಾರೆ.

ಕರ್ನಾಟಕರಾಜ್ಯದ ಹಲವು ಜಿಲ್ಲೆಗಳಲ್ಲಿ ವ್ಯಾಪಕವಾಗಿ ಹೆಮ್ಮರವಾಗಿ ಬೆಳೆದು ನಿಂತ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಇಂದು ಅದೆಷ್ಟೋ ಕಲಾವಿದರಿಗೆ ಜೀವನೋಪಾಯದ ಸಾಧನೆಯಾಗಿದೆ. ಕೆಲವರು ಕಾರ್ಯಕ್ರಮಗಳ ಮೇಲೆ ಅವಲಂಬಿತರಾದರೆ, ಇನ್ನು ಕೆಲವರು ಮನೆ ಪಾಠ, ಸಂಗೀತಪಾಠ ಶಾಲೆ, ಸಂಘ, ಸಂಸ್ಥೆಗಳ ಮೇಲೆ ಅವಲಂಬಿತರಾಗಿದ್ದಾರೆ. ಹಾಗೆಯೇ ಶೈಕ್ಷಣಿಕವಾಗಿ ಶಾಸ್ತ್ರೀಯ ಸಂಗೀತವನ್ನು ಶಾಲಾ-ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ಕಲಿತವರು ಸರ್ಕಾರದ ಅಥವಾ ಖಾಸಗಿ ವಿದ್ಯಾ ಸಂಸ್ಥೆಗಳಲ್ಲಿ ನೌಕರರಾಗಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಅವರವರ ಪರಿಧಿಯಲ್ಲಿ, ವ್ಯಾಪ್ತಿಯಲ್ಲಿ ಬೆಳೆಸುತ್ತಾ, ಉಳಿಸುತ್ತಾ ಬಂದಿದ್ದಾರೆ.

೧೯ನೇ ಶತಮಾನದ ಪ್ರಾರಂಭದ ಕಾಲದಿಂದ ಕರ್ನಾಟಕ ರಾಜ್ಯದಲ್ಲಿ ಕರ್ನಾಟಕಿ ಶಾಸ್ತ್ರೀಯ ಸಂಗೀತವೇ ಹೆಚ್ಚಾಗಿ ಪ್ರಚಾರದಲ್ಲಿತ್ತು. ದಿನೇ ದಿನೇ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವು ಪ್ರಚಾರ ಹಾಗೂ ಜನಮನ್ನಣೆಯನ್ನು ಗಳಿಸುತ್ತಾ ಇಂದು ರಾಜ್ಯದಾದ್ಯಂತ ತನ್ನ ಗರಿಷ್ಠ ಪ್ರಮಾಣದ ಇರುವಿಕೆಯನ್ನು ಯುವಕಲಾವಿದರ ಮೂಲಕ ಸಾಬೀತು ಪಡಿಸಿದೆ. ಧಾರವಾಡ, ಹುಬ್ಬಳ್ಳಿ, ಬೆಳಗಾವ್, ಗದಗ, ಉತ್ತರಕನ್ನಡ ಹಾಗೂ ಬೆಂಗಳೂರು ಜಿಲ್ಲೆಗಳನ್ನು ಶಿವಮೊಗ್ಗ ಜಿಲ್ಲೆಯೊಂದಿಗೆ ತುಲನೆ ಮಾಡಿ ನೋಡಿದಾಗ ೧೯ ನೇ ಶತಮಾನದ ಕೊನೇವರೆಗೂ ಹಿಂದೂಸ್ತಾನಿ ಸಂಗೀತವು ಅಷ್ಟಾಗಿ ಪ್ರಚಾರವಾಗದಿರುವುದು ಕಂಡುಬರುತ್ತದೆ. ಆದರೆ ಕಳೆದ ಮೂರು ನಾಲ್ಕು ದಶಕಗಳಲ್ಲಿ ಹಿಂದೂಸ್ಥಾನಿ ಸಂಗೀತವು ಶಿವಮೊಗ್ಗ ಜಿಲ್ಲೆಯ ಪ್ರತಿ ನಗರಗಳಲ್ಲೂ, ತಾಲೂಕುಗಳಲ್ಲೂ ತನ್ನ ಇರುವಿಕೆಯನ್ನು ಸಾಬೀತು ಪಡಿಸುತ್ತಾ ಬಂದಿದೆ.

ಪಂ. ಗುರುಶಾಂತ ಗವಾಯಿಗಳು, ಪಂ. ಬಿ. ನಾರಾಯಣಪ್ಪ ರವರು, ಪಂ. ರಾಜಾರಾಮ್ ಸೊರಬ, ಪಂ. ಇಂದೂಧರ ಪೂಜಾರ, ಪಂ. ಇಂದೂಧರ ನಿರೋಡಿ, ಪಂ. ಸಂಗಮೇಶ ಗವಾಯಿಗಳು, ಉಸ್ತಾದ. ಹುಮಾಯೂನು ಹರಲಾಪುರ, ಶ್ರೀ ವೇಣುಗೋಪಾಲ, ವಿದೂಷಿ ವಸುಧಾ ಶರ್ಮ, ಶ್ರೀ ಅರುಣಾ ಹಂಪಿಹೊಳಿ ದಂಪತಿಗಳು, ಪಂ. ಮಡಿವಾಳಯ್ಯ ಸಾಲಿ, ಪಂ.

ತುಕಾರಾಮರಂಗಧೋಳ್, ಶ್ರೀ ವಸಂತರಾವ ಜೋತಾಡಿ, ಶ್ರೀ ರಾಮಣ್ಣ ಭಜಂತ್ರಿ ಮುಂತಾದವರು ಶಿವಮೊಗ್ಗ ಜಿಲ್ಲೆಯಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ವ್ಯಾಪಕವಾಗಿ ಉಳಿಸಿ, ಬೆಳೆಸಿದ್ದಾರೆ. ಹಾಗೆಯೇ ತಮ್ಮ ಗಾಯನ ಶೈಲಿಯನ್ನು ಶಿಷ್ಯ-ಪ್ರಶಿಷ್ಯರ ಮೂಲಕ ಗುರು ಶಿಷ್ಯ ಪರಂಪರೆಯಲ್ಲಿ ಬೆಳೆಸುತ್ತಿದ್ದಾರೆ.

ಶಿವಮೊಗ್ಗ ಜಿಲ್ಲೆಯ ನೆರೆಯ ಜಿಲ್ಲೆಗಳಂತೆ ಶಿವಮೊಗ್ಗ ಜಿಲ್ಲೆಯಲ್ಲೂ ಸಂಗೀತವು ಮುಖ್ಯವಾಹಿನಿಗೆ ಬಂದು ಕಲಾವಿದರನ್ನು, ಕಲೆಯನ್ನು ಶಾಶ್ವತವಾಗಿ ಜೀವಂತವಾಗಿರಿಸಬೇಕು ಎಂಬುದೇ ಪ್ರಸ್ತುತ ಇಲ್ಲಿಯ ಕಲಾವಿದರ ಒಮ್ಮತದ ಅಭಿಪ್ರಾಯವಾಗಿದೆ. ಇದರಂತೆಯೇ ಕರ್ನಾಟಕದ ಘನ ಸರ್ಕಾರ ಕಾಲಕಾಲಕ್ಕೆ ತನ್ನ ಅಂಗ ಸಂಸ್ಥೆಗಳಾದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಸಂಗೀತ-ನೃತ್ಯ ಅಕಾಡೆಮಿ ಹಾಗೂ ಇನ್ನಿತರ ಕಲಾ ಪೋಷಕ ಇಲಾಖೆಗಳೊಂದಿಗೆ ಶಿವಮೊಗ್ಗ ಜಿಲ್ಲೆಯ ಕಲೆಯನ್ನು, ಕಲಾವಿದರನ್ನು ಪ್ರೋತ್ಸಾಹಿಸಿ ಬೆಳೆಸಬೇಕು ಹಾಗೆಯೇ ಜನಸಾಮಾನ್ಯರೂ ಇದಕ್ಕೆ ಸ್ಪಂದಿಸಬೇಕು. ಒಟ್ಟಿನಲ್ಲಿ ಹಿಂದೂಸ್ತಾನಿ ಸಂಗೀತ ನಿಂತ ನೀರಾಗದೇ ಹರಿಯುವ ನೀರಾಗಿ, ತಾನು ಹರಿಯುವ ಪ್ರದೇಶವನ್ನು ಫಲವತ್ತತೆಯ ಬೀಡಾಗಿಸಬೇಕು ಎಂಬುದೇ ಈ ಸಂಶೋಧನೆಯ ಆಶಯವಾಗಿದೆ.

ಲಲಿತಕಲೆಯನ್ನೇ ಉಸಿರಾಗಿಸಿಕೊಂಡು ಬದುಕು ಸಾಗಿಸಿದ ಹಾಗು ತಮ್ಮ ಜೀವನವನ್ನೇ ಕಲಾಸೇವೆಗೆಂದು ಮುಡಿಪಾಗಿಟ್ಟಿರುವ ಕರ್ನಾಟಕ ರಾಜ್ಯದ ಮಲೆನಾಡು ಪ್ರದೇಶದ ಕೇಂದ್ರವಾದ ಶಿವಮೊಗ್ಗ ಜಿಲ್ಲೆಯ ಹಲವು ಹಿಂದೂಸ್ತಾನಿ ಸಂಗೀತ ಕಲಾವಿದರ ಜೀವನ, ಸಂಗೀತ ಸಾಧನೆ ಹಾಗು ಕಲಾಸೇವೆಯನ್ನು ಈ ಅಧ್ಯಯನದಲ್ಲಿ ಉಲ್ಲೇಖಿಸಲಾಗಿದೆ. ಮತ್ತು ಪ್ರಸ್ತುತ ಜಿಲ್ಲೆಯನ್ನು ಪ್ರತಿನಿಧಿಸುತ್ತಿರುವ ಸಂಗೀತಕಲಾವಿದರೊಂದಿಗೆ ಸಂಗೀತದ ವಿಷಯವಾಗಿ ಇಲ್ಲಿ ಚರ್ಚಿಸಲಾಗಿದೆ. ಈ ಎಲ್ಲಾ ಅತ್ಯಮೂಲ್ಯವಾದ ಮಾಹಿತಿಗಳನ್ನು ಸಂಗ್ರಹಿಸುವ ಮೂಲಕ ಹಿರಿಯ ಸಂಗೀತಗಾರರ ಮಾದರೀ ಜೀವನವು ಈಗಿನ ಯುವಪೀಳಿಗೆಯ ಕಲಾವಿದರಿಗೆ, ವಿದ್ಯಾರ್ಥಿಗಳಿಗೆ, ಸಂಗೀತಾಸಕ್ತರಿಗೆ ದಾರಿದೀಪವಾಗಲಿ ಎನ್ನುವ ಏಕೈಕ ನಿಲುವಿನಿಂದ "ಮಲೆನಾಡು ಪ್ರದೇಶಗಳಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಘರಾಣೆಗಳ ಬೆಳವಣಿಗೆಗಳು"(ಶಿವಮೊಗ್ಗ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಈ ಮಹಾಪ್ರಬಂಧವನ್ನು ರಚಿಸಲಾಗಿದೆ.

## ೭.೨ ಮಾಹಿತಿದಾರರ ಪಟ್ಟಿ

ಪಂಡಿತ ಆರ್.ಬಿ.ಸಂಗಮೇಶ್ವರ ಗವಾಯಿಗಳು, ಶಿವಮೊಗ್ಗ

ಪಂಡಿತ ಇಂದೂಧರ ನಿರೋಡಿ(ಶಿವಮೊಗ್ಗ), ಮೈಸೂರು

ಪಂಡಿತ ಇಂದೂಧರ ಪೂಜಾರ, ಶಿವಮೊಗ್ಗ

ಪಂಡಿತ ತುಕಾರಾಮ್ ರಂಗದೋಳ್, ಶಿವಮೊಗ್ಗ

ಪಂಡಿತ ಮಡಿವಾಳಯ್ಯ ಸಾಲಿ, ಸಾಗರ

ಉಸ್ತಾದ್ ಹುಮಾಯೂನ್ ಹರಲಾಪುರ, ಶಿವಮೊಗ್ಗ

ಶ್ರೀ ರಾಮಣ್ಣ ಭಜಂತ್ರಿ–ಆನವಟ್ಟಿ, ಸೊರಬ ತಾ.

ಶ್ರೀ ವಸಂತರಾವ್ ಜೋತಾಡಿ, ಸೊರಬ

ಶ್ರೀ ವೇಣುಗೋಪಾಲ, ಶಿವಮೊಗ್ಗ

ಶ್ರೀ ಅರುಣ ಹಂಪಿಹೊಳಿ, ಗಾಜನೂರು, ಶಿವಮೊಗ್ಗ ತಾ.

ವಿದೂಷಿ ರೇಖಾ ಹಂಪಿಹೊಳಿ, ಗಾಜನೂರು, ಶಿವಮೊಗ್ಗ ತಾ.

ವಿದೂಷಿ ವಸುಧಾಶರ್ಮ ಹಳೇ ಇಕ್ಕೇರಿ, ಸಾಗರ ತಾ.

ವಿದೂಷಿ ಇಂದೂಮತಿ ನಾಡಿಗೇರ್, ಯಲಸಿ, ಸೊರಬ ತಾ.

ವಿದೂಷಿ ಕಮಲಾ ರಘುಪತಿಭಟ್, ಸುಗಾವಿ, ಶಿರಸಿ

ಶ್ರೀ ನಾಗಭೂಷಣ ಹೆಗಡೆ, ಸಾಗರ

ಶ್ರೀ ದೀಪಕ್ ಎನ್., ಶಿವಮೊಗ್ಗ

ಶ್ರೀ ಜನಾರ್ಧನ್ ಭಟ್, ಕಾರ್ಗಲ್, ಸಾಗರ ತಾ.

ಶ್ರೀ ಸತೀಶ್ ಹೆಗಡೆ, ತೀರ್ಥಹಳ್ಳಿ

ಶ್ರೀ ಕೌಶಿಕ್ ಐತಾಳ್, ತೀರ್ಥಹಳ್ಳಿ(ಬೆಂಗಳೂರು)

ಶ್ರೀ ನಿಶಾಂತ, ಶಿವಮೊಗ್ಗ

ಕು॥ ನೌಷಾದ್ ಹರಲಾಪುರ, ಶಿವಮೊಗ್ಗ

ಶ್ರೀ ಪರಶುರಾಮ ಗುಲಬರ್ಗಾ, ಮೇಗರವಳ್ಳಿತೀರ್ಥಹಳ್ಳಿ ತಾ.

ಶ್ರೀ ರಾಘವೇಂದ್ರ ಭಟ್, ಭೀಮನಕೋಣೆ, ಸಾಗರ ತಾ.

ಶ್ರೀ ಮಹಾಬಲೇಶ್ವರ ಪರಮೇಶ್ವರ ಹೆಗಡೆ, ಹೆಗ್ಗೋಡು, ಸಾಗರ ತಾ.

ಶ್ರೀ ಭಾಸ್ಕರ ಹೆಗಡೆ ಮುತ್ತಿಗೆ, ಸಾಗರ

ಶ್ರೀ ಅರವಿಂದ ನಾಝುರೆ, ಶಿವಮೊಗ್ಗ

ಉಸ್ತಾದ್ ನೂರ್ ಸಾಬ್, ಮಲ್ಲಾಪುರ, ಶಿವಮೊಗ್ಗ

ಶ್ರೀ ಅಣ್ಣಪ್ಪ ಶಿವಮೊಗ್ಗ

ಶ್ರೀ ಗಣಪತಿ ಹೆಗಡೆ–ಸಾಗರ

ಶ್ರೀ ನಿತಿನ್ ಎ. ಕುಂಸಿ, ಸಾಗರ

ಶ್ರೀ ರವಿಶಂಕರ, ಭದ್ರಾವತಿ

ಶ್ರೀ ರಾಘವೇಂದ್ರ ಪ್ರಭು, ಶಿವಮೊಗ್ಗ

ಶ್ರೀ ವಸಂತ ಬಾಂಬೊರೆ, ಸೊರಬ

ಶ್ರೀ ಸೂರ್ಯನಾರಾಯಣ ಹೆಗಡೆ, ಬಸೂರು, ಸೊರಬ ತಾ.

ಶ್ರೀ ಸತೀಶ್ ಹೆಗಡೆ ಬಸೂರು, ಸೊರಬ ತಾ.

ಶ್ರೀ ಮಂಜುನಾಥ ಬಿ.ಎನ್., ಸೊರಬ

ಶ್ರೀ ಸುಬ್ರಹ್ಮಣ್ಯ ಬಿ.ಎನ್., ಸೊರಬ

ಶ್ರೀ ವಿಜಯ ಕುಮಾರ.ಬಿ.ಎನ್. ಸೊರಬ

ಶ್ರೀ ಸುಬ್ರಹ್ಮಣ್ಯ ಹೆಗಡೆ, ಮಂಗಳೂರು ಸೊರಬ ತಾ.

ಶ್ರೀ ಸಂತೋಷ ಆರ್.ಹೆಗಡೆ, ಸಾಗರ

ಶ್ರೀ ಸುರೇಂದ್ರನಾಥ್, ಸಾಗರ

ಶ್ರೀ ಶ್ರೀಕಾಂತ ಕಾಳಮಂಜಿ, ಕಾರ್ಗಲ್, ಸಾಗರ ತಾ.

ಶ್ರೀ ಸಂದೇಶ್ ಭಟ್, ಸಾಗರ

ಶ್ರೀ ಉಲ್ಲಾಸ್ ಶಾನ್‌ಭಾಗ್, ಸಾಗರ

ಶ್ರೀ ವಿಶ್ವಾಸ, ಹೆಗ್ಗೋಡು ಸಾಗರ ತಾ.

ಶ್ರೀ ವಿಶ್ವಾಸ, ಸಾಗರ

ಶ್ರೀ ವಿನಾಯಕ ಭಟ್, ಸಾಗರ

ಶ್ರೀ ವಾದಿರಾಜ ದಂಡಾಪುರ, ಧಾರವಾಡ(ತೀರ್ಥಹಳ್ಳಿ)

ಶ್ರೀ ಶೌರಿ ನಂದೀತಳೆ, ಸಾಗರ ತಾ.

ಶ್ರೀ ಯೋಗೀಶ್ ಭಟ್, ಶಿರವಂತೆ, ಸಾಗರ ತಾ.

ಶ್ರೀ ರವಿ ಮಳಗಿ, ಶಿವಮೊಗ್ಗ

ಶ್ರೀ ಶಿವಕುಮಾರ ಮಹಂತ

ಶ್ರೀ ನವೀನ ಶರ್ಮ

# ಕರ್ನಾಟಕ ರಾಜ್ಯ ಹಾಗೂ ಶಿವಮೊಗ್ಗ ಜಿಲ್ಲೆಯ ನೀಲನಕ್ಷೆ





# ಗ್ವಾಲಿಯರ್ ಘರಾಣೆಯ ಪ್ರವರ್ತಕರು



ಪಂ. ಗುರುಶಾಂತ ಗವಾಯಿಗಳು, ಆನವಟ್ಟಿ.



ಪಂ.ಬಿ.ನಾರಾಯಣಪ್ಪ. ಸೊರಬ.



ಪಂ. ಇಂದೂಧರ ಪೂಜಾರ – ಶಿವಮೊಗ್ಗ.



ಉ. ಹುಮಾಯೂನ್ ಹರ್ಲಾಪುರ – ಶಿವಮೊಗ್ಗ



ವಿದೂಷಿ. ಕಮಲಾ ರಘುಪತಿಭಟ್ – ಸುಗಾವಿ. ಶಿರಸಿ ತಾ.



ಶ್ರೀಮತಿ. ಇಂದುಮತಿ ನೀಲಕಂಠರಾವ್, ಯಲಸಿ. ಸೊರಬ ತಾ.

# ಆಗ್ರಾ ಘರಾಣೆಯ ಪ್ರವರ್ತಕರು



ಪಂಡಿತ. ಇಂದೂಧರ ನಿರೋಡಿ. ಶಿವಮೊಗ್ಗ.



ಪಂಡಿತ. ರಾಜಾರಾಮ್ ಸೊರಬ. ಸಾಗರ



ವಿದೂಷಿ ವಸುಧಾಶರ್ಮ- ಹಳೇ ಇಕ್ಕೇರಿ. ಸಾಗರ ತಾ.

# ಕಿರಾಣಾ ಘರಾಣೆಯ ಪ್ರವರ್ತಕರು



ಶ್ರೀ. ಅರುಣ ಹಂಪಿಹೊಳಿ. ವಿದೂಷಿ. ರೇಖಾ ಹಂಪಿಹೊಳಿ - ಗಾಜನೂರು. ಶಿವಮೊಗ್ಗ ತಾ.

# ವಾದ್ಯಗಾರರು



ಶ್ರೀ. ವಸಂತರಾವ್ ಜೋತಾಡಿ. - ಸೊರಬ.



ಶ್ರೀ. ರಾಮಣ್ಣ ಭಜಂತ್ರಿ . ಆನವಟ್ಟಿ.

# ತಬಲ್ವಾ ವಾದಕರು



ಪಂಡಿತ. ತುಕಾರಾಮ್‌ರಾವ್ ರಂಗದೋಳ್ ಶಿವಮೊಗ್ಗ



ಸಂಜೀವ ಯು. ಪೋತದಾರ



ಪಂಡಿತ. ಮಡಿವಾಳಯ್ಯ ಸಾಲಿ. ಸಾಗರ



ಮಂಜುನಾಥ ಭಟ್ಟ ನೆಬ್ಬೂರು.



ಪಂಡಿತ. ಭಾಸ್ಕರ ವಿ. ಹೆಗಡೆ ಮುತ್ತಿಗೆ.



ವಿಜಯಕುಮಾರ ಬಿ.ಎನ್.

ಸಂಗೀತ ಸೇವಾ ಸಮಿತಿ, ಸೊರಬ - ಅಹೋರಾತ್ರಿ ಸಂಗೀತೋತ್ಸವ.








ನಾದಸುರಭೀ ಸಂಗೀತ ವಿದ್ಯಾಲಯ, ಸೊರಬ – ಕಲಾವಿದರಿಗೆ ನೀಡಿದ ಪ್ರಶಸ್ತಿ, ಸನ್ಮಾನಗಳು.








ಶ್ರೀಮತಿ. ಕಮಲಾ ಆರ್.ಭಟ್‌ರವರ ಗಂಡಾಬಂಧನ ಕಾರ್ಯಕ್ರಮ.

ಸಂಗೀತ ಸೇವಾ ಸಮಿತಿ, ಸೊರಬ – ಅಹೋರಾತ್ರಿ ಸಂಗೀತೋತ್ಸವ.



ವಿದುಷಿ ಶ್ಯಾಮಲಾ ಜಿ. ಭಾವೆ – ಗಾಯನ.



ಪಂ.ಗಣಪತಿ ಭಟ್ ಹಾಸಣಗಿ – ಗಾಯನ.




ಶ್ರೀ ಶ್ರೀಪಾದ ಹೆಗಡೆ, ಕಂಪ್ಲಿ – ಗಾಯನ.




ಪಂ.ಬಿ.ನಾರಾಯಣಪ್ಪ – ಗಾಯನ, ಪಂ.ಇಂದೂಧರ ಪೂಜಾರ್ – ಹಾರ್ಮೋನಿಯಂ, ಶ್ರೀ ವಿಜಯ ಕುಮಾರ ಬಿ.ಎನ್. – ತಬಲಾ.
ಶ್ರೀಮತಿ. ಕಮಲಾ ರಘುಪತಿ ಭಟ್, ಶ್ರೀ ಸುಧೀರ ಬೇಂಗ್ರೆ, ಕು॥ ರೂಪಾ, ಗಡಿಕಟ್ಟೆ – ತಾನಪುರ.



ಶ್ರೀ ಸದ್ಗುರು ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ವಿದ್ಯಾಲಯ, ಸಾಗರ - ಅಹೋರಾತ್ರಿ ಸಂಗೀತೋತ್ಸವ.









**ಶ್ರೀ ಗಾನಯೋಗಿ ಪಂಚಾಕ್ಷರಿ ಗವಾಯಿಗಳ ಸೇವಾ ಟ್ರಸ್ಟ್, ಶಿವಮೊಗ್ಗ.**

**ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಕಾರ್ಯಕ್ರಮ.**






## ತೇಜಸ್ವಿ ತಬಲಾವಿದ್ಯಲಯ ಸಾಗರ, ಸಂಗೀತೋತ್ಸವ







# ಶಿವರಂಜಿನಿ ಸಂಗೀತ ವಿದ್ಯಾಲಯ, ಶಿವಮೊಗ್ಗ. ವಾರ್ಷಿಕೋತ್ಸವ





ಶ್ರೀ ಗುರು ಕೃಪಾ ಗಾನ ಮಂದಿರ. ಶಿವಮೊಗ್ಗ - ವಾರ್ಷಿಕ ಸಂಗೀತ ಕಾರ್ಯಕ್ರಮ.



ಪಂ. ಸೋಮನಾಥ ಮರಡೂರು - ಗಾಯನ, ಉ. ಹುಮಾಯೂನ್ ಹರ್ಲಾಪುರ - ಹಾರ್ಮೋನಿಯಂ.



## ಸಪ್ತಸ್ವರ ಸಂಗೀತ ಸಭಾ, ಶಿವಮೊಗ್ಗ - ಸಂಗೀತೋತ್ಸವ.









## ೭.೪ ಪರಾಮರ್ಶನ ಗ್ರಂಥಗಳು/ಆಕರ ಗ್ರಂಥಗಳು


ಅಶೋಕ ಟಿ.ಪಿ.(ಸಂ) ಸುಬ್ಬಣ್ಣನವರ ಆಯ್ದ ಬರಹಗಳು, ೧೯೯೨, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಅಶೋಕ ಹುಗ್ಗಣ್ಣವರ್, ಕುಂದಗೋಳ ಪರಿಸರದ ಸಂಗೀತಗಾರರು(ಅಪ್ರಕಟಿತ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ ಹಂಪಿ,ವಿದ್ಯಾರಣ್ಯ. ೨೦೦೬

ಇಂದೂಧರ ಪೂಜಾರ(ಪ್ರ.ಸಂ.), ಹೆಚ್.ಗುರುಮೂರ್ತಿ(ಸ.ಸಂ.), ಗುರುಶಾಂತ ಸೌರಭ ಸುವರ್ಣ ಶಾಸ್ತ್ರೀಯ ಸಂಗೀತೋತ್ಸವ, ಸ್ಮರಣ ಸಂಚಿಕೆ, ೨೦೧೬, ಸಂಗೀತ ಸೇವಾ ಸಮಿತಿ, ಸೊರಬ.

ಈಶ್ವರ ಭಟ್ಟ ಬೋಳಂತಕೋಡಿ(ಸಂ), ನಮ್ಮ ಸುಬ್ಬಣ್ಣ, ೧೯೯೧, ಕರ್ನಾಟಕ ಸಂಘ, ಪುತ್ತೂರು.

ಉಮೇಶ ಜೋಶಿ, ಭಾರತೀಯ ಸಂಗೀತ ಕಾ ಇತಿಹಾಸ.

ಕಮಲ ಪುರಂದರೆ, ಕರ್ನಾಟಕದಲ್ಲಾದ ಹಿಂದೂಸ್ತಾನಿ ಸಂಗೀತದ ವಿಕಾಸ.

ಕರೀಂಖಾನ್ ಎಸ್.ಕೆ.(ಸಂ) ಕನ್ನಡ ಜನಪದ ಗೀತೆಗಳು, ೧೯೯೬, ಪುಸ್ತಕ ಪ್ರಕಾಶನ, ಬೆಂಗಳೂರು.

ಕುಮಾರ ಗಂಧರ್ವ, ಅನೂಪರಾಗ ವಿಲಾಸ, ೧೯೬೫, ಕುಮಾರ ಗಂಧರ್ವ ಸಂಗೀತ ಅಕಾಡೆಮಿ– ದೇವಾಸ, ಮಧ್ಯಪ್ರದೇಶ.

ಕೃಷ್ಣಮೂರ್ತಿ ಭಟ್, ಉತ್ತರ ಕನ್ನಡ ಜಿಲ್ಲೆಯ ಶಾಸ್ತ್ರೀಯ ಸಂಗೀತದ ಬೆಳವಣಿಗೆ(ಅಪ್ರಕಟಿತ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೨೦೦೦.

ಕೃಷ್ಣರಾಯ ಆ.ನ.(ಸಂ) ಭಾರತೀಯ ಕಲಾದರ್ಶನ, ೧೯೯೪, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, ಬೆಂಗಳೂರು.

ಕೃಷ್ಣರಾವ್ ಯು.ಎಸ್., ಸಂಗೀತ ಮತ್ತು ನೃತ್ಯ, ೧೯೯೨, ಪ್ರಸಾರಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಚಂದ್ರಶೇಖರ ಕಂಬಾರ, ಈವರೆಗಿನ ಹೇಳತೇನ ಕೇಳ, ೨೦೦೨, ಅಕ್ಷರ ಪ್ರಕಾಶನ, ಹೆಗ್ಗೋಡು.

ಜವರೇಗೌಡ ದೇ., ಕನ್ನಡ ಸಂಸ್ಕೃತಿ, ೨೦೦೧, ಬೆಂಗಳೂರು ವಿಶ್ವ ವಿದ್ಯಾಲಯ, ಬೆಂಗಳೂರು.

ಜ್ಯೋತಿಲಕ್ಷ್ಮಿ ಡಿ.ಪಿ., ಹಿಂದೂಸ್ತಾನಿ ಸಂಗೀತಕ್ಕೆ ಗ್ವಾಲಿಯರ್ ಘರಾಣೆಯ ಕೊಡುಗೆ(ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ), ಕಲ್ಯಾಣ್ ಲಿಟರರಿ ಪಬ್ಲಿಷರ್ಸ್, ಕಲಬುರಗಿ,

ತಿಪ್ಪೇರುದ್ರಸ್ವಾಮಿ ಹೆಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ೧೯೯೭, ಡಿವಿಕೆ ಮೂರ್ತಿ ಪ್ರಕಾಶನ, ಮೈಸೂರು.

ತಿಪ್ಪೇಸ್ವಾಮಿ ಜಿ.ಆರ್., ದಾಸ ಸಾಹಿತ್ಯ ಮತ್ತು ಜಾನಪದ, ೧೯೯೭, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡಮಿ, ಬೆಂಗಳೂರು.

ದೀಪಕ್ ಎಸ್.ರಾಜ, ಶೈಲಜಾ, ಟಿ.ಎಸ್.ವೇಣುಗೋಪಾಲ್, ೨೦೧೫, ರಾಗಮಾಲ, ಮೈಸೂರು.

ನರಸಿಂಹಸ್ವಾಮಿ ಕೆ.ಎಸ್., ಮೈಸೂರು ಮಲ್ಲಿಗೆ, ೧೯೯೬, ಅಶೋಕ ಸಾಹಿತ್ಯ, ಬೆಂಗಳೂರು.

ನರಸಿಂಹಮೂರ್ತಿ ಎ.ವಿ.(ಅನು), ವೇದಯುಗ, ೧೯೯೭, ಭಾರತೀಯ ವಿದ್ಯಾಭವನ, ಬೆಂಗಳೂರು.

ನರಹಳ್ಳಿ ಬಾಲಸುಬ್ರಹ್ಮಣ್ಯ, ಜಿ.ಎಸ್.ಎಸ್., ಹೆಚ್.ಎಸ್.ವಿ.(ಸಂ), ತಂಬೂರಿ, ೧೯೯೯, ಅಶ್ವತ್ ಅಭಿನಂದನ ಸಮಿತಿ, ಬೆಂಗಳೂರು.

ನರಹಳ್ಳಿ ಬಾಲಸುಬ್ರಹ್ಮಣ್ಯ, ಪರಮೇಶ್ವರ ಭಟ್ಟ ಎಸ್.ವಿ., ಭಾವಗೀತೆ, ೧೯೮೧, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ನಂದಾ ಎಂ.ಪಾಟೀಲ, ಬಸವರಾಜ ರಾಜಗುರು, ೨೦೦೯, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ನಾಗರತ್ನ ಟಿ.ಎನ್.(ಸಂ), ಹರಿದಾಸರ ಜನಪ್ರೀಯ ಹಾಡುಗಳು, ೧೯೯೬.

ನಾಗರಾಜ ಹವಾಲ್ದಾರ, ಬದಲಾಗುತ್ತಿರುವ ಕಾಲಘಟ್ಟದಲ್ಲಿ ಶಾಸ್ತ್ರೀಯ ಸಂಗೀತ, ಮಂಟಪ ಮಾಲೆ–೨೦೦, ೨೦೧೦, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ನಾಗರಾಜರಾವ್ ಹವಾಲ್ದಾರ, ಎಂ.ಎ.ಜಯರಾಮ್‌ರಾವ್, ಎಂ.ಆರ್.ಸತ್ಯನಾರಾಯಣ(ಸಂ.) ಕರ್ನಾಟಕ ಕಲಾವಿದರು ಹಿಂದೂಸ್ಥಾನಿ ಸಂಗೀತ(ಪರಿಚಯ ಗ್ರಂಥ) ಕ.ಸಂ.ನೃ. ಅಕಾಡೆಮಿ, ಬೆಂಗಳೂರು.

ನಾಗರಾಜರಾವ್ ಹೆಚ್.ಎಮ್., (ಸಂ), ವಿಜಯಗಾನ, ೨೦೦೧, ಜೈಶಂಕರ್ ಯು ।ಸಂ। ಉಳವೆ ಬೈಲು, ಶೃಂಗೇರಿ(ತಾ).

ನಾರಾಯಣರಾವ್ ಜಿ.ಟಿ., ಸಂಗೀತ ರಸ ನಿಮಿಷಗಳು.

ನಾ. ಸೋಮೇಶ್ವರ, ಸ್ವರಾಧಿರಾಜ, ಉಪೇಂದ್ರ ಬಾ.ಹ.(ಸಂ), ಭಾರತ ರತ್ನ ಪಂಡಿತ್ ಭೀಮಸೇನ ಜೋಶಿ, ೨೦೧೫, ಕಟಗೇರಿ ನ.ಹ., ಧಾರವಾಡದ ಮರೆಯಲಾಗದ ಮಹನೀಯರು.

ನಿಸಾರ ಅಹ್ಮದ್ ಕೆ.ಎಸ್., ನಿತ್ಯೋತ್ಸವ, ೧೯೯೬, ಶ್ರೀ ಪ್ರೇಮಸಾಯಿ ಪ್ರಕಾಶನ, ಬೆಂಗಳೂರು.

ಪಾಟೀಲ ಎ.ಯು., ಸಂಗೀತ ಶಾಸ್ತ್ರ ದರ್ಪಣ, ೧೯೭೮, ಕರ್ನಾಟಕ ವಿಶ್ವವಿದ್ಯಾಲಯ,

ಪುಟ್ಟರಾಜ ಗವಾಯಿಗಳು, ಸಂಗೀತ ಶಾಸ್ತ್ರ ವಿಜ್ಞಾನ.

ಪುಂಡರೀಕ ವಿಠ್ಠಲ, ಸತ್ಯನಾರಾಯಣ ರಾ.(ಅನು), ೧೯೮೬, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ಪ್ರಕಾಶ್ ಗರುಡ, ಕೆ.ವಿ.ಸುಬ್ಬಣ್ಣ, ೨೦೦೦, ಪ್ರಸಾರಂಗ,ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪ್ರಭಾ ಅತ್ರೆ, ಸದಾನಂದ ಕನವಳ್ಳಿ(ಅನು) ಶೋತೃವಿಗೆ ಅರಿವು, ೨೦೧೨, ಕಣ್ವ ಪ್ರತಿಷ್ಠಾನ,

ಬೆಂಗಳೂರು.

ಪ್ರಭುಶಂಕರ, ಕನ್ನಡದಲ್ಲಿ ಭಾವಗೀತೆ, ೨೦೦೦, ಡಿವಿಕೆ ಮೂರ್ತಿ ಪ್ರಕಾಶನ, ಮೈಸೂರು.

ಬಾಲಕೃಷ್ಣ ರಾವ್ ಜಿ. ಪರಾಂಜಪೆ(ಪ್ರ.ಸಂ.), ಗುರುಶಾಂತ ಚೇತನ ಚತುರ್ ದಶಮಾನೋತ್ಸವ ಸ್ಮರಣ ಸಂಚಿಕೆ, ೨೦೦೪, ಸಂಗೀತ ಸೇವಾ ಸಮಿತಿ, ಸೊರಬ.

ಬಿಂಧುಮಾಧವ ಪಾಠಕ್, ಭಾರತೀಯ ಸಂಗೀತದ ಚರಿತ್ರೆ, ೧೯೭೫, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಭಾರತಿ ಕೆ. ನಾಯಕ, ಆಧುನಿಕ ಕಾಲದಲ್ಲಿ ಹಿಂದೂಸ್ತಾನಿ ಸಂಗೀತ ಘರಾಣೆಗಳ ಔಚಿತ್ಯ: ಒಂದು ಅಧ್ಯಯನ, ಪ್ರಕಾಶಕರು: ಶ್ರೀ ಪ್ರಕಾಶ ಭಟ್ಟ, ಇಳಕಲ್.

ಭಾಸ್ಕರ್ ಚಂದಾವರ್ಕರ್, ವೈದೇಹಿ(ಅನು), ಸಂಗೀತ ಸಂವಾದ, ೧೯೯೯, ಅಕ್ಷರ ಪ್ರಕಾಶನ, ಹೆಗ್ಗೋಡು(ಸಾಗರ).

ಭಾಸ್ಕರ ಹೆಗಡೆ, ಮುತ್ತಿಗೆ, ತಾರೆ ಗಿನಗಿನ ಹಿಂದೂಸ್ತಾನಿ ಕಲಾವಿದರ ದರ್ಪಣ, ೨೦೧೨, ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ವಿದ್ಯಾಲಯ(ರಿ), ಚಾಮರಾಜಪೇಟೆ, ಸಾಗರ.

ಮತಂಗ ಮುನಿ, ಸತ್ಯನಾರಾಯಣ ರಾ(ಅನು), ಬೃಹದ್ದೇಶೀ, ೧೯೯೮, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮೀನಾಕ್ಷಿ ಡಿ., ನಾಡೋಜ ಡಾ. ಗಂಗೂಬಾಯಿ ಹಾನಗಲ್, ೨೦೧೧, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮೀರಾ ಶಿವಶಂಕರ ಗುಂಡಿ, ಉತ್ತರ ಕರ್ನಾಟಕದಲ್ಲಿ ಬೆಳೆದು ಬಂದ ಹಿಂದೂಸ್ತಾನಿ ಸಂಗೀತ ಘರಾಣೆಗಳ ಒಂದು ಅಧ್ಯಯನ(ಅಪ್ರಕಟಿತ ಮಹಾ ಪ್ರಬಂಧ).

ಮೃತ್ಯುಂಜಯಸ್ವಾಮಿ ಪುರಾಣಿಕಮಠ, ಹಿಂದೂಸ್ತಾನಿ ಸಂಗೀತ.

ರತ್ನಾ ಶಿವಶಂಕರ(ಅನು), ಸಂಗೀತ–ಧ್ವನಿ–ವಿಜ್ಞಾನ, ೧೯೭೮, ಪ್ರಸಾರಂಗ, ಬೆಂಗಳೂರು ವಿಶ್ವ ವಿದ್ಯಾಲಯ, ಬೆಂಗಳೂರು.

ರಾಜಗೋಪಾಲಾಚಾರ್ಯ ಎಂ., ದಾಸ ಸಾಹಿತ್ಯದಲ್ಲಿ ದೈವದರ್ಶನ–ಸಂಗೀತದ ಮೌಲ್ಯ, ೧೯೯೧, ಗುಲ್ಬರ್ಗಾ ವಿಶ್ವವಿದ್ಯಾನಿಲಯ, ಗುಲ್ಬರ್ಗಾ.

ರಾಜೀವ ಪುರಂದರೆ, ರಾಗ ದರ್ಶನ, ತಬಲಾ ಶಾಸ್ತ್ರ ವಿಶಾರದ, ಕರ್ನಾಟಕ ವಿಶ್ವವಿದ್ಯಾಲಯ– ಧಾರವಾಡ.

ರಾಜೀವ್ ಹಿರೇಮಠ, ಸಂಗೀತ ಸಂಜೀವಿನಿ, ೨೦೦೧, ರಾಸಂಚಿ ಪ್ರಕಾಶನ, ಧಾರವಾಡ.

ರಾಮಚಂದ್ರರಾವ್ ಎಸ್.ಕೆ., ಸಂಗೀತ ಇತಿಹಾಸ ಪರಂಪರೆ, ದ್ವಿತೀಯ ಮುದ್ರಣ ೧೯೯೩,

ಪ್ರಸಾರಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ರಾಮರತ್ನಂ ವಿ., ಕರ್ನಾಟಕ ಸಂಗೀತ ದೀಪಿಕೆ, ೨೦೦೦, ಪ್ರಸಾರಂಗ, ಬೆಂಗಳೂರು ವಿಶ್ವ ವಿದ್ಯಾಲಯ, ಬೆಂಗಳೂರು.

ಲಕ್ಷ್ಮೀನಾರಾಯಣ ಗರ್ಗ, ಹಮಾರೆ ಸಂಗೀತ ರತ್ನ, ಸಂಗೀತ ವಿಶಾರದ, ಹಾಥರಸ್.

ಲಕ್ಷ್ಮೀನಾರಾಯಣ ಭಟ್ಟ ಎನ್.ಎಸ್., (ಸಂ), ಶಿಶುನಾಳ ಶರೀಫ ಸಾಹೇಬರ ಗೀತೆಗಳು, ೧೯೯೩, ಕ್ಷಮಾ ಪ್ರಕಾಶನ ಬೆಂಗಳೂರು.

ಲೀಲಾವತಿ ಹೆಚ್.ಆರ್.,ಸುಗಮ ಸಂಗೀತ; ಒಂದು ಸಿಂಹಾವಲೋಕನ, ೧೯೯೭, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಬೆಂಗಳೂರು.

ವಿಷ್ಣುನಾಯಕ (ಸಂ) ಗಿರೀಶ ಕಾಯ್ಕಿಣಿ ಸಮಗ್ರ ಸಾಹಿತ್ಯ, ೧೯೯೯, ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲ.

ವಿಷ್ಣುನಾರಾಯಣ ಭಾತಖಂಡೆ, ಕ್ರಮಿಕ ಪುಸ್ತಕ ಮಾಲಿಕಾ, ಹಿಂದೂಸ್ತಾನಿ ಸಂಗೀತ ಪದ್ಧತಿ, ಸಂಗೀತ ಕಾರ್ಯಾಲಯ, ಹಾಥರಸ್.

ಶರಚ್ಚಂದ್ರ ಶ್ರೀಧರ ಪರಾಂಜಪೆ, ಸಂಗೀತ ಶೋಧ, ಭಾರತೀಯ ಸಂಗೀತ ಕಾ ಇತಿಹಾಸ.

ಶಶಿಕಲಾ ವ್ಹಿ. ಚವಡಿ, ಸಂಗೀತ ಸಂಪುಟ.

ಶಾಸ್ತ್ರೀ ಬಿ.ವಿ.ಕೆ.(ಸಂ), ಕಲೆಯ ಗೊಂಚಲು, ೧೯೯೪, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ಶಿವರುದ್ರಪ್ಪ ಜಿ.ಎಸ್., ಎದೆತುಂಬಿ ಹಾಡಿದೆನು, ೧೯೯೮, ಕಾಮಧೇನು ಪ್ರಕಾಶನ, ಬೆಂಗಳೂರು.

ಶೇಷಗಿರಿರಾವ್ ಎಲ್.ಎಸ್., ಬಿ.ಆರ್.ಎಲ್., ಹೆಚ್.ಎಸ್.ವಿ.(ಸಂ), ನೀಲಾಂಜನ, ೧೯೯೬, ಎನ್.ಎಸ್.ಎಲ್.ಭಟ್ಟ ಅಭಿನಂದನ ಸಮಿತಿ, ಬೆಂಗಳೂರು.

ಶೇಷಗಿರಿರಾವ್ಎಲ್.ಎಸ್., ಹೊಸಗನ್ನಡ ಸಾಹಿತ್ಯ ಚರಿತ್ರೆ, ೧೯೯೯, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

ಸತ್ಯನಾರಾಯಣರಾವ್, ಕರ್ನಾಟಕ ಸಂಗೀತ ವಾಹಿನಿ.

ಸದಾನಂದ ಕನವಳ್ಳಿ, ಭಾರತರತ್ನ ಭೀಮಸೇನ ಜೋಶಿ, ೨೦೧೩, ಕರ್ನಾಟಕ ಸಾಹಿತ್ಯ ಪರಿಷತ್ತು, ಬೆಂಗಳೂರು, ಕರ್ನಾಟಕದ ಹಿಂದೂಸ್ತಾನಿ ಸಂಗೀತಗಾರರು.

ಸರ್ಫ್ರಾಜ್ ಚಂದ್ರಗುತ್ತಿ, ಸುಗಮ ಸಂಗೀತ ಮತ್ತು ಕನ್ನಡ ಆಧುನಿಕ ಕವಿತೆ, ೨೦೦೭, ಸಹಾನ ಪ್ರಕಾಶನ.

ಸಿದ್ಧರಾಮಯ್ಯ ಮಠಪತಿ ಗೋರಟಾ(ಸಂ), ನಾದ ಲಹರಿ, ಹಿಂದೂಸ್ತಾನಿ ಸಂಗೀತ ಲೇಖನಗಳು, ೨೦೦೮, ಕರ್ನಾಟಕ ಸಂಗೀತ ಅಕಾಡಮಿ,ಬೆಂಗಳೂರು., ಹಿಂದೂಸ್ತಾನಿ ಸಂಗೀತಗಾರರು,

ಸಂಪುಟ ೧ ಮತ್ತು ೨.

ಸೋಮನಾಥ ಪಂಡಿತ, ರಾಗ ವಿಬೋಧ, ಮಹೇರಚಂದ್ರ ಲಕ್ಮಣದಾಸ ಪುಸ್ತಕಾಲಯ, ಲಾಹೋರ.

ಹರೀಂದ್ರ ಡಿ.ಬಿ., ಹಿಂದೂಸ್ತಾನಿ ಸಂಗೀತ, ೧೯೯೮, ಪ್ರಸಾರಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಹಿರೇಮಠ ವಿ.ಬಿ.,(ಸಂ), ಜ್ಞಾನದೇಗುಲ, ಪುಟ್ಟರಾಜ ಗವಾಯಿಗಳ ಅಭಿನಂದನ ಗ್ರಂಥ.

Adya Rangacharya, The Natyashastra – English Translation,1996, Munshiram Manoharlal Publishers, New Delhi.

Ashok D. Ranade, On Music and Mulicous of Hindustan.

Deva B.C., Musical Instruments, 1977, National Book Trust.

Gautam M.R., Evolution of Raga and Taala in Indian Music, 1989, Munshiram Manoharlal Publishers, New Delhi.

Patawardhan V.N., Raaga Vijnan (Hindi), 1955, Pandith V.N. Patawardhan Sangeeth Gaurav Granthamandal, Pune.

Raamachandran N.S., Raagas of Karnatic Music, University of Madras.

Rita Ganguly, Bismillah Khan and Banaras The seat of Shehnai,1994, Siddhi Books Imprints of Cosmo Publications, India.

Roshmi Goswami, (edited), Man and Music, 1992, Munshiram Manoharlal Publishers, New Delhi.

Subbarao B., Raagha Nidhi, 1956, Vishnu Digambar Smarak Samiti, Poona.

Swami Prajnanandha, Historical Developments of Indian Music,Culcatta.

Swatantra Sharma, Comparative Study of Evaolution of Music in India and the West,1997, Prathibha Prakashana,Delhi.

Thite G.U., Music in the Vedhas Its Magico- Religious Significance, 1997, Sharada Publishing House, Delhi.

Vamanarao H. Deshpande, Indian Musical Traditions, 1973, Popular Prakashan, Bombay.

